ಮುದ್ರಕರು —
**ಪಿ. ಎಸ್. ಹೊಂಬಾಳಿ,**
ನ್ಯೂ ಗದಗ ಪ್ರಿಂಟರಿ, ಗದಗ.

## ಮುಂದಿನ ಪ್ರಕಟನೆಗಳು

ಪಾಂಚಾಲಿ .... .... ಸತ್ಯಕಾಮ

ಮರಣದಾಚೆ .... .... ರಾಜ

ಅಂತರ್ದೃಷ್ಟಿ .... .... ರಾ. ರಾ. ಹೆಬ್ಬು

ಪ್ರಕಾಶಕರು —
**ಸಮನ್ವಯ ಪ್ರಕಾಶನ,**
೧೫೫ ಗಣೇಶ ನಗರ ಸೋಲಾಪೂರ.

**ಬೆಲೆ ೨ ರೂ.**

# ರಾಜಮಾರ್ಗ

ಸಾಯುವ ವರೆಗೂ ಬದುಕಿನಲ್ಲಿ ತೊಡಕುಗಳು, ಎಂದರೆ ರಾಜರು ಸತ್ತರೂ ತೊಡಕು ಎನ್ನುತ್ತಾರೆ.

ಸಾಮಾನ್ಯ ದೃಷ್ಟಿಯಲ್ಲಿ ಬದುಕಿಗೆ ತೊಡಕಿರುವುದು ಕಂಡರೆ, ರಾಜರಿಗೆ ತೊಡಕಿಗೂ ಒಂದು ಬದುಕಿದೆ ಎಂದು ತೋರಿದೆ. ಮಲಗಿರುವ ತೊಡಕುಗಳನ್ನು ಕೆಣಕಿ ಮೈಮೇಲೆಹಾಕಿಕೊಂಡು ಬಿಡಿಸುವದರಲ್ಲಿ ತಿಣುಕಾಡುವದನ್ನು ರಾಜರು ಜೀವಕೊಪ್ಪಿದ ದಾರಿಯನ್ನುವದಿಲ್ಲ ಜಗತ್ತಿನಲ್ಲಿ ಎಚ್ಚತ್ತ ಕೆಡಕು ಯಾವುದೂ ಇಲ್ಲ. ಮಾನವನೆ ಅದನ್ನು ಎಚ್ಚರಿಸಿ ಮೊದಲು ತಾನು ಈಡಾಗಿ ತನಗೆ ಮಿಕ್ಕಿದಾಗ ಇತರರನ್ನು ಅದಕ್ಕೀಡು ಮಾಡುತ್ತಾನೆ.

'ತೊಡಕುಗಳನ್ನು ಕೆರಳಿಸದೆ ಸಾಗಿದ ಬದುಕು ಎಂದಿಗೂ ಕೆಡಕು ಕಾಣಲಿಲ್ಲ' ಎನ್ನುವದು ಮೋಡದಾಚೆಯ ಬೆಳಕು. ತೊಡಕು ಬಿಡಿಸುವ ಎತ್ತುಗಡೆಯೊಂದಿದೆ ಎಂದು ಒಮ್ಮೆ ಅನಿಸಿದರೆ, ಅದಃ ಬದುಕೇ ಹೊರತು ಬುದ್ಧಿ 'ಗಿದ್ಧಿ' ಯಲ್ಲ ಎಂಬುದು ರಾಜ ನಿರ್ಣಯ.

ಸಾಮಾನ್ಯ ಬದುಕಿನ ಅಸಾಮಾನ್ಯ ಸ್ತರವೊಂದನ್ನು ಗುರುತಿಸಿ ಪರಿಚಯ ಮಾಡಿಕೊಡುವದೇ ಇಂದು ಬಹು ದೊಡ್ಡ ಕೆಲಸವಾಗಿದೆ. ನಮ್ಮ ನೆಲೆಯರಿಯದೆ ಇನ್ನೊಬ್ಬರ ಬೆಲೆಕಟ್ಟುವ ದಿವಸದಲ್ಲಿ ಇದು ಹೀಗೆ ಎನ್ನುವದೆಂದೂ 'ಹಾಗಿ' ರಲಾರದೆಂಬ ಸತ್ಯವನ್ನೂ ರಾಜರು ನುಡಿದಿದ್ದಾರೆ.

ಬದುಕಿನ ಹೊಸಬಲವನ್ನು ಗುರುತಿಸುವ ಈ ರಾಜಕಾರ್ಯವು ಸಾಹಿತ್ಯದಲ್ಲಿ ಏಕಾಂಗಿಯಾಗಿದೆ. ಧರ್ಮದ ಪ್ರಕೃತಿ, ದೇವನ ಪ್ರತ್ಯಯದೊಡನೆ ಸುಖಪದ ನಿರ್ಮಿಸುವ ಜೀವನ ವ್ಯಾಕರಣ ಸಿದ್ಧಾಂತವನ್ನು ರಾಜರು ನಿರೂಪಿಸಿದ್ದಾರೆ. ಹೊರಚಟಕ್ಕೆ ಸೋಲದ ಮನಸ್ಸಿನ ಮಟ್ಟ ಈ ರಾಜಯೋಗ ಕೌಶಲ್ಯ ಅರಿಯಬಲ್ಲದು. ಬದುಕಿನ ಈ ವಿಶಿಷ್ಟ ಸ್ತರವನ್ನು ಜಿಜ್ಞಾಸೆಗೆ ಒಳಪಡಿಸದೆ ಬಾಳಿಗೆ ಅಳವಡಿಸಬೇಕೆಂದೆ ಈ ಪುಸ್ತಕದ ಯಾವ ಪಾತ್ರವೂ ಸಾರುತ್ತದೆ. ಜಿಜ್ಞಾಸೆಯಿಂದ ಈ ಪುಸ್ತಕ ಅಭಿಯೋಗಕ್ಕೀಡಾದರೂ ಬದುಕಿನಿಂದ ಅಭಿಮಾನದ ವಸ್ತುವಾಗಿದೆ. ಕಣ್ಣು ಎಂಜಲಾಗಿರದಿದ್ದರೆ, ಜನ **ಮೋಡದ ಹಿಂದೆ** ಏನು ಎಂಬುದನ್ನು ಅರಿತಾರು. ಮೋಡದ ಹಿಂದೆ ಇರುವ ರಾಜಶಕ್ತಿಗೆ ನನ್ನದೂ ನಮಸ್ಕಾರವು.

— ಸತ್ಯಕಾಮ

## ರಾಜಮಾತು

**'ನೋಡದ ಹಿಂದೆ'** ಒಂದು ಹೊಸ ದಾರಿಯಿಂದ ಸಾಗಿದ ಒಂದು ಹೊಸ ಪುಸ್ತಕ ಇಲ್ಲಿ ಪಾಧ್ಯಾನ್ಯತೆ ಕತೆಗಿಲ್ಲ. ಭಾವನೆಗಳ ತುಮುಲ ಹೋರಾಟದಲ್ಲಿ ಸಿಡಿದೆದ್ದ, ಪುಡಿದೆದ್ದ ಕಿಡಿಗಳುಒಂದಕ್ಕೊಂದು ಬೆಸೆದುಕೊಂಡು ಸಾಲುಗೊಂಡಿವೆ ಪುಟ ಪುಟಗಳಲ್ಲಿ. ವ್ಯಕ್ತಿಯ ಹೃದಯದಲ್ಲಿ ತುಂಬಿದ ಭಾವನೆ ಹೊರಚೆಲ್ಲಿ ಹೊಳೆಯಾಗಿ ಹರಿದಿದೆ. ಮಳೆಗಾಲದಲ್ಲಿ ನೆರೆಬಂದಿದೆ,ಬೇಸಿಗೆಯಲ್ಲಿ ಗುಪ್ತಗಾಮಿಯಾಗಿದೆ. ಹೊಳೆ ಸಮುದ್ರವನ್ನು ಸಂಧಿಸುವಲ್ಲಿ ವಿಸ್ತಾರವಾಗಿದೆ ತುಂಬಿದ ಹೃದಯದಂತೆ. ಆದರೆ ಎಲ್ಲಯೂ ಹೊಳೆ ಬತ್ತಿ ಹಳ್ಳವಾಗಿಲ್ಲ.

'ಹೆಣ್ಣು ಎಂದರೆ ಮಣ್ಣಿನ ಮಡಿಕೆ; ಒಮ್ಮೆ ಒಡೆದರೆ ಮುಗಿಯಿತು' ಎಂದೇ ನಮ್ಮವರ ಭಾವನೆ, ವಿಚಾರ. 'ಇದು ಸತ್ಯವಲ್ಲ ಜೀವವಿದ್ದ ಜೀವಕ್ಕೆ ಪ್ರತಿಯೊಂದು ಕ್ಷಣವೂ ಉದ್ಧಾರದ ಸುಮುಹೂರ್ತ' ಎಂದು ಈ ಪುಸ್ತಕ ಸಾರಿಹೇಳುತ್ತದೆ. ಸ್ತ್ರೀ ಭೋಗದ ಹೆಣ್ಣಲ್ಲ. ಭಕ್ತಿ ಭೋಗಗಳಿಗೆ ಜನ್ಮದಾತ್ರಿ. ಜಗನ್ಮಾತೆ. ರಾಮ ಕೃಷ್ಣರಿಗೆ ಜನ್ಮನಿತ್ತ ಕೌಸಲ್ಯೆ ದೇವಕಿಯರನ್ನೇ ನಮ್ಮ ಸುತ್ತುಮುತ್ತಲಿನ ಸ್ತ್ರೀಯರಲ್ಲಿ ಕಾಣಬೇಕು. ಎದುರುಮನೆಯ ಸುಂದರ ತರುಣಿ ಕಂಡವರ ಭೋಗ್ಯವಲ್ಲ ರಾಮನಿಗೆ ಜನ್ಮಕೊಡುವ ಕೌಸಲ್ಯೆ. ಈ ಭಾವನೆ ನಮ್ಮಲ್ಲಿ ಬೆಳೆದು ಬರಬೇಕು. ಕವಿ, ಲೇಖಕ, ಕಲಾವಿದ ತನ್ನ ತಾಯಿಯನ್ನು ಮಾರಿ ಹೊಟ್ಟೆ ತುಂಬಿಕೊಳ್ಳುವ ಹೀನ ಹವ್ಯಾಸವನ್ನು ಬಿಡಬೇಕು. ಏಕೆಂದರೆ ಸ್ತ್ರೀಶಕ್ತಿ, ತಾಯಿ. ಅವಳಿಂದಲೇ ಜಗದ ಜನನ. ಇದನ್ನು ಅರಿತು ಒದುವ ವಾಚಕರಿಗೆ ಇದರ ಅರಿವಾಗುವದು. ಪತ್ತೆದಾರಿ ಓದುವವರು ಇದರ ದಾರಿಬಿಡುವದು ಒಳಿತು. ಏಕೆಂದರೆ ಅವರಿಗೆ ಇದು ನೀರಸ, ನಿರರ್ಥಕ.

**'ನೋಡದ ಹಿಂದೆ'** ಬರೆಯುವಾಗೆಲ್ಲ ಸ್ಫೂರ್ತಿಕೊಟ್ಟ ಸೌ. ಪದ್ಮಾ ತಂಗಿ ಸಿಂಧು ಇವರನ್ನು ನೆನೆಯಲೇಬೇಕು. ಅದರಂತೆ ಶಾಂತನ ಉಪಕಾರ ಅನಂತ. ಪುಸ್ತಕದ ಅಚ್ಚಿನ ಕಾರ್ಯದಲ್ಲಿ ನನ್ನ ಬೆನ್ನೆಲಬಾದ ಸ್ನೇಹಿ ಗುರುಸಿದ್ದಪ್ಪ ಆರ್. ಬೋರಾಮಣಿಯವರಿಗೆ ನಾನು ಋಣಿ. ಎಂದಿನಿಂದಲೂ ನನ್ನ ಎಲ್ಲ ಕಾರ್ಯಗಳಲ್ಲಿಯೂ ನಾನೇ ತಾವಾಗಿ ನನ್ನ ಕಾರ್ಯ ಮಾಡುವ ಗೆಳೆಯ ಆರ್. ಎಸ್. ಬೀಡಿ, ( ಪಾಪಾ ) ಮತ್ತು ವಸಂತ ಪಾಟೀಲರನ್ನು ನೆನೆಯದೆ ಇರಲಾರೆ. ಅಚ್ಚಿನ ತಿದ್ದುಪಡಿಯ ಸರ್ವಭಾರವನ್ನೂ ಹೊತ್ತ ಶ್ರೀ ಪದ್ಮಣ್ಣಾ ಹೊಂಬಾಳಿಯವರಿಗೂ ನಾನು ಆಭಾರಿ.

೭ – ೧೨ – ೫೫ — ರಾಜ

# ಮೋಡದ ಹಿಂದೆ

೧

ನನ್ನದೂ ಮಗು ಬದುಕಿದ್ದರೆ ....... ?

ಬದುಕು ಬಾಳು ದೈವಾಧೀನವೆನ್ನುವದು ಬಾಳು ಮುಗಿದ ನಂತರ ಹೇಳುವ ಮಾತು. ನಿರಾಶೆಯ ಜ್ವಾಲಾಮುಖಿ ಸ್ಫೋಟವಾಗಿ ಲಾವಾರಸ ಉಕ್ಕಿ ಹರಿದಾಗ ಉಸಿರುವಲುಸಿರು ....

ನನ್ನ ಮಗು ಬದುಕಿದ್ದರೆ ........ ?

ಈ ಪ್ರಶ್ನೆ ಕೇಳುವದಾರಿಗೆ ? ನನ್ನನ್ನು ನಾನು ಕೇಳಿಕೊಳ್ಳಬೇಕು. ಮಗು ನನ್ನದು. ಮಗುವಿನ ತಾಯಿ ನಾನು. ಒಂಬತ್ತು ತಿಂಗಳು ಅನಂತ ದುಃಖ, ಕಷ್ಟಯಾತನೆಯಲ್ಲಿ ಕೂಡ ಹೊತ್ತು ಬೆಳೆಸಿದವಳು ನಾನು. ಆದರೆ ........

ಆದರೆ .... ಹೊತ್ತು ಬೆಳೆಸಿದ ಹೆತ್ತ ಕರುಳಿನ ಕತ್ತನ್ನು ಹಿಸುಕಿದವಳೂ ನಾನು.

ನಾನು .... !

ಅಹುದು ನಾನು ! ನಾನು ... ಈ ಕ್ರೂರ ಹಸ್ತಗಳು ನನ್ನ ಮಗುವಿನ ನೆತ್ತರದಿಂದ ರಂಜಿತವಾಗಿವೆ. ನನ್ನ ಮಗುವಿನ ರಕ್ತ ರಂಜಿತ ಹಸ್ತಗಳು ನನ್ನ ದೇಹಕ್ಕೆ ಭಾರವಾಗಿವೆ. ಕೊಲೆಗಾರ ಕೈಗಳನ್ನು ಕತ್ತರಿಸುವ ಕೋಪ ನನ್ನಲ್ಲಿ. ಆದರೆ ಕೈ ಕತ್ತರಿಸುವದಕ್ಕೂ ಕೈಗಳು ಬೇಕಲ್ಲವೆ ?

ನನ್ನ ಮಗುವೂ ಬದುಕಿದ್ದರೆ .... ?

ಆ ವಿಚಾರ ಕೂಡ ಅಸಹ್ಯ ಸತ್ತವರಿಗಾಗಿ ಇದ್ದವರು ಚಿಂತಿಸಿದರೆ ಇದ್ದವರೂ ಸತ್ತವರ ದರ್ಶನಕ್ಕೆ ಧಾವಿಸಬೇಕಾಗುವದು. ! ಹಾಗೆಂದು ಹೆತ್ತ ಕರುಳನ್ನು ಮರೆಯಲಾದೀತೆ? ಹೆಣ್ಣಿಗೆ ಜೀವನದಲ್ಲಿ ಒಂದೇ ಒಂದಾದ ಹಿರಿದಾದ ಆಶೆ–ತಾಯ್ತನ

ಅವಳು ಗಂಡನ್ನು ಅಪೇಕ್ಷಿಸುವದು ತಾರುಣ್ಯದ ಹುಚ್ಚು ಹುಮ್ಮಸ ದಲ್ಲಿ. ತಾರುಣ್ಯದ ನೆರೆ ಇಳಿದಾಗ ಅವಳು ಬಾಳುವದು ತಾಯಿಯಾಗಿ. ಹಿಂದಿನಿಂದ ಇಂದಿನ ವರೆಗೆ ಅದೆಂದಿನವರೆಗೂ ಇದು ಸತ್ಯ ಹೆಣ್ಣಿನ ಜೀವನದ ಸಾಫಲ್ಯ ತಾಯಿಯಾಗುವದರಲ್ಲಿ. ಮುದ್ದು ಮಗು ತಾಯಿಯ ಉಡಿಯಲ್ಲಿ ಮಲಗಿ ಬೀರಿದ ಮುಗುಳ್ನಗೆ ಅದುವೇ ಅಮೃತ. ಆ ಆನಂದವೇ ಅಮರಾನಂದ. ಸ್ವರ್ಗದಲ್ಲಿ ದೇವತೆಗಳ ಮಧ್ಯ ಕುಳಿತು ಅಮೃತ ಸೇವಿಸಿ ದರೂ ಅಮರರಾಗದವರು ಮಗುವಿನ ಮುಗುಳ್ನಗೆಯ ಅಮೃತದಿಂದ ಮತ್ತ ರಾಗುವರು. ಅಮರರಾಗುವರು. ........

ಅಂತಹ ಸೌಭಾಗ್ಯ ತಾನಾಗಿ ನಡೆದು ಬಂದಿತ್ತು. ಆದರೆ ...

ಆದರೇನು ? ಅದು ನನ್ನದಾಗಿ ಉಳಿಯಲಿಲ್ಲ. ಮೃತ್ಯುವಿನ ಕರಾಳ ಹಸ್ತ ಆ ಮಗುವಿನ ಕತ್ತನ್ನು ಹಿಸುಕಿತು.

ಅಲ್ಲ .... ಮೃತ್ಯುವಿನ ಕರಾಳ ಹಸ್ತವಲ್ಲ. ನನ್ನ ಕ್ರೂರ ಕೊಲೆಪಾತ ಕಿಯ ಕರಾಳ ಹಸ್ತ ಆ ಮಗುವಿನ ಕತ್ತನ್ನು ಹಿಸುಕಿ ಹಾಕಿತು.

ಅಂದು ಹಾಗಾಗಿರದಿದ್ದರೆ ........ ?

ಮಗು ಇಂದಿಗೂ ಬದುಕಿದ್ದರೆ ........ ?

ಉಳಿದ ಮಕ್ಕಳೊಡನೆ ಕೂಡಿ ಆಡಬಹುದಿತ್ತು ಮಕ್ಕಳ ಮಧ್ಯದಲ್ಲಿ ಶ್ರೀ ಕೃಷ್ಣನಂತಿದ್ದ ನನ್ನ ಮಗು ಕೂಡ ಮುದ್ದು ಮುದ್ದು ಪಾದಗಳಿಂದ ದುಡು ದಡು ಓಡಿಬಂದು ನನ್ನನ್ನು ಬಿಗಿದಪ್ಪಬಹುದಿತ್ತು. ಎಂದೆಂದಿಗೂ ತೀರದ ಚಿಂತೆಯಲ್ಲಿ ಮುಳುಗಿದ ನನ್ನನ್ನು ಆನಂದದ ಆಗಸದಲ್ಲಿ ವಿಹರಿಸಲು ಕರೆದುಕೊಂಡು ಹೋಗಬಹುದಿತ್ತು. ಜೀವನದ ಎಲ್ಲ ನಿರಾಶೆಯನ್ನು ಹೊಡೆದೋಡಿಸಿ ಮುಗುಳ್ನಗೆಯಿಂದ ಜಗವನ್ನೆದುರಿಸುವ ಶಕ್ತಿಯನ್ನು ತಂದು ಕೊಡಬಹುದಿತ್ತು. 'ಅಮ್ಮಾ' ಎಂದು ಕೂಗಬಹುದಿತ್ತು. ....

ಆದರೆ ........ ?

ಅದು ಹಾಗಾಗಲಿಲ್ಲ.

ಮಗು ಬದುಕಿ ಉಳಿಯಲಿಲ್ಲ ಉಳಿದು ಬಾಳಲಿಲ್ಲ. ಬಾಳಿ ನನ್ನನ್ನು ಬದುಕಿಸಲಿಲ್ಲ.

ಆದರೆ ನಾನು ಸಾಯಲಿಲ್ಲ. ನಾನು ಬದುಕಿದೆ. ನನ್ನ ಮಗುವಿನ-ನನ್ನ ಹೆತ್ತಕರುಳಿನ ಬಲಿಗೊಟ್ಟು ನಾನು ಬದುಕಿದೆ ನನ್ನನ್ನು ಬದುಕಿಸುವದಕ್ಕಾಗಿ ಜಗದ ಮುಖವನ್ನು ಕೂಡ ಕಾಣದ ಮಗು-ನನ್ನ ಮಗು ತಾನು ಬಲಿಯಾಯಿತು. ಜೀವನ್ಮೃತಳಾದ ತನ್ನ ತಾಯಿಯ ಮೇಲೆ ಅಮೃತ ಸಿಂಚನ ಮಾಡಿಸಲು ತಾನು ಸ್ವರ್ಗಕ್ಕೆ ಹೋಯಿತು.

ಮಗು – ತಾಯಿ ........

ಮಗುವಿಗಾಗಿ ಬಲಿಯಾಗುವದು ತಾಯಿಯ ಕರ್ತವ್ಯ. ತಾಯ್ತನದ ಧರ್ಮ. ತಾಯ್ತನದ ಆತ್ಮ. ಆದುವೇ ತಾಯ್ತನ.

ಆದರೆ ಮಗುವನ್ನು ಬಲಿಕೊಟ್ಟು ಬದುಕಿದ ರಾಕ್ಷಸಿ ನಾನು.

ನಾನು ತಾಯಿಯಲ್ಲ; ತಾಯಿಯಲ್ಲ.

ಅಂದು ಜಗದ ಮುಖವನ್ನು, ತಾಯಿಯ ಮುಖವನ್ನು ಕಾಣಲೆಂದು ಒಂಬತ್ತು ತಿಂಗಳು ಅಸಹನೀಯ ದುರ್ದಮ ಬಂಧನದಲ್ಲಿದ್ದು ಇನ್ನು ಜಗವನ್ನು ಕಾಣುವೆನು ಇನ್ನು ತಾಯಿಯ ಮುಖವನ್ನು ನೋಡುವೆನು ಎಂದು ಜಗದ ಬೆಳಕಿನಲ್ಲಿ ಬಂದು ಕಣ್ಣು ತೆರೆಯುತ್ತಿರುವ ಪೂರ್ವದಲ್ಲಿ .......

ಇಲ್ಲ ... ಅದು ಜಗದ ಬೆಳಕನ್ನು ಕಾಣಲಿಲ್ಲ ತಾಯಿಯ ಮುಖವನ್ನು ನೋಡಲಿಲ್ಲ.

ತಾನು ಬಂದಿರುವದನ್ನು ಸಾರಿ ಹೇಳಬೇಕೆಂದು ಪುಟ್ಟು ಮುದ್ದು ಮುಖ ತೆರೆಯುತ್ತಿರುವ ಪೂರ್ವದಲ್ಲಿಯೇ ಕರಾಳ ಮೃತ್ಯುವಿನ ಕ್ರೂರ ಹಸ್ತ ಕತ್ತಿಗೆ ಬಿಗಿಯಿತು.

ಒಂಬತ್ತು ತಿಂಗಳು ಹೊತ್ತ ತನ್ನ ತಾಯಿಯನ್ನಪ್ಪಬೇಕೆಂದು ಎತ್ತುತ್ತಿರುವ ಕೋಮಲ ಪುಟ್ಟ ಹಸ್ತ ಮೇಲಕ್ಕೇಳುವ ಮೊದಲೇ ನೆಲಕ್ಕೆ ಬಿದ್ದವು.

ಆ ಪುಟ್ಟ ಪುಟ್ಟ ಪಾದ, ಪುಟ್ಟ ಕೈ, ಚಿಕ್ಕದಾದರೂ ನೀಳವಾದ ಮೂಗು ಅದೇ ಅರೆ ತೆರೆಯುತ್ತಲಿರುವ ಕಂಗಳು.........

ನಾನು ನನ್ನ ಮಗುವನ್ನು ನೋಡಬೇಕೆನ್ನುತ್ತಿದ್ದೆ. ಆದರೆ......... ನೋಡಲಾಗಲಿಲ್ಲ .........

ಇಲ್ಲ... ನಾನು ನೋಡಲಿಲ್ಲ.

ಎಚ್ಚರವಾದಾಗ ನಾನು ಕಾಟಿನ ಮೇಲೆ ಇದ್ದೆ ಒಬ್ಬಳೇ ಇದ್ದೆ. ! ಒಬ್ಬಳು ! ಒಬ್ಬಳೇ ಒಬ್ಬಳು...... !!

ನನ್ನ ಮಗು .......... ?

ಪಿಸುಗುಟ್ಟುವ ಸ್ವರದಲ್ಲಿ ಅವಳು " ಎಲ್ಲ ಮುಗಿಯಿತು. " ಎಂದಳು.

ನಾನು ಅವಳ ಮುಖವನ್ನು ನೋಡುತ್ತಲೇ ಇದ್ದೆ.

" ನಾನು ಕುಲಕರ್ಣಿಯವರಿಗೆ ತಿಳುಹಿಸಿರುವೆ. " ಎಂದಳು ಮತ್ತೂ ಅವಳ ಮುಖವನ್ನು ನೋಡುತ್ತಲೇ ಇದ್ದೆ.

" ಏನು ? ಬಹಳ ಕಷ್ಟವಾಗತ್ತದೆಯೇ ? " ಅವಳ ಪ್ರಶ್ನೆ.

ನಾನು ಕಣ್ಣು ಮುಚ್ಚಿಕೊಂಡೆ.

ನನ್ನ ಕಣ್ಣೆದುರು ನನ್ನ ಮಗು–

" ಅಮ್ಮಾ ... ನನ್ನ ಕತ್ತು ಹಿಸುಕಗೊಡಬೇಡ " ಎಂದು ಕೀಸರಿಡುತ್ತಿತ್ತು.

ತಾಳಲಸಾಧ್ಯವಾದ ವೇದನೆ ನನ್ನಲ್ಲಿ.

"ಅಮ್ಮಾ, ನಾನು ನಿನಗೆ ಮಾಡಿದ ಅಪರಾಧವಾದರೂ ಏನು?" ಮಗುವಿನ ಪ್ರಶ್ನೆ

ಸಂಕಟದಿಂದ ತಳಮಳಿಸುತ್ತಿದ್ದೆ ನಾನು. ಏನು ಮಾಡಲಿ? ಏನು ಮಾಡಲಿ? ನಾನು ಏನು ಮಾಡಲೂ ಅಸಮರ್ಥಳಾಗಿದ್ದೆ.

ಕಾರ್ಯ ಮಿಂಚಿ ಹೋಗಿತ್ತು ....

ಮಿಂಚಿ ಹೋಗಿರದಿದ್ದರೂ ಕೂಡ ನಾನು ಏನನ್ನೂ ಮಾಡುವ ಹಾಗೆ ಇರಲಿಲ್ಲ ಹುಟ್ಟುವ ಜೀವ ಸಾಯುವದೆಂದು ನನಗೆ ಗೊತ್ತಿತ್ತು. ಅಲ್ಲ ಸಾಯುವದೆಂದಲ್ಲ; ಕೊಲ್ಲಬೇಕು ಎನ್ನುವದು ಗೊತ್ತಿತ್ತು.

ಆದರೂ ನಾನು ಏನೂ ಮಾಡುವ ಹಾಗಿರಲಿಲ್ಲ ನನ್ನಿಂದ ಏನನ್ನೂ ಮಾಡಲು ಸಾಧ್ಯವಿರಲಿಲ್ಲ

ಅದನ್ನು ಬದುಕಿಸುವದು ನನ್ನಿಂದ ಸಾಧ್ಯವಿರಲಿಲ್ಲ. ಆದರಂತೆ ಅದನ್ನು ಕೊಲ್ಲುವದೂ ಕೂಡ ನನ್ನಿಂದ ಸಾಧ್ಯವಿರಲಿಲ್ಲ

ಒಂದನ್ನು ಮಾಡದಂತೆ ಜಗ ತಡೆಯುತ್ತಿತ್ತು.

ಇನ್ನೊಂದನ್ನು ಮಾಡಬೇಡ ಎಂದು ಕರುಳು ಕೀಸರಿಡುತ್ತಿತ್ತು.

ಕರುಳಿನ ಕೀಸರಕ್ಕೆ ಕಿವಿಗೊಟ್ಟು, ಜಗದ ವಿಚಾರವನ್ನು ಬದಿಗೆ ಸರಿಸಿ, ಮಗುವಿನ ಕತ್ತಿಗೆ ಕೈಗೊಡದಿದ್ದರೆ ........ ಇಂದು ಮಗು ನನ್ನೆದುರು ನಲಿದಾಡುತ್ತಿತ್ತು. ಆದರೆ ನಾನು ........?

ನಾನು ...........?

ನನಗೇನಾಗುತ್ತಿತ್ತು? ಕೂಸಿದ ಬಲಿಗೊಟ್ಟ ನಾನು ಇಂದು ಅದಾವ ಸುಖ ಅನುಭವಿಸುತ್ತಿರುವೆ? ಆದರೆ ಸುಖದ ಆಸೆಯಿಂದ ಮಾಡಬಾರದ್ದನ್ನು ಮಾಡಿದೆ!

ಸುಖದ ಬೆನ್ನುಹತ್ತಿ ಧಾವಿಸಿದೆ

ಆದರೆ ಸುಖ ಮೃಗಜಲವಾಗಿತ್ತು. ನಾನು ಅದಕ್ಕಾಗಿ ಧಾವಿಸಿದ ಹರಿಣಿಯಾಗಿದ್ದೆ. ಧಾವಿಸಿದೆ, ಧಾವಿಸಿದೆ. ಸುಖದ ಹೊಳೆ ಹತ್ತಿರ ಬರ

ಲಿಲ್ಲ. ಕೊನೆಗೊಂದು ಕ್ಷಣದಲ್ಲಿ ಎಲ್ಲವೂ ಮಾಯವಾಯಿತು. ಕಣ್ಣಿಗೆ ಕತ್ತಲು ಬಂದಿತು..................

ಕತ್ತಲು ! ಕಾರ್ಗತ್ತಲು !

ಆ ಕಾರ್ಗತ್ತಲಲ್ಲಿ ನನ್ನನ್ನು ನಾನೇ ಕಾಣದಾದೆ.

ನನ್ನನ್ನು ನಾನು ಕಾಣಲು ಕೂಡ ಕನ್ನಡಿ ಬೇಕು ! ಬೆಳಕು ಬೇಕು! ಬೆಳಕಿನಲ್ಲಿ ಮುಖದೆದುರು ಕನ್ನಡಿ ಹಿಡಿದಾಗ ಕಾಣುವದು ನಮ್ಮ ರೂಪ-ಸ್ವರೂಪ.

ಆದರೆ ಕಾರ್ಗತ್ತಲು !!

ನನ್ನನ್ನು ನಾನು ಕಾಣಲಿಲ್ಲ. ಕಾಣಲಾಗಲಿಲ್ಲ. ಅಂತೆಯೇ ಕತ್ತಲೆಯಲ್ಲಿ ಕತ್ತಲೆಯಾಗಿ ನಾನು ನಡೆದೆ. ನಡೆದೆ ....... ನಡೆಯುತ್ತಲೇ ಇದ್ದೆ.

ಎಲ್ಲಿಗೆ ?

ಎಲ್ಲಿಯೋ ದೂರದಲ್ಲಿ ಮಿನಗಿದಂತೆ ಭಾಸವಾಗುವದರ ಕಡೆಗೆ ........

ಏಕೆ ?

ಅದಕ್ಕೆ ಉತ್ತರ ನನ್ನಲ್ಲಿ ಇಲ್ಲ.

ಉದ್ದೇಶ ?

ಉದ್ದೇಶವೆಂತಹದು ....? ಮನುಷ್ಯಪ್ರಾಣಿಗಳು ಹುಟ್ಟುತ್ತಾರೆ. ಹುಟ್ಟಿದಂದಿನಿಂದ ಸಾಯುವ ವರೆಗೆ ಸಾಗುತ್ತಲೇ ಇರುತ್ತಾರೆ..... ನಾನೂ ಮನುಷ್ಯಳು ... ನಾನೂ ನಡೆಯುತ್ತಿರುವೆ. ಅದಕ್ಕೊಂದು ಉದ್ದೇಶವೆಂದು ಇಲ್ಲ. ಏನಾದರೂ ಉದ್ದೇಶ ಇದ್ದುದೇ ಆದರೆ ಬಾಳುವದು .... ಸುಖದಿಂದ ಬಾಳುವದು. ... ಸುಖಕ್ಕಾಗಿ ಬಾಳುವದು .. ....

ಸುಖ ........

ಅದೊಂದು ಕನ್ನಡಿಯಲ್ಲಿಯ ಗಂಟು ಮನುಷ್ಯರಪಾಲಿಗೆ ಕನ್ನಡಿಯಲ್ಲಿ ಕಾಣುವ ಗಂಟಿಗಾಗಿ ಮನುಷ್ಯ ಧಾವಿಸುತ್ತಲೇ ಇರುತ್ತಾನೆ ಜನ್ಮದಿಂದ ಜನ್ಮ ಅಳಿಯುವವರೆಗೆ ....

ಆದರೂ ಸಿಕ್ಕುವದಿಲ್ಲ.

ಸಿಕ್ಕುವದು ಸಾಧ್ಯವಿಲ್ಲವೆ ........ ?

" ಅಸಾಧ್ಯವೆನ್ನುವದು ಜಗದಲ್ಲಿಲ್ಲ ಅಲ್ಲದೆ ಸಿಕ್ಕುವದಕ್ಕೆ ಸಾಧ್ಯವಿಲ್ಲದ ವಸ್ತುಗಳು ಜನ್ಮವಾಗುವದೂ ಇಲ್ಲ. " ಎಂದೂ ಹೇಳುವರು

ಸುಖವಿದೆ ಎಂದಮೇಲೆ ಅದು ಸಿಕ್ಕಲೇ ಬೇಕು. .... ಅದು ದೊರಕುವ ದೆಂದೇ ಮಾನವ ಜನಾಂಗ ಧಾವಿಸುತ್ತದೆ. .... ಧಾವಿಸುತ್ತದೆ .... ಅಂತವರಿ ಯದೆ ಧಾವಿಸುತ್ತದೆ..

ಧಾವಿಸುವ ದೇಹ ದಣಿಯುತ್ತದೆ.... ದೇಹದ ಕುದುರೆ ಅರಿಯದ ಆಸೆ ಧಾವಿಸು .... ಧಾವಿಸು ಎನ್ನುತ್ತ ಚಾಟಿಯ ಏಟು ಹಾಕುತ್ತಲೇ ಇರುತ್ತದೆ.

ದಣಿದ ದೇಹ ಚಾಟಿ ಏಟಿನಿಂದ ಮತ್ತೆ ದಣಿಯುತ್ತದೆ. ....ಮೂಲಿ ಗುಂಪಾಗುತ್ತದೆ... ನಾಶವಾಗುತ್ತದೆ.

ಇದುವೇ ಮನುಷ್ಯ ಜೀವನದ ಉದ್ದೇಶವೆ....?

" ಅಲ್ಲ "

ಆದರೆ ಮೂಢ ಮನುಷ್ಯ ಸಾಗುವದು ಮಾತ್ರ ಇದೇ ಮಾರ್ಗದಿಂದ.

ಏಕೆಂದರೆ ಲಾಲಸೆ ....... ಸುಖದ ಲಾಲಸೆ ಸ್ವಾರ್ಥದ ಲಾಲಸೆ.

ದೇಹಕ್ಕೆ ಲಾಲಸೆ ........... ಮನಕ್ಕೆ ಉತ್ಸಾಹ .... ನಿರುತ್ಸಾಹ

ದೇಹ — ಮನ ....

ದೇಹ ಮನಗಳೆರಡೂ ಕೂಡ ಸರಿಯಾದ ದಾರಿಯಲ್ಲಿ ಮುಂದುವರಿದರೆ ವ್ಯಕ್ತಿಯ ಕಲ್ಯಾಣ, ಸಮಾಜದ ಕಲ್ಯಾಣ; .... ಜಗದ ಕಲ್ಯಾಣ.

ದೇಹ ಮನಗಳೆರಡೂ ತಪ್ಪು ದಾರಿಯಲ್ಲಿ ಮುಂದೆ ಸಾಗಿದಾಗ ವ್ಯಕ್ತಿಯ ನಾಶ, ಸಮಾಜದ ಅಧೋಗತಿ; .... ಜಗತ್ತಿನ ಅಧಃಪಾತ.

ದೇಹ ಮನ ಒಂದಕ್ಕೊಂದು ವಿರುದ್ಧ ದಿಶೆಯಲ್ಲಿ ಸಾಗಿದಾಗ .... ?

ರಾಕ್ಷಸೀ ಕಸುವಿನ ದೇಹ ವಿನಾಶದತ್ತ ಎಳೆಯುತ್ತದೆ.

ಸ್ವತಹಕ್ಕೆ ಅಸ್ತಿತ್ವವಿಲ್ಲದ ಮನ ದುರ್ಬಲವಾದರೆ ಮಣ್ಣಿನ ದಾರಿ ಹಿಡಿ ಯುತ್ತದೆ.

........ ನನ್ನ ಮನಸ್ಸು ಮಣ್ಣಿನ ದಾರಿ ಹಿಡಿಯಿತು.

ದೇಹ ಅಧೋಗತಿಯ ದಾರಿಯಲ್ಲಿ ಉರುಳ ತೊಡಗಿತ್ತು.

ಅದಕ್ಕೆ ಕಾರಣರಾರು ........ ?

ಯಾರೂ ಅಲ್ಲ. ನನ್ನ ದುರ್ದೈವ. ನನ್ನ ದುರ್ದೈವ ನನ್ನನ್ನು ಅಧೋಗತಿಯತ್ತ ನರಕದತ್ತ ಎಳೆದುಕೊಂಡು ಧಾವಿಸತೊಡಗಿತು ಅದಕ್ಕೆ ತಡೆಯಿರಲಿಲ್ಲ.

ಒಂದು ಸಲ ಕಾಲು ಜಾರಿದ ಹೆಣ್ಣು ಮತ್ತೆ ಕಾಲೂರಿ ನಿಲ್ಲುವದು ಕಠಿಣ. ತಾನು ಸ್ಥಿರವಾಗಿ ಕಾಲೂರಿ ನಿಲ್ಲಬೇಕೆಂದು ಇಚ್ಛೆ ಪಡಬಹುದು. ಪ್ರಯತ್ನಿಸ ಬಹುದು. ಆದರೆ ಅವಳು ಕಾಲೂರುವದು ನೆಲದ ಮೇಲೆ ಜಗದಲ್ಲಿ. ನೆಲ ಅವಳ ತವರು ಮನೆ ಅಲ್ಲ ಜಗ ಅವಳೊಬ್ಬಳದೇ ಅಲ್ಲ. ಅವಳ ಇಚ್ಛೆಗೆ ಇನ್ನೊಬ್ಬರ ನೆರವು ಬೇಕು ಅವಳ ಪ್ರಯತ್ನಕ್ಕೆ ಇನ್ನೊಬ್ಬರು ಕೈಗೊಡಬೇಕು. ಕೈಕೊಟ್ಟು ಮೇಲಕ್ಕೆತ್ತಬೇಕು.

ಆದರೆ ಕಾಲುಜಾರಿದ ಹೆಣ್ಣಿಗೆ ಕೈಗೊಡುವ ಧೀರನಾರು ?

ಹೆಣ್ಣು 'ತಾಯಿ' ಎಂದು ಎಲ್ಲರಿಗೂ ಬೇಕು.

ಹೆಣ್ಣು 'ಹೆಂಡತಿ' ಎಂದು ಸರ್ವರಿಗೂ ಬೇಕು.

ಹೆಣ್ಣು 'ತಾಯಿ' ಯಾದ್ದರಿಂದಲೇ ಜಗ ಬಾಳುತ್ತಿದೆ.

ಹೆಣ್ಣು 'ಹೆಂಡತಿ' ಯಾಗಿರುವದರಿಂದಲೇ ಜಗ ಜನ್ಮತಾಳುತ್ತದೆ.

ಜಗದ ಜನ್ಮದಾತೆ, ಜಗದ ಪಾಲನಕರ್ತೆ, ಎಂದು ಪೂಜಿಸಿಕೊಳ್ಳುವ ಹೆಣ್ಣು ಕೊಂಚ ತಪ್ಪಿದರೂ ಕೂಡ ಎಲ್ಲರೂ ಅವಳನ್ನು ದೂಡುವರು ಮಣ್ಣು ಪಾಲು ಮಾಡುವರು. ಧೂಳಿಗೂಡಿಸಿ ಧೂಳಿ ಆಗಸವನ್ನೊಪ್ಪುವಂತೆ ಮಾಡುವರು

ಜಗ ಇಂತಹರಿಂದಲೇ ತುಂಬಿದೆ. ಆದರೂ ಯಾರಿಗೂ ಹೆಣ್ಣು ಬೇಡವಾಗಿ ಇಲ್ಲ. ಗಂಡಸೆನ್ನುವ ಜನಾಂಗಕ್ಕೆ ಹೆಣ್ಣಿಲ್ಲದೆ ಸಾಗುವ ಹಾಗೆ ಇಲ್ಲ. ಹೆಣ್ಣು ತಾಯಿಯಾಗಿ ಬೇಕು. ಹೆಣ್ಣು ಹೆಂಡತಿಯಾಗಿ ಬೇಕು .... ಇವೆರಡರಿಂದಲೇ ಗಂಡು ತೃಪ್ತನಾಗುತ್ತಿದ್ದರೆ ಜಗದಲ್ಲಿ ಅನ್ಯಾಯ ಅತ್ಯಾಚಾರ ನಡೆ

ಯುತ್ತಿರಲಿಲ್ಲ. ಜಗ ನರಕದ ದಾರಿಯಲ್ಲಿ ಮುನ್ನುಗ್ಗುತ್ತಿರಲಿಲ್ಲ. ಹೆಣ್ಣು. "ಮಸಣದ ಹೂ"ವಾಗಿ ಬಾಳುತ್ತಿರಲಿಲ್ಲ.

ನಾನೂ ಹಾಳಾಗುತ್ತಿರಲಿಲ್ಲ.

ನನ್ನ ಮಗು ಕಣ್ತೆರೆಯುವ ಪೂರ್ವದಲ್ಲಿ ಹಸಿರಾಗಿ ಹೋಗುತ್ತಿರಲಿಲ್ಲ.

ಇಲ್ಲ ... ಜಗದಲ್ಲಿ ಮನುಷ್ಯರಿಲ್ಲ ಜಗ ಕ್ರೂರ ಮೃಗಳಿಂದ ತುಂಬಿದೆ ಎಂದು ಅವಳು ಕಾಮಿನಿ ತಿರುತಿರುಗಿ ಹೇಳುತ್ತಿದ್ದಳು.

ಕಾಮಿನಿ !

ಎಂತಹ ಬಾಳು ಅವಳದು !

ಏನಿದೆ ಅವಳ ಜೀವನದಲ್ಲಿ ?

ಅವಳು ಬದುಕುವದು ಯಾರಿಗಾಗಿ ?

ಅವಳ ಜೀವನದ ಉದ್ದೇಶವೇನು ?

ಈ ಎಲ್ಲ ಪ್ರಶ್ನೆಗಳು ಉದ್ಭವಿಸುವಂತೆ ಅವಳು ಹೇಳುತ್ತಿದ್ದಳು.

" ನನ್ನ ಜೀವನಕ್ಕೊಂದು ಗೊತ್ತು ಗುರಿಯಿಲ್ಲ.......ನಾನು ಬದುಕುವದು ಇನ್ನಾರಿಗಾಗಿಯೂ ಅಲ್ಲ.... ತನ್ನ ಬಾಳು ಬರಿದಾಗಿದೆ.... ಬರಿದಾದ ಬಾಳು ಬಾಳಿ....... ? " ಎಂದು.

ಅವಳು ಮತ್ತೂ ಹೇಳುತ್ತಿದ್ದಳು.

" ನೋಡು ಸುಮಿತ್ರಾ....... ನಾನು ಜೀವನದಲ್ಲಿ ಏನನ್ನೂ ಅಪೇಕ್ಷಿಸುವದಿಲ್ಲ. ಏಕೆಂದರೆ.... ನನ್ನ ಆಶೆ ಆಕಾಂಕ್ಷೆಗಳು ಎಂದೆಂದಿಗೂ ಚಿಗುರದಂತೆ ಕಮರಿ ಹೋಗಿವೆ.... ಸುಟ್ಟು ಹೋಗಿವೆ........ ನನಗಾಗಿ ಏನೂ ಬೇಡ... ಯಾವುದೂ ಬೇಡ.... ನನ್ನ ಎಲ್ಲ ಕಾರ್ಯಗಳು ಹೆರವರಿಗಾಗಿ ಇನ್ನೊಬ್ಬರು ಸುಖಿಯಾಗುವದಕ್ಕಾಗಿ.... ನೋಡಿದಿಯಾ... ನನ್ನ ಈ ಸ ರವಾದ ಹಸ್ತಗಳನ್ನು....? ಈ ಹಸ್ತಗಳಿಂದ ನಿತ್ಯ ಸಾವಿರಾರು ಶುಶ್ರೂಷೆ ಮಾಡುವೆ. ಮೃತ್ಯುವಿನ ಮುಖದಲ್ಲಿದ್ದವರಿಗೆ ಜೀ ಮಾಡುವ ಈ ಹಸ್ತಗಳಿಂದಲೇ ನಿನ್ನ ಮಗುವಿನ ಕೊಲೆಯನ್ನು ಮಾ

"...ಸ್ತ್ರೀ ತಾಯಿ... ಅವಳ ಹೃದಯದಲ್ಲಿ ಮಮತೆಯಿದೆ. ಅವಳು ಕರುಣಾಮಯಿ....... ಮುಂತಾಗಿ ಹೇಳುವರು ಅವಳಿಗೆ... ಆದರೆ ಹಾಗೆ ಹೇಳಿಸಿಕೊಳ್ಳುವ ಸ್ತ್ರೀಯಾದ ನಾನು, ಅದೆಂದಿಗೂ ನನಗೆ ಏನನ್ನೂ ಮಾಡದೆ ಜಗತ್ತಿಗೇ ಯಾವ ರೀತಿಯ ಅಪಕಾರ ಮಾಡಿದ ಆ ನಿಷ್ಪಾಪ ಮಗುವನ್ನು ಕ್ರೂರತನದಿಂದ ಕೊಲೆ ಮಾಡಿದೆ......."

" ಏತಕ್ಕಾಗಿ......? "

" ಯಾವ ಕಾರಣವೂ ಇಲ್ಲ...... ಇದರಿಂದ ನನಗೆ ಕೆಡಕೆನ್ನಿಸುವ ದಿಲ್ಲವೆಂದು ತಿಳಿದಿರುವಿಯಾ.......?

" ಕೆಡಕೆನ್ನಿಸುತ್ತದೆ... ನನ್ನ ಮೇಲೆ ನನಗೇ ಕೋಪ ಬರುತ್ತದೆ .. ?

" ಆದರೂ ನಾನು ಕೊಲೆ ಮಾಡಿದೆ... ಸುಮಿತ್ರಾ... ಒಂದು ಬೆಳೆದ ಜೀವ ಸಾಯಬಾರದೆಂದು ಸಾಯದೆ ಸುಖಿಯಾಗಬೇಕೆಂದು ಬೆಳೆಯ ಬಯಸುವ ಜೀವದ ಕೊಲೆ ಮಾಡಿದೆ....... "

" ಆದರೆ............? "

" ಸುಮಿತ್ರಾ... ಜಗದಲ್ಲಿ ನಮ್ಮೆಲ್ಲರ ಶಕ್ತಿಗೆ ಮೀರಿದ ಒಂದು ಶಕ್ತಿ ಇದೆ. ಅದನ್ನು ಎಂತಹ ನಾಸ್ತಿಕನೂ ನಂಬಲೇಬೇಕು. ಒಪ್ಪಲೇಬೇಕು...."

" ನೀನು ನಿನ್ನ ಕರುಳನ್ನು ಬಲಿಕೊಟ್ಟೆ......."

" ನಾನು ನಿನ್ನ ಕರುಳನ್ನು ಕೊಲೆ ಮಾಡಿದೆ........"

" ನೀನು ನಿನ್ನ ಕರುಳನ್ನು ಬಲಿಗೊಟ್ಟು ಸುಖಿಯಾಗಿ ಬಾಳ ಬಯಸಿದೆ....?

" ನಾನು ನಿನ್ನ ಕರುಳಿನ ಕೊಲೆಮಾಡಿ ನಿನ್ನನ್ನು ಸುಖಿ ಮಾಡಲು, ನೀನು ಸುಖಿಯಾದುದನ್ನು ನೋಡಲು ಪ್ರಯತ್ನ ಮಾಡಿದೆ..."

"ಆದರೆ ನಿನ್ನ ಬಯಕೆ ಬಯಲಾಯಿತು. ನನ್ನ ಪ್ರಯತ್ನ ಧೂಳಿಗೂ ಡಿತು."

" ಅದಕ್ಕೇ ಹೇಳುವದು ಯಾವುದೂ ನಮ್ಮ ಕೈಯಲ್ಲಿಲ್ಲ. "

" ಆಡಿ ಮಾಡುವದು, ಆಶಿಸುವದು ಮನುಷ್ಯನ ದೇಹಕ್ಕೆ ಎಂದೆಂದಿಗೂ ಬಿಡದಂತೆ ಅಂಟಿಕೊಂಡು ಬಂದುದು ಅಂತೆಯೇ ಉಸಿರು ಕೊನೆಯ ಸಲ ತೆಗೆದುಕೊಳ್ಳುವಾಗ ಕೂಡ ಮನುಷ್ಯ ಆಶಿಸುತ್ತಾನೆ ಜಗತ್ತೇ ಹಾಳಾದರೂ ಹಾಳಾದ ಜಗದಲ್ಲಿಯೇ ತನ್ನ ಮನೆ ಸುಂದರವಾಗಿ ಕಟ್ಟಲು ಪ್ರಯತ್ನ ಪಡುತ್ತಾನೆ ಎಂದು "

ಅವಳ ಮಾತಿನಲ್ಲಿ ಸತ್ಯವಿದೆ.

ಹೇಸಿ ಜೀವನದಿಂದ ಎಲ್ಲರೂ ಬದುಕಲು ಪ್ರಯತ್ನಪಡುತ್ತಾರೆ. ಅಲ್ಲದೆ ಜೀವಕ್ಕೆ ಹೇಸಿ ಯಾರೂ ಸಾಯಲು ಮುಂದಾಗುವದಿಲ್ಲ.

ಅನೇಕರು ಆತ್ಮಹತ್ಯ ಮಾಡಿಕೊಳ್ಳುತ್ತಾರೆ.

ಆದರೆ ಜೀವಕ್ಕೆ ಹೇಸಿ ಅಲ್ಲ. ಜಗಕ್ಕೆ ಹೆದರಿ.

ನಾನೂ ಜಗಕ್ಕೆ ಹೆದರಿದ್ದೆ, ಅಂತೆಯೇ ಸಾಯುವ ಪ್ರಯತ್ನ ಮಾಡಿದೆ ಆದರೆ ನಾನು ಸಾಯಲಿಲ್ಲ. ಅವಳು ಹೇಳಿದಂತೆ ಜಗದಲ್ಲಿ ನಮ್ಮೆಲ್ಲರ ಶಕ್ತಿಗೆ ಮೀರಿದ ಒಂದು ಶಕ್ತಿಯಿದೆ. ಯಾವುದೂ ನಮ್ಮ ಕೈಯಲ್ಲಿಲ್ಲ ಅಂತೆಯೇ ನಾನು ಸಾಯಲಿಲ್ಲ. ಬದುಕಿದೆ

ಬದುಕಿ ಸುಖವಾಗಿ ಬಾಳಬಯಸಿದೆ.

" ಆದರೆ 'ಜಗದಲ್ಲಿ ನಮ್ಮೆಲ್ಲರ ಶಕ್ತಿಗೆ ಮೀರಿದ ಒಂದು ಶಕ್ತಿಯಿದೆ.... ಯಾವುದೂ ನಮ್ಮ ಕೈಯಲಿಲ್ಲ' ಅಂತೆಯೇ ನನ್ನ ಬಾಳು ಬಯಲಾಯಿತು ! "

ಅಗ್ಗೆ ಕಾಮಿನಿ ಹೇಳಿದಳು—

" ಸುಮಿತ್ರಾ ಹೆಂಗಸು ಬದುಕಬೇಕಾದರೆ ಅವಳ ಮಾರಾಟವಾಗಲೇ ಬೇಕು. ಹೆಣ್ಣು ಪೇಟೆಯಲ್ಲಿ ಬೆಲೆಗೆ ಸಿಕ್ಕುವ ಸಜೀವ ವಸ್ತು.... ಯಾರು ತಮ್ಮನ್ನು ಆ ಜೀವನ ಮಾರಿಕೊಂಡು ಸಾಯುವ ವರೆಗೆ ಬಂಧನದಲ್ಲಿ ಸಿಲುಕುತ್ತಾರೆ. ಆದಕ್ಕೇ ನಮ್ಮವರು ಹಿರಿಯರು ಎಲ್ಲರೂ ಹೇಳುವ ಹೆಸರು 'ವಿವಾಹ' 'ಲಗ್ನ' 'ಮದುವೆ....' 'ಕಲ್ಯಾಣ' ಎಂದು. ಇದು ಸಾಧ್ಯವಿಲ್ಲದವರು ನಿತ್ಯವೂ ತಮ್ಮನ್ನು ಮಾರಿಕೊಂಡು ಬಾಳುತ್ತಾರೆ...."

"....ಇದೆಲ್ಲವೂ ಬದುಕುವದಕ್ಕಾಗಿ... ಹಸಿವೆಯಿಂದ ಜೀವ ಹೋಗದಂತೆ ಕಾಯ್ದುಕೊಳ್ಳುವದಕ್ಕಾಗಿ... ಹಸಿವೆಯ ರಾಕ್ಷಸನಿಗೆ ಆಹಾರವಾಗದಂತೆ ಸಂರಕ್ಷಿತವಾಗಿರುವದಕ್ಕಾಗಿ........ "

"....ನನ್ನನ್ನು ನೋಡು.... ಎದುರಿನ ಅಟ್ಟದ ಮನೆಯ ಒಡೆಯನ ಪತ್ನಿಯನ್ನು ನೋಡು....... ನೆರೆಮನೆಯ ಕೂಲಿಕಾರನ ಹೆಂಡತಿಯನ್ನು ನೋಡು.... ಎಲ್ಲರೂ ಗುಲಾಮರು... ಯಾರೂ ಮುಕ್ತರಿಲ್ಲ.... ಯಾರೂ ಸ್ವತಂತ್ರರಿಲ್ಲ... ಇಂದಿನ ಸಮಾಜದಲ್ಲಿ, ಮುಂದೆ ಬರಲಿರುವ ಸಾವಿರ ವರುಷಗಳಲ್ಲಿ ಕೂಡ ... ಸ್ತ್ರೀ ಗುಲಾಮಳು.... ಅಸ್ವತಂತ್ರಳು...."

"....ನಿಸರ್ಗ ಅವಳನ್ನು ಗುಲಾಮಳನ್ನು ಮಾಡಿದೆ... ಬಂಧಿಸಿದೆ.. "

"....ಸುಮಿತ್ರಾ....ನಾನು ಬದುಕಬೇಕಾಗಿದೆ........ ನೀನು ಬದುಕಬೇಕಾಗಿದೆ....... ನಮಗಾಗಿ ಅಲ್ಲದಿದ್ದರೂ ಯಾರೊಬ್ಬರ ಇಚ್ಛಾ ತೃಪ್ತಿಗಾಗಿ........ ನಮ್ಮನ್ನು ಪಾವನಗೊಳಿಸಿದವರ ಇಚ್ಛಾಪೂರ್ತಿಗಾಗಿ........ ಸುಮಿತ್ರಾ ಅವರು ಹೇಳಿದ್ದನ್ನು ಮರೆತೆಯಾ....? " ಎಂದು.

ಅಹುದು ನಾನು ಸಾಯಬಾರದು. ಸಾಯಕೂಡದು. ನಾನು ನನ್ನ ದೇವರೆದರು....... ನನ್ನನ್ನು ರಕ್ಷಿಸಿದ ದೇವರಿಗೆ ವಚನ ಕೊಟ್ಟಿರುವೆ.

ನಾನು ಏನನ್ನೂ ಮಾಡುವೆ. ಆದರೆ ಅವರಿಗೆ ಕೊಟ್ಟ ವಚನವನ್ನು ಮುರಿಯಲಾರೆ.... ಅವರು ಸಾಮಾನ್ಯರಲ್ಲ.... ದೇವರು.... ನಾನು ಸಾಯಲಾರೆ.... "

ಸಾಯದಿದ್ದರೆ ಬದುಕಬೇಕು.

ಆದರೆ ಬದುಕುವದು ಹೇಗೆ....? ಅವಳಿಗೆ— ಭಾರವಾಗಿರುವದು ಎಲ್ಲಿಯವರೆಗೆ....? ಜೀವನಕ್ಕೊಂದು ಮಾರ್ಗ ಬೇಡವೆ...?

ಈ ಕ್ರೂರ ಜಗದಲ್ಲಿ ಸ್ತ್ರಿ ಒಂಟಿಯಾಗಿದ್ದು ದುಡಿದು ಹೊಟ್ಟೆ ತುಂಬಿಕೊಳ್ಳಹಬುದೆ....?

ನಾನು ಒಂಟೆ.... ನಿರಾಶ್ರಿತೆ ...

ಅಲ್ಲ.... ನಾನು ನಿರಾಶ್ರಿತೆಯಲ್ಲ.... ಅವಳು ನನ್ನ ತಾಯಿಯಾಗಿದ್ದಳು. ತಾಯಿಯಾಗಿ ಕಾಯುತ್ತಿದ್ದಳು. ಹಿರಿಯಳಾಗಿ ಬುದ್ಧಿ ಹೇಳುತ್ತಿದ್ದಳು.

ಅವಳೇ ನನ್ನ ' ಸರ್ವಸ್ವ ' ವಾಗಿದ್ದಳು.

ನನ್ನ ಸಹಾಯಕ್ಕೆ ಅವಳು ಧಾವಿಸಿದಳು. ಅವಳ ಸಹಾಯ ಅಖಂಡವಾಗಿತ್ತು. ಅನಂತವಾಗಿತ್ತು. ಅವಳು ನನಗೆ ಬಾಳಿನ ದಾರಿಗೆ ಹಚ್ಚಲ್ಕು ಅಖಂಡವಾಗಿ ಯತ್ನಿಸಿದ್ದಳು. ಆದರೂ ನನ್ನ ದುರ್ದೈವದಿಂದಾಗಿ ಅಯಶಸಿಯಾಗಿದ್ದಳು. ........ ಅವಳಿಗೆ ಭಾರವಾಗಿರುವದು ಬೇಡವೆಂದು ಅವಳಿಗೆ ಕೇಳಿದ್ದೆ— ನನಗೂ ಜೀವನದ ಮಾರ್ಗ ತೋರಿಸು ಎಂದು.

ಅವಳು ನನಗೆ ಜೀವನದ ಮಾರ್ಗ ಮತ್ತೆ ತೋರಿಸಿದಳು.

ಅಂದು ಸಂಜೆ.......

ಸಂಜೆಯಲ್ಲ. ಕತ್ತಲಾಗಿತ್ತು. ರಾತ್ರಿ ಬೆಳೆದಿರಲಿಲ್ಲ. ಬೆಳೆಯುವದರಲ್ಲಿತ್ತು. ಚಿಂತೆಯಲ್ಲಿ ಕುಳಿತಾಗ ಬಾಗಿಲ ಸದ್ದು ಎದ್ದು ಬಾಗಿಲು ತೆರೆದಿದ್ದೆ.

ಬಂದವ ಅಪರಿಚಿತ ! ಗಂಡಸು !

ಬಂದ ಅಪರಿಚಿತ ಗಂಡಸು ನನ್ನನ್ನೇ ನೆಟ್ಟ ನೋಟದಿಂದ ನೋಡುತ್ತಿದ್ದ. 'ಯಾರು' ? ಎಂದು ಕೇಳಲಿಲ್ಲ. 'ತಾನಾರು' ಎನ್ನುವದನ್ನು ಅವ ಒಡೆದು ಹೇಳುತ್ತಿರಲಿಲ್ಲ. ಆದರೆ ಹೆದರಿಕೆ ಬರುವ 'ಪ್ರಾಣಿ' ಆವನಾಗಿರಲಿಲ್ಲ. ನನ್ನನ್ನು ತಣಿಯುವ ವರೆಗೂ ನೋಡಿದ. ನಾನು ತಲೆ ಕೆಳಕ್ಕೆ ಮಾಡಿದ್ದೆ. ಕೊನೆಗೊಮ್ಮೆ ಆತನೇ ಹೇಳಿದ

" ನನ್ನನ್ನು ನರ್ಸ ಕಾಮಿನಿಬಾಯಿ ಕಳಿಸಿದ್ದಾಳೆ. ಇದೇ ಸಾಯಂಕಾಲ ಅವರು ಆಸ್ಪತ್ರೆಯಲ್ಲಿ ಸಿಕ್ಕಿದ್ದರು .... ನೀವು ತುಂಬಾ ಆಪತ್ತಿನಲ್ಲಿ ಇರುವಿರಂತೆ. ನೀವು ಯಾವುದಕ್ಕೂ ಚಿಂತೆ ಮಾಡುವ ಕಾರಣವಿಲ್ಲ. ನಾನು ಇರುವೆ ನಿಮಗೆ ಏನು ಬೇಕಾದರೂ ಸಂಕೋಚವಿಲ್ಲದೆ ಹೇಳಿರಿ ನಾನೂ ಒಬ್ಬ ನಿಮ್ಮ ಅಪ್ತ ....... ಇಂದು ನಿಮಗೆ ಹಣ ಬೇಕಿತ್ತಂತೆ. "

ಅವನ ಕೈಯಲ್ಲಿ ಹಣವಿತ್ತು. ಒಂದು- ಎರಡರಂತೆ ಹತ್ತರ ಹಪ್ಪ ನೋಟುಗಳು. ಅವನ್ನು ತೆಗೆದು ಉಳಿದದ್ದನ್ನು ಮತ್ತೆ ಕಿಸೆಯಲ್ಲಿರಿಸಿದ ಎಣಿಸಿದ ನೂರು ರೂಪಾಯಿ ನನ್ನ ಮುಂದೆ ಚಾಚಿದ.

ಆದರೆ ನನ್ನ ಕೈ ಮುಂದಾಗಲಿಲ್ಲ.

ಆತನಾರು ?

ಆವನು ನನಗೆ ಹಣಕೊಡುವದೇಕೆ ?

ಯಾವುದೂ ಗೊತ್ತಿರಲಿಲ್ಲ. ಆವ ನರ್ಸ ಕಾಮಿನಿಬಾಯಿ ಕಳಿಸಿರುವ ಳೆಂದು ಹೇಳುತ್ತಾನೆ ನಾನು ಇನ್ನುಮುಂದೆ ಚಿಂತಿಮಾಡುವದು ಅನವಶ್ಯ ಎಂದು ಆಶ್ವಾಸನ ಕೊಡುತ್ತಾನೆ. ನಾನು ಆಪತ್ತಿನಲ್ಲಿರುವೆನೆಂದು ಕರುಣೆ ತೋರಿಸುತ್ತಾನೆ.

ಆದರೆ ........

ಎಲ್ಲವೂ ಏತಕ್ಕಾಗಿ ? ಏತಕ್ಕಾಗಿ ?

ಛಿ....ಛಿ... ಇದು ಜೀವನವಲ್ಲ.

ಹಣಕ್ಕಾಗಿ....? ಬೇಡ....ಬೇಡ.

ನನ್ನ ಕೈಗಳು ಹಣಕ್ಕಾಗಿ ಮುಂದಾಗಲಿಲ್ಲ.

" ನೀವು ಯಾವುದಕ್ಕೂ ಸಂಕೋಚಪಟ್ಟುಕೊಳ್ಳಬೇಡಿರಿ...."

ನಾನು ಆವನ ಮಾತಿಗೆ ಏನನ್ನೂ ಉತ್ತರಿಸಿರಲಿಲ್ಲ. ಆವನು ಮತ್ತೆ ಹೇಳಿದ—

" ನೀವು ಹೆದರಿದಂತೆ ತೋರುತ್ತದೆ. ಹೀಗಾಗುವದು ಸ್ವಾಭಾವಿಕ. ನಾನು ದುಷ್ಟ ಪ್ರಾಣಿಯಲ್ಲ. ನನ್ನನ್ನು ಕಂಡು ನೀವು ಹೆದರುವದು ಬೇಡ ಹೆದರಿಕೆಯನ್ನು ಕಿತ್ತು ಬೀಸಾಕಿರಿ....... ತೆಗೆದುಕೊಳ್ಳಿರಿ. "

ಆವ ಒತ್ತಾಯದಿಂದ ಹಣವಿಡಲು ನನ್ನ ಕೈ ತನ್ನ ಕೈಯಲ್ಲಿ ತಗೆದು ಕೊಂಡ.

ಆತನಾರು ? ಯಾವುದೋ ಒಬ್ಬ ಅಪರಿಚಿತ.

ಆತನ ಕೈಯಲ್ಲಿ ಹಣವಿದೆ. ನೂರು ರೂಪಾಯಿ.

ಆದಕ್ಕಾಗಿ ನನ್ನ ಕೈ ಆತ ತೆಗೆದುಕೊಂಡಿದ್ದಾನೆ !

ಅಪರಿಚಿತ.

ನೂರು ರೂಪಾಯಿ !

ನಾನು.... ..?

ನನ್ನ ತಲೆ ಕೃಷ್ಣನ ಸುದರ್ಶನವಾಗಿ ಸುತ್ತುತ್ತಿತ್ತು.
ನನಗೇನೂ ತಿಳಿಯುತ್ತಿರಲಿಲ್ಲ ನಾನು ಏನು ಮಾಡುವೆನೆಂಬುದರ ಅರಿವು ನನ್ನಲ್ಲಿ ಇರಲಿಲ್ಲ.

ನಾನೇನು ಮಾಡಿದೆ...?

ನೂರು ರೂಪಾಯಿಗಳೆಲ್ಲಿ ?

ಬಂದ ಅಪರಿತ ಗಂಡಸೆಲ್ಲಿ ?

ಯಾವುದೂ ತೋಚುತ್ತಿರಲಿಲ್ಲ—

× × × ×

ಮುಂದೇನು ಮಾಡಲಿ ? ಎಲ್ಲಿಗೆ ಹೋಗಲಿ ? ಯಾರ ಹತ್ತಿರ ಹೋಗಲಿ ? ಈ ಜಗದಲ್ಲಿ ನನ್ನವರೆನ್ನುವವರು ಯಾರಿರುವರು ?

ನಾನೂ ಎಲ್ಲರಂತೆ ಜನ್ಮ ತಾಳಿದ್ದೆ.

ತಾಯಿ ಇದ್ದಳು. ತಂದೆ ಇದ್ದ.

ಆದರೆ ಇಂದು ಯಾರೂ ಇಲ್ಲ

ಇಲ್ಲ .... ಎಲ್ಲರೂ ಇದ್ದು ನಾನು ಮಾತ್ರ ಇಲ್ಲದಾಗಿರುವೆ.

ಇಲ್ಲ. ನಾನೂ ಇಲ್ಲದಾಗಿಲ್ಲ. ಇಲ್ಲದಾಗಿದ್ದರೆ ಇದೆಲ್ಲದರ ಕಾಟ ಇರುತ್ತಿರಲಿಲ್ಲ.

ನಾನು ಇರುವೆ. ಎಲ್ಲರೂ ಇರುವರು.

ಅಂತೆಯೇ ಈ ತೊಂದರೆ

ಎಲ್ಲರೂ ಇದ್ದು ನಾನಿಲ್ಲದಿದ್ದರೆ ಯಾವ ತೊಂದರೆಯೂ ಇರುತ್ತಿರಲಿಲ್ಲ. ಸತ್ತವರಿಗೆ ಇರಬೇಕಾದುದು ಸ್ವರ್ಗದ ವಿಚಾರ ಅಲ್ಲದೆ ಜಗದ್ದಲ್ಲ.

ನಾನಿದ್ದು ಎಲ್ಲರೂ ಇಲ್ಲದಿದ್ದರೆ .... ಯಾವ ತೊಂದರೆಯೂ ಇರುತ್ತಿರಲಿಲ್ಲ. ಏಕಂದರೆ ಎಲ್ಲವೂ ನನ್ನದೇ ಆಗಿರುತ್ತಿತ್ತು

ಆದರೆ .... ಇಂದು ನಾನೂ ಇರುವೆ. ಎಲ್ಲರೂ ಇರುವರು. ಅಂತೆಯೇ ಎಲ್ಲದಕ್ಕೂ ತೊಂದರೆ ಏನು ಮಾಡಲಿ ?

ಏನು ಮಾಡಲಿ ?

ಏನು ಮಾಡಲಿ ಎನ್ನುವದಕ್ಕೆ ಕಾಮಿನಿಯ ಅರ್ಭಟಿ

" ಏನು ಮಾಡುವದು ? ಮನೆಯವರೆಗೆ ಬಂದ ಮಹಾಲಕ್ಷ್ಮಿಯನ್ನು ಹಿಂದೆ ಕಳುಹಿಸಿ ಏನು ಮಾಡಲಿ ? ಎಂದರೆ ನಿನಗೆ ಮೊದಲೇ ಹೇಳಿದ್ದೆ .... ನೀನು ಹೆಂಗಸು ನೀನು ಬದುಕುವದಾದರೂ ನಿನಗೆ ಇನ್ನೊಬ್ಬರ ಸಹಾಯ ಬೇಕು. ಸಾಯುವದಾದರೂ ಇನ್ನೊಬ್ಬರ ಕೈಯಲ್ಲಿ ಬೀಳಬೇಕು. ಹೆಣ್ಣೆಂದರೆ ಗಿಡದಲ್ಲಿಯ ಹಣ್ಣು ಅದನ್ನು ಯಾರೊಬ್ಬರು ಹರಿದು ಕೊಳ್ಳಬೇಕು. ಇಲ್ಲದಿದ್ದರೆ ತಾನಾಗಿಯೇ ನೆಲಕ್ಕೆ ಬೀಳಬೇಕು. ಏನಾದರೂ ಅದಕ್ಕೆ ಅಂತ್ಯ ಒಂದೇ ಬಲಿದಾನ "

" ಬಲಿದಾನ. "

" ಜೀವನದ ಉದ್ದೇಶವೇ ಬಲಿದಾನ. ಆದರೆ ಇದು ಬೆಲೆಯಿಲ್ಲದ ಬಲಿದಾನ. ಹುಟ್ಟಿದ ಮನೆಯಲ್ಲಿ ಹೆತ್ತವರಿಗೆ ಭಾರವಾಗಿ ಬೆಳೆಯಬೇಕು. ಮುಂದೆ ಯಾರೊಬ್ಬರ ವಶದಲ್ಲಿ ತನ್ನತನವನ್ನು ಮರೆತು ಜೀವನವನ್ನೆಲ್ಲ ಕಳೆಯಬೇಕು. 'ತಾನು' ಎನ್ನುವದರ ಅರಿವಿಲ್ಲ. ತನಗೆ ಹೊಟ್ಟೆಗೆ ಹಾಕುವವನಿಗಾಗಿ ಅತನ ಮಕ್ಕಳಿಗಾಗಿ ಬಾಳಬೇಕು. ಬಾಳು ಮುಗಿಸಬೇಕು. ಇಲ್ಲದಿದ್ದರೆ .... ಇಲ್ಲದಿದ್ದರೆ ಬೇರೆ ಬಾಳೇ ಇಲ್ಲ. ಇದು ಸತ್ಯ ಇದುವೇ ನಿತ್ಯ ಸತ್ಯ. ಹಣಕ್ಕಾಗಿ ಹೀನಳಾಗು ಎಂದೂ ನಾನು ಬೋಧಿಸುವದಿಲ್ಲ. ಆದರೆ ನೀನು ಬದುಕುವದಕ್ಕಾಗಿ ಹಣಬೇಕು. ಬೆಳೆದ ನೀನು ಬಾಡಿ ಸಾಯುವದನ್ನು ನಾನು ನೋಡಲಾರೆ. ಆದಕ್ಕೆ ನಾನು ಅವನನ್ನು ಕಳುಹಿದ್ದೆ. "

ಅವಳ ವಿಚಾರ ತೀರ ವಿಚಿತ್ರವಾಗಿತ್ತು. ಅವಳ ಮಾತು ಒಂದೊಂದು ಸಲ ಅರ್ಥವಾಗುತ್ತಲೇ ಇರಲಿಲ್ಲ. ಗಂಡಸೆಂದರೆ ಅವಳು ಉರಿದು ಬೀಳುತ್ತಿದ್ದಳು.

" ಗಂಡಸೆಂದರೆ ಮನವಿಲ್ಲದ ಮಮತೆಯಿಲ್ಲದ ದಯೆಯಿಲ್ಲದ ಹೃದಯವಿಲ್ಲದ ಒಂದು ಕ್ರೂರ ಕಾಡುಮೃಗ. " ಎಂದು ಆಗೀಗ ಹೇಳುತ್ತಿದ್ದಳು.

ಆದರೂ ನನ್ನನ್ನು ಒಬ್ಬ ಗಂಡಿಸಿನ - ಹೃದಯವಿಲ್ಲದ ಒಂದು ಕ್ರೂರ ಕಾಡು ಮೃಗದೆದುರು ದೂಡುತ್ತಿದ್ದಳು.

ಏಕೆ ?

ನಾನು ಮಣ್ಣಾಗಬಾರದೆಂದು. ನಾನು- ಮುಳಾ-ಮುಠಾ ನದಿಯ ನೀರಿನಲ್ಲಿ— ನೀರಿಗಿಂತ ಹಗುರಾಗಿ ತೇಲಿ ಹೋಗಬಾರದೆಂದು- ಗಾಳಿ ಯನ್ನೇ ಇಬ್ಭಾಗವಾಗಿ ಸೀಳಿಕೊಂಡು ಹೋಗುವ ಉಗಿಬಂಡಿಯ ಗಾಲಿ ಯಲ್ಲಿ ಸಿಲುಕಿ ಚೂರು ಚೂರಾಗದಿರಲೆಂದು.

ಆದರ ವಿಚಾರ ಮಾಡಿದಾಗ ಅವಳ ಮನುಷ್ಯತ್ವದ ಹೃದಯಕಂಡು ಅವಳಿಗಾಗಿ ಹೃದಯ ತುಂಬಿ ಬರುತ್ತಿತ್ತು.

ಆದರೆ ನನಗೆ ಬೇಡವಾದ ಜಗದ ದೃಷ್ಟಿಯಲ್ಲಿ, ಅತ್ಯಂತ ಹೀನ ವಾದ ಜೀವನದಲ್ಲಿ, ನನ್ನನ್ನು ನೂಕಲು ಸಿದ್ಧವಾಗಿದ್ದಳು. ಗಾಣದಲ್ಲಿ ಕಬ್ಬನ್ನು ನೂಕುವಂತೆ ಆದರ ವಿಚಾರ ಮಾಡಿದಾಗ ಕೋಪ ಭುಗಿಲ್ಲೆಂದು ಬರುತ್ತಿತ್ತು.

ನನ್ನ ತುಂಬಿದ ಹೃದಯದಿಂದ ಅವಳ ಕಲ್ಯಾಣವಾಗಬೇಕಾಗಿರಲಿಲ್ಲ. ನನಗೆ ಭುಗಿಲ್ಲೆಂದು ಬರುವ ಕೋಪದಿಂದ ಅವಳು ಭಸ್ಮವಾಗುವ ಹಾಗೆಯೂ ಇರಲಿಲ್ಲ.

ಅವಳ ಜೀವನ ಎಂದಿನಂತೆಯೂ ನಡೆಯುತ್ತಿತ್ತು.

ನನ್ನ ಜೀವನ ಎಂದಿಗೂ ನಡೆಯದಂತೆ ತಡೆದು ನಿಂತಿತ್ತು. ಅದನ್ನು ಮುಂದೆ ದೂಡುವದಕ್ಕೆ ದೂಡಿ ನಡೆಸುವದಕ್ಕೆ ಯಾರೊಬ್ಬರು ಬೇಕಿದ್ದರು.

ಅವಳಲ್ಲದೆ ಇನ್ನು ಯಾರೂ ' ಯಾರೊಬ್ಬರೂ ' ಆಗಿ ಬರಲಿಲ್ಲ.

ಮನೆಗೆ ಬಂದಾಗ ಮರಳಿಸಿದ ಮಹಾಲಕ್ಷ್ಮಿ ಮತ್ತೊಮ್ಮೆ ಮನೆಗೆ ಬರುವಂತೆ ಮಾಡಿದಳು.

ಆ ದಿನ

ಆ ದಿನ ಬೆಳಗಿನಲ್ಲಿಯೇ ಅವರು ಬಂದಿದ್ದರು.

ಅವರ ಹೆಸರು ಮಾಧವರಾಯರಂತೆ ಅವರಲ್ಲಿ ತುಂಬಾ ಹಣವಿತ್ತು. ಮನೆಯಲ್ಲಿ ಸಂಸಾರವೂ ಇತ್ತು.

ಆ ಸಂಸಾರದಿಂದ ಅವರಿಗೆ ತೃಪ್ತಿ ಇರಲಿಲ್ಲ.

ಹಿಂದಿನಂತೆ ಆ ದಿನ ಅವರು ಬರಿಗೈಯಿಂದ ಬಂದಿರಲಿಲ್ಲ ಬರುವಾಗ ಕೈಯಲ್ಲೊಂದು ಚೀಲವೂ ಇತ್ತು.

" ಕಾಮಿನಿಬಾಯಿ ಇಲ್ಲವೆ ? " ಎಂದು ಕೇಳುತ್ತ ಅವರು ಒಳಕ್ಕೆ ಬಂದರು.

" ತಾನು ಇಲ್ಲಿಯೇ ಇರುವೆ. ನೀವು ಬನ್ನಿರಿ ಎಂದು ಹೇಳಿದ್ದರು. ಎಲ್ಲಿಗೆ ಹೋಗಿರುವರು ! ಡ್ಯುಟಿಯ ಮೇಲೆ ಹೋದರೆ ? " ಎಂದು ಅವರು ಅತ್ತಿತ್ತ ನೋಡಿದರು. ಅಲ್ಲಿಯೇ ಸುರುಳಿ ಸುತ್ತಿಟ್ಟ ಹಾಸಿಗೆಯ ಮೇಲೆ ಕುಳಿತರು.

" ನೀವು ಆದಿನ ತುಂಬಾ ಹೆದರಿಕೊಂಡಿರಂತೆ ! ನಾನು ಅಂತಹ ನೀಚ ಮನುಷ್ಯನಲ್ಲ. ...... ನನಗೆ ಯಾವುದರಲ್ಲಿಯೂ ವಿಶೇಷ ಮನವಿಲ್ಲ. ಏನು ಮಾಡುವದು ಈ ಎಲ್ಲವನ್ನೂ ತೆಗೆದು ಕೊಂಡು ? ಆದರೆ ಈ ದೊಡ್ಡ ಕಾರು ಭಾರವನ್ನು ನಡೆಯಿಸುವ ಹೊಣೆಗಾರಿಕೆ ನನ್ನ ಮೇಲೆ ಬಿದ್ದಿದೆ ಅಂತೆಯೇ ಮನದ ಎಲ್ಲ ವಿಚಾರಗಳನ್ನು ಹತ್ತಿಕ್ಕಿ ಇಲ್ಲಿ ಇರಬೇಕಾಗಿದೆ. ಎಲ್ಲವನ್ನೂ ಬಿಟ್ಟುಕೊಟ್ಟು ಹೊರಟರೆ ನನ್ನನ್ನೇ ನಂಬಿದ ಸಾವಿರಾರು ಜೀವಗಳ ಹೊಟ್ಟೆಯ ಮೇಲೆ ಹೊಡೆದಂತಾಗುತ್ತದೆ. ... ....

" ನನಗೆ ನಿಮ್ಮನ್ನು ನೋಡಿ ತುಂಬಾ ಕನಿಕರ ಬರುತ್ತದೆ. ನಿಮ್ಮ ವಿಷಯ ಎಲ್ಲವನ್ನೂ ಕಾಮಿನಿಬಾಯಿ ನನಗೆ ಹೇಳಿದ್ದಾಳೆ. ನೀವು ಯಾವು ದಕ್ಕೂ ಚಿಂತೆ ಮಾಡಬೇಡಿರಿ. ಎಲ್ಲಿಯ ವರೆಗೆ ನಾನು ಜೀವದಿಂದ ಇರು ವೆನೊ ಅಲ್ಲಿಯ ವರೆಗೆ ನಿಮಗೆ ಯಾವ ಕೊತೆಯೂ ಆಗದು. ಇರುವ ಸಂಸಾ ಗಳ ಜೊತೆಗೆ ಇದೂ ಒಂದು ಎಂದುಕೊಳ್ಳುವೆ. ನನ್ನನ್ನೇ ಆಶ್ರಯಿಸಿದ ನೂರಾರು ಜನರು ತಮ್ಮ ಸಂಸಾರ ಸುಖದಿಂದ ಸಾಗಿಸುತ್ತಿದ್ದಾರೆ. ಅದರ ಜೊತೆಗೆ ನಿವೂ ಒಬ್ಬರು. .........

.... ನಿವು ಯಾವುದಕ್ಕೂ ಸಂಕೋಚ ಪಟ್ಟುಕೊಳ್ಳಕೂಡದು......... ನನ್ನನ್ನು ಹೊರಗಿನವನೆಂದು ಭಾವಿಸಬೇಡಿರಿ. ........

.... ಏಕೆ ನೀವು ಮಾತನಾಡುವದೇ ಇಲ್ಲ ? ನಿಮಗೆ ಇನ್ನೂ ಹೆದರಿಕೆಯೇ ? ಅಥವಾ ನಿಮ್ಮ ಸಂಕೋಚ ಇನ್ನೂ ದೂರಾಗಿಲ್ಲವೆ ?.........

" ... ನಿಮ್ಮ ಬಟ್ಟೆಗಳು ಹರಿದಿವೆ ಎಂದು ಕಾಮಿನಿಬಾಯಿ ಹೇಳಿದ್ದರು ನೋಡಿರಿ ಇವು ನಿಮ್ಮ ಮನಸ್ಸಿಗೆ ಬರುವವೊ ........ ?

ಅವರು ಬರುವಾಗ ತಂದ ಕೈಚೀಲದಿಂದ ಹೊರಕ್ಕೆ ನಾಲ್ಕು ಪತ್ತಲಗಳು, ಎರಡು ಮೂರು ಬ್ಲೌಜ ಪೀಸುಗಳು ಹೊರಬಂದವು. ಪತ್ತಲುಗಳು ತುಂಬಾ ಬೆಲೆಯುಳ್ಳವಲ್ಲದಿದ್ದರೂ ನಿತ್ಯವೂ ನನ್ನಂತಹಳು ಉಡುವದಕ್ಕಿಂತ ಬೆಲೆಯುಳ್ಳವಿದ್ದವು.

" ನೋಡಿರಿ........" ಕೈ ಮಾಡಿ ಕೊಡಬಂದರು.

ಹಿಂದೊಂದು ದಿನ ಕೈಯಲ್ಲಿ ಹಣ ಕೊಡ ಬಂದಿದ್ದರು. ಇಂದು ಬಟ್ಟೆ ಕೊಡುತ್ತಿದ್ದಾರೆ.

ಅಂದು ರಾತ್ರಿ.

ಇಂದು ಹಗಲು

ಅಂದಿನ ವ್ಯವಹಾರವೆಲ್ಲ ಕತ್ತಲೆಯಲ್ಲಿ.

ಇಂದು ಎಲ್ಲೆಲ್ಲಿಯೂ ಕತ್ತಲೆಯ ಸುಳಿವಿಲ್ಲ.

ಅವಳು ಹೇಳಿದ್ದಳು " ಹುಚ್ಚಿ ಕೂಗಿ ಆಕ್ರೋಶಿಸಿ ಬೇಡಿದರೂ ಕೊಡುವವರಿಲ್ಲ ಈ ಜಗದಲ್ಲಿ. ತಾನಾಗಿ ಕೈಗೆ ಕೊಡಬಂದುದನ್ನು ಹಿಂದಕ್ಕೆ ಬಿಟ್ಟರೆ ಬಾಳುವದು ಹೇಗೆ ? "

ಈ ಸಲ ನನ್ನ ಕೈ ಮುಂದಾಯಿತು. ಮುಂದಾದ ಕೈ ಭಾರವಾಯಿತು. ಅದರಿಂದ ಅವರ ಮುಖ ಪ್ರಫುಲ್ಲಿತವಾಯಿತು

" ನಾನು ಹೆದರಿದ್ದೆ. ಮತ್ತೆ ನೀವೆಲ್ಲಿ ಹಿಂದಿನಂತೆ ಇಂದೂ ಮಾಡುವಿರೋ ಎಂದು.... ನೀವು ಯಾವುದಕ್ಕೂ ಸಂಕೋಚಪಟ್ಟುಕೊಳ್ಳಬೇಡಿರಿ." ಎಂದು ಅವರು ಕೈಗೆ ಸ್ವಲ್ಪ ಹಣವನ್ನು ಕೊಟ್ಟರು.

ಅವು ನೂರು ರೂಪಾಯಿಗಳಿದ್ದವು.

ನಾನು ಮಾಡಿಕೊಟ್ಟ ಚಹದ ಪ್ರಶಂಸೆ ಮಾಡುತ್ತ ಕುಡಿದರು. ಮುಂದೆ ಕೆಲವೇಳೆ ಮಾತನಾಡುತ್ತ ಕುಳಿತರು. ಅವರು ಎನೇನೋ ಮಾತನಾಡುತ್ತಿದ್ದರು. ನಾನು 'ಹೂಂ' ಗುಟ್ಟುತ್ತಿದ್ದೆ.

ತಿರುತಿರುಗಿ ನನ್ನ ಮನದಲ್ಲಿ ಒಂದೇ ವಿಚಾರ.

ಪ್ರಯಾಣದ ಆರಂಭ ಎಲ್ಲಿಂದ ?

ತಲುಪುವದು ಎಲ್ಲಿಗೆ ?

ಗೊತ್ತು ಗುರಿ ಇಲ್ಲದ ಪ್ರಯಾಣ.

ಒಂದುದಿನ ಯಾರಿಗೂ ಗೊತ್ತಿಲ್ಲದಂತೆ ಮಧ್ಯರಾತ್ರಿ ಮಿಕ್ಕಿಂದ ಮನೆ ಬಿಟ್ಟಿದ್ದೆ.

ಮನೆ !

ಯಾರ ಮನೆ ?

ನನ್ನ ಮನೆಯಲ್ಲ. ನನ್ನ ತಂದೆ ತಾಯಿಗಳ ಮನೆ

ಆಹುದು ನನ್ನ ತಂದೆ ತಾಯಿಗಳ ಮನೆ.

ಮಧ್ಯ ರಾತ್ರಿಯಲ್ಲಿ ಅದೇಮನೆಯಿಂದ ಮಾಯವಾಗಿದ್ದೆ.

ಮಾಯವಾಗಲೇ ಬೇಕಿತ್ತು. ಇಲ್ಲದಿದ್ದರೆ ನನ್ನಿಂದಾಗಿ ನನ್ನ ತಂದೆ ತಾಯಿ ಮನೆತನದ ಮಾನ ಹಾನಿಯಾಗುತ್ತಿತ್ತಂತೆ !

ಮಾನ .... ಅವಮಾನ.

ಯಾವುದೋ ಕಾರಣದಿಂದ ಘಟಿಸಿದ ಅಪರಾಧವನ್ನು ಕ್ಷಮಿಸಿದ್ದರೆ....?
ಮಕ್ಕಳು ತಪ್ಪು ಮಾಡುತ್ತಾರೆ........

ಮಕ್ಕಳೆಂದರೆ ತಿಳುವಳಿಕೆ ಇಲ್ಲದವರು. ಅವರಿಗೆ ತಿಳುಹಿಸಿ ಕೊಡಬೇಕಾದದು ಹಿರಿಯರ ಕರ್ತವ್ಯ. ತಪ್ಪಿದವರ ತಪ್ಪು ತಿದ್ದಿ ಅವರನ್ನು ಬಾಳಿಸುವವರು ಹಿರಿಯರು. ಬಾಳಿಸುವದಕ್ಕೆ ಹಿರಿಯರು.

ಆದರೆ......

ನಮ್ಮ ವಂಶದಲ್ಲಿಯೇ ಯಾರೂ ಮಾಡದ ಮಹಾ ಘೋರ ಅಪರಾಧ ವನ್ನು ಮಾಡಿರುವೆ. ಕಲಂಕಿನಿ........ ಹುಟ್ಟಿದ ಕೂಡಲೇ ಏಕೆ ಸತ್ತು ಹೋಗ ಲಿಲ್ಲ ?........ ನೀನು ನಮ್ಮ ಮನೆತನದ ಮಾನವನ್ನು ಮಣ್ಣುಗೂಡಿಸಿದೆ· ........ಸಾಯಿ......ಸತ್ತು ಹೋಗು...... ತಾಳಲಾರದ ದಂಡನೆಯೊಂದಿಗೆ ತಂದೆಯಾಡಿದ ಮಾತುಗಳಿವು.

ತಂದೆ ಮಗಳಿಗೆ ಪಾಠ ಕಲಿಸಿದ ರೀತಿಯಿದು........

" ನನ್ನ ಕಣ್ಣೆದುರಿನಲ್ಲಿಯೇ ಅವಳ ಕುತ್ತಿಗೆ ಹಿಸುಕಿ ಹಾಕಿರಿ. ಅವಳ ಚಾಳಿಯೇ ಮನೆಯಲ್ಲೆಲ್ಲ ಹಬ್ಬೀತು......." ಏಳು ಮಕ್ಕಳ ತಾಯಿಯಾದ ನನ್ನತಾಯಿಯ ಮಾತು.......

ತಾಯಿ ಮಗಳಿಗೆ ಕೊಟ್ಟ ಆಶಿರ್ವಾದ.

ತಂದೆ ತಾಯಿಗಳ ಆಶಿರ್ವಾದಕ್ಕೆ ಬಿಟ್ಟಫಲ...... ಈ ನನ್ನಜೀವನ.

ನನ್ನ ಜೀವನ ........

ಮಾಧವರಾಯರೊಂದಿಗೆ ನನ್ನ ಜೀವನ.

ಮಾಧವರಾಯರು ತರುಣರಲ್ಲ. ಆದರೆ ವೃದ್ಧರೂ ಅಲ್ಲ.

ಅವರು ಹೇಳುತ್ತಿದ್ದರು "ಸುಮಿತ್ರಾ ನಿನ್ನನ್ನು ನಾನು ಪ್ರೀತಿಸುವೆ. ತುಂಬಾ ಪ್ರೀತಿಸುವೆ. ನಿನ್ನನ್ನು ಬಿಟ್ಟು ಇರಲು ಆಗುವದಿಲ್ಲ."

ಪ್ರೀತಿ!..........

ಮಾಧವರಾಯರ ಪ್ರೀತಿ !

ಒಬ್ಬ ಗಂಡಸಿನ ಪ್ರೀತಿ!

ಸುಳ್ಳು. ಗಂಡಸು ಹೆಂಗಸನ್ನು ಪ್ರೀತಿಸಬದಾದರೂ ಸಾಧ್ಯವಿದೆಯೆ ?

ಸಾಧ್ಯವಿಲ್ಲ. ಅಸಾಧ್ಯವಲ್ಲ. ಆದರೆ ಯಾವುದೂ ಸಹಜ ಸಾಧ್ಯವಿಲ್ಲ.

ಮಾಧವರಾಯರು ಹೇಳುತ್ತಾರೆ "ಸುಮಿತ್ರಾ ನಾನು ನಿನ್ನನ್ನು ಪ್ರೀತಿ ಸುವೆ" ಗಂಡಸರೆಲ್ಲರೂ ಹಾಗೆಯೇ ಹೇಳುತ್ತಾರೆ!

ಅವರ ಈ ಮಾತಿಗೆ ಹೆಂಗಸು ಮರುಳಾಗುತ್ತಾಳೆ. ಮರುಳಾಗಿ ತನ್ನನ್ನು ತಾನೇ ಮರೆತು ಬಲೆಯೊಳಗೆ ಸಿಕ್ಕುಬೀಳುತ್ತಾಳೆ.

ನಾನು ಕೂಡ.

"ನಿರ್ಮಲಾ....... ನಿಮ್ಮಿ...... ನಾನು ನಿನ್ನನ್ನು ಪ್ರೀತಿಸುವೆ. ನಾನೇ ನಿನ್ನ ದಿಲೀಪ ಕುಮಾರ, ಪ್ರೇಮನಾಥ" ಎಂದು ರಂಗ ಹೇಳಿದ್ದ ಒಂದಲ್ಲ ಸಾವಿರ ಸಲ......

ಸಾವಿರ ಸಲ!

ಆದರೆ ಕೊನೆಗೆ?

ಸಾವಿರ ಸಲ ಹೇಳಿದ್ದು ಸುಳ್ಳಾಯಿತು.

ಕನಸಿನಲ್ಲಿ ಕೂಡ ಕಾಣದ ಕಂಡರಿಯದ ಘಟನೆ.

ಅಂತೆಯೇ ಹುಟ್ಟಿದ ಮನೆಯನ್ನು ಮಧ್ಯರಾತ್ರಿಯಲ್ಲಿ ಕಳ್ಳರಂತೆ ತ್ಯಜಿಸಬೇಕಾಯಿತು.

ತಿರುಗಣಿ ಮಡುವಿನ ಸುಳಿಯಲ್ಲಿ ಸಿಕ್ಕ ನಾನು ಸುತ್ತುತ್ತ ಸುತ್ತುತ್ತ ತೀರ ಹತ್ತಿರಕ್ಕೆ ಬಂದಿರುವೆ.

ಮಾಧವರಾಯರು ಹೇಳಿದ್ದರು "ಸುಮಿತ್ರಾ ನಾನು ನಿನ್ನನ್ನು ಎಂದಿಗೂ ಬಿಡಲಾರೆ. ಎಂದೆಂದಿಗೂ ಬಿಡಲಾರೆ" ಎಂದು.

"ಸುಮಿತ್ರಾ ನೀನು ನಾಗರ ಹಾವನ್ನು ನಂಬು. ಅದಕ್ಕೆ ಹಾಲು ಕುಡಿಸು. ಅದು ನಿನ್ನ ಮೇಲೆ ಎಂದಿಗೂ ತಿರುಗಿ ಬೀಳಲಾರದು.......... ಆದರೆ...... ಈ ಹಾಳು ಗಂಡಸರನ್ನು ಎಂದೆಂದಿಗೂ ನಂಬಬೇಡ. ಅವರು ಹಾವಿಗಿಂತ ಕಡೆ. ತನಗೆ ಅಪಾಯವಿದೆ ಎನ್ನಿಸಿದಾಗ ಹಾವು ಕಚ್ಚುತ್ತದೆ. ಕಚ್ಚಿಸಿಕೊಂಡವರು ಸತ್ತು ಹೋಗುತ್ತಾರೆ. ಸತ್ತವರಿಗಾಗಿ ಇದ್ದವರು ಎರಡು ದಿನ ದುಃಖಿಸುತ್ತಾರೆ, ನಂತರ ಮರೆತು ಬಿಡುತ್ತಾರೆ. ಜನನ ಮರಣ ಇವು ಜಗದ ಕ್ರಿಯೆಗಳು. ಆದಕ್ಕಾಗಿ ಅವಕ್ಕೆ ಅಷ್ಟು ಮಹತ್ವವಿಲ್ಲ. ಆದರೆ ಹಾವಿಗಿಂತ ಹಾವಾದ ಗಂಡಸರು ಹಾಲು ಕುಡಿಸಿದವರನ್ನೂ ಕಚ್ಚುತ್ತಾರೆ. ಹಾಲು ಕುಡಿಯುವವರನ್ನೂ ಕಚ್ಚುತ್ತಾರೆ. ಗಂಡಸಿನ ಕಚ್ಚುವಿಕೆಯಲ್ಲಿ ಒಮ್ಮೆಲೆ

ಕೊಲ್ಲುವ ವಿಷವಿರುವದಿಲ್ಲ ಆದರೆ ಜಗದ ಸಮಸ್ತ ಯಾತನೆಯನ್ನು ಭನಿಸಿ, ನರಳಿ ಹೊರಳಿ ಸಾಯಿಸುವ ವಿಷವಿರುತ್ತದೆ. ಕಚ್ಚುವವರೂ ಅವರೇ. ಕಚ್ಚಿದ ನಂತರ ನೋಡಿ ಕೇಕೆ ಹಾಕುವವರೂ ಅವರೇ. ಹಿಂದಿನಿಂದ ಕಲ್ಲೆಸೆಯುವವರೂ ಅವರೆ......

ಹೀಗೆಲ್ಲ ಹೇಳುವಾಗ ಕಾಮಿನಿ ತಪ್ತಳಾಗುತ್ತಿದ್ದಳು.

ಆದರೆ ಅದೇ ಕಾಮಿನಿ ನನ್ನನ್ನು ಮಾಧವರಾಯರಿಗೆ ಒಪ್ಪಿಸಿದ್ದಳು.

ಎಂತಹ ವಿಚಿತ್ರ.........

ಮಾಧವರಾಯರು ನನ್ನನ್ನು ತುಂಬಾ ಪ್ರೀತಿಯಿಂದ ಕಾಣುತ್ತಿದ್ದರು. ಹೊಸದರಲ್ಲಿ ಕೆಲವು ದಿನಗಳ ವರೆಗೆ ಅವರ ಸಹವಾಸ ಅದೇಕೊ ಅಸಹ್ಯವೆನ್ನಿಸುತ್ತಿತ್ತು. ಇದು ನಾನು ಮಾಡಬಾರದ ಕೆಲಸ ಎನ್ನಿಸುತ್ತಿತ್ತು.

ಆದರೂ ಅದರಿಂದ, ಅವರಿಂದ ದೂರಿರಲಾಗುತ್ತಿರಲಿಲ್ಲ. ಏಕೆಂದರೆ ಅವರು ಹೊಟ್ಟೆಗೆ ಹಾಕುವ ಧನಿಗಳು. ನನ್ನ ಬೇಕು ಬೇಡಗಳನ್ನು ಪೂರೈಸುತ್ತಿದ್ದರು. ಯಾವ ಚಿಂತೆಯಿಲ್ಲದೆ ಈ ಜನ ಜಂಗುಳಿಯ ಮಧ್ಯ ನಿಶ್ಚಿಂತಳಾಗಿ ಇರುವದಕ್ಕೆ ಅವರು ಆಸ್ಪದ ಮಾಡಿಕೊಟ್ಟಿದ್ದರು. ಸಹಾಯ ಮಾಡುತ್ತಿದ್ದರು.

ಅವರು ನನಗೆ ಸಹಾಯ ಮಾಡಿರದಿದ್ದರೆ......?

ಒಮ್ಮೆ ದೂಡಿ ಹಾಕಿದ ಅವರು ತಿರುಗಿ ನನ್ನ ಕಡೆಗೆ ಬಂದಿರದಿದ್ದರೆ....?

ನನ್ನ ಬಾಳು ನಾಯಿಗಿಂತ ಕಡೆಯಾಗುತ್ತಿತ್ತು. ರೊಟ್ಟಿಯ ತುಣುಕಿಗಾಗಿ ಬೀದಿ ಬೀದಿ ಅಲೆಯುವ ಬಿಕ್ಷೆಯನಾಯಿ ನಾನಾಗುತ್ತಿದ್ದೆ.

ಆದರೆ ಈ ಮಾತನ್ನು, ವಿಚಾರವನ್ನು ಮೊದಲು ಕಾಮಿನಿ ಎಂದೂ ನಂಬುತ್ತಿದ್ದಿಲ್ಲ.

ಅವಳು " ಹುಚ್ಚಿ ನೀನು ಗಂಡನೆಂದರೆ ಅನ್ನ ಹಾಕುವವರ ಹಿಂದೆ ತಿರುಗುವ ನಾಯಿಯಲ್ಲ. ಅನ್ನ ಹಿಡಿದವರ ಹಿಂದಿನಿಂದ 'ಕುಯಿಂ' ಎನ್ನುತ್ತ ಬಾಲ ಅಲ್ಲಾಡಿಸುವ ಬೀದಿಯ ನಾಯಿ. ಬೀದಿಗೆ ಬೀಸಾಕಿದ ಅನ್ನಕ್ಕಾಗಿ ಹತ್ತು ಕಡೆಯಿಂದ ಧಾವಿಸಿ ಬರುವ ಬಿಕ್ಷೆಯ ನಾಯಿಗಳು ಗಂಡಸೆಂದರೆ. ಹೆಣ್ಣು ಎಂದರೆ ಸಾಕು ಜೀವದ ಪರಿವಿಲ್ಲದೆ ಧಾವಿಸುತ್ತಾರೆ." ಎಂದು ಹೇಳುತ್ತಿದ್ದಳು.

ಅವಳ ವಿಚಾರ, ಮಾತು ತುಂಬಾ ವಿಚಿತ್ರವಾಗಿರುತ್ತಿದ್ದವು. ಆರಂಭ ದಲ್ಲಿ ಅವಳು ಈ ರೀತಿ ಏಕೆ ಎನ್ನುವದು ನನಗೆ ತಿಳಿಯದಾಗಿತ್ತು. ನಾನು ಕೂಡ ಅವಳನ್ನು ಎಂದೂ ವಿಚಾರಿಸಿರಲಿಲ್ಲ. ಗಂಡಸರನ್ನು ಕಂಡರೆ ಉರಿದು ಬೀಳುವ ಅವಳ ಸಹವಾಸ ಯಾವಾಗಲೂ ಗಂಡಸರ ಜೊತೆಯಲ್ಲೇ !

ಆದರೆ ನನಗೆ ಮಾತ್ರ ಎಚ್ಚರ ಕೊಡುತ್ತಿದ್ದಳು. "ನೀನು ಯಾವ ಗಂಡ ಸನ್ನೂ ನಂಬಬೇಡ" ಎಂದು.

ಆದರೆ ನಾನು ಮಾಧವರಾಯರನ್ನು ನಂಬದೆ ಹೇಗೆ ಇರಲಿ?

ಅವರು ಅದೆಂದೂ ನನ್ನ ಇಚ್ಛೆಗೆ ವಿರೋಧವಾಗಿ ಆಚರಿಸಿರಲಿಲ್ಲ. ನಾನು ಹೇಳಿದ್ದೇ ಅವರಿಗೆ ಸತ್ಯ. ನನ್ನ ಮಾತು ವೇದವಾಕ್ಯ. ನನ್ನನ್ನೂ ಜೀವಕ್ಕಿಂತ ಹೆಚ್ಚಾಗಿ ಜೋಪಾನ ಮಾಡುತ್ತಿದ್ದರು.

ಆದರೆ ಕಾಮಿನಿ ಹೇಳುತ್ತಾಳೆ "ಗಂಡಸರನ್ನು ನಂಬಬೇಡ" ಎಂದು

ಈ ಜಗದಲ್ಲಿ ಹೆಣ್ಣು ಗಂಡಸನ್ನು, ಪತ್ನಿ ಪತಿಯರನ್ನು ನಂಬದಿದ್ದರೆ ಇನ್ನಾರನ್ನು ನಂಬುವದು ?

ಹೆಣ್ಣಿಗೆ ಒಂಟಿಯಾಗಿ ಬಾಳಲು ಸಾಧ್ಯವಿದೆಯೇ ?

ಗಂಡು ಏಕಾಕಿಯಾಗಿದ್ದರೆ ಜಗ ಮುಂದುವರಿಯುವದು ಹೇಗೆ ?

ಗಂಡು-ಹೆಣ್ಣು

ಗಂಡು-ಹೆಣ್ಣು ಒಬ್ಬರನ್ನೊಬ್ಬರು ದೂಡಿಕೊಂಡು ಬಾಳಲು ಸಾಧ್ಯ ವಿಲ್ಲ. ಗಂಡಸನ್ನು ಕಂಡರೆ ಉರಿದು ಬೀಳುವ ಕಾಮಿನಿಯ ತಂದೆ ಗಂಡಸ ಲ್ಲವೆ ?

ತಂದೆ ತಾಯಿಗಳ ಏಕರೂಪ ಜೀವನದಿಂದಲೇ ಸಂಸಾರದ ಬಳ್ಳಿ ಹಂದ ರವನ್ನು ಹಸಿರು ಮಾಡುವದು.

ತಂದೆ-ತಾಯಿ..............

ನನ್ನ ತಾಯಿಯಲ್ಲಿ ಏನಿದೆ ? ರೂಪವಿಲ್ಲ. ಶಕ್ತಿಯಿಲ್ಲ. ಹಿಂಡಿದರೆ ಹನಿ ನೆತ್ತರಕೂಡ ಬಾರದು. ಆದರೂ ನನ್ನ ತಂದೆ ಅವಳನ್ನು ಕಾಪಾಡಿಕೊಂಡು ಬಂದಿಲ್ಲವೆ ? ಕುಳಿತರೆ ಏಳಲಿಕ್ಕಾಗದ ತಾಯಿಯ ಕೆಲಸವನ್ನು ಕೂಡ ತಂದೆ

ನೋಡುತ್ತಿರಲ್ಲವೆ ? ತಂದೆ-ತಾಯಿಗಳಲ್ಲಿ ಪ್ರೀತಿ ಬಂಧನವಿಲ್ಲದಿದ್ದರೆ ಏಳು ಮಕ್ಕಳಾದರು ಹೇಗೆ ಹುಟ್ಟುತ್ತಿದ್ದವು ?

ಮಕ್ಕಳನ್ನು ಹೆರುವದಕ್ಕಾಗಿಯೇ ತಂದೆ ತಾಯನ್ನು ಪ್ರೀತಿಸುವನೆ ?

ದೈಹಿಕ ಸುಖವೇ ಗಂಡು ಹೆಣ್ಣುಗಳನ್ನು ಬಂಧಿಸುವ ಸಾಧನವೆ ? ಶಕ್ತಿಯೊ ?

ಛೆ ಇರಲಾರದು.

ಇರಲಾರದು ಎಂದೂ ಎನ್ನಲಾಗದು.

ನನ್ನ-ಮಾಧವರಾಯರನ್ನೂ ಒಂದೆಡೆಗೆ ಕೂಡಿಸಿದ ಸಾಧನವಾವುದು ? ಶಕ್ತಿಯಾವುದು ?

ದೈಹಿಕ ಸುಖವೆ ?

ಅಲ್ಲ.

ನನಗೆ ದೈಹಿಕ ಸುಖದ ಆಶೆ ಇದ್ದಿರಲಿಲ್ಲ. ಎಂದೂ ಕಾಣದವರ ಜೊತೆಗೆ ಅಂತಹ ಆಶೆಯಾದರೂ ಹೇಗೆ ಉದ್ಭವಿಸಬೇಕು ?

ಅವರು ಯಾರು ?

ತೀವ್ರ ಮಕ್ಕಳಾಗಿದ್ದರೆ ನನ್ನ ವಯಸ್ಸಿನ ಮಗಳು ಅವರಿಗಿರಬಹುದಾಗಿತ್ತು. ತಂದೆ ಮಗಳ ನಡುವೆ ದೈಹಿಕ ಸುಖವೆಲ್ಲಿಂದ ಬಂದೀತು ?

ಹಾಗಾದರೆ ನಮ್ಮನ್ನು ಬಂಧಿಸಿದ ಶಕ್ತಿ...... ?

ಹಣ.........

ಹಣ.......! ಅವರ ಹಣ ನನ್ನನ್ನು ಅವರ ಹತ್ತಿರ ಎಳೆಯಿತು. ನನ್ನನ್ನು ಅವರ ಹತ್ತಿರ ಎಳೆದ ಶಕ್ತಿ ಹಣ. ಅವರ ಹಣ.

ಮಾಧವರಾಯರನ್ನು ನನ್ನನ್ನು ಒಂದು ಗೂಡಿಸಿದ ಸಾಧನ ಹಣ.

ನನ್ನನ್ನು ಮಾಧವರಾಯರನ್ನು ಒಂದು ಗೂಡಿಸಿದ ಶಕ್ತಿ ದೈಹಿಕ ಸುಖ.

ಅವರಿಗೆ ನಾನು ಬೇಕಿದ್ದೆ.

ನನಗೆ ಅವರ ಹಣ ಬೇಕಿತ್ತು.

ಆ್ ರೆ ಈಗ್ಗೆ

ಈಗ ಅವರಿಗಾಗಿ ಒಂದು ತರಹದ ಭಾವನೆ ನನ್ನಲ್ಲಿ ಮೂಡುತ್ತದೆ. ಅವರು ಬಂಬಾರದೆನ್ನುವ ವಿಚಾರ ನನ್ನಲ್ಲಿ ಬರುವದಿಲ್ಲ. ಅವರು ಹೇಳಿದಾಗ ಬಾರದಿದ್ದರೆ ಅವರನ್ನು ಕಾಣುವವರೆಗೂ ಮನದಲ್ಲಿ ಚಿಂತೆ.

ಏಕೆ ? ಇದುವೆ ಪ್ರೀತಿಯೆ ?

ನನ್ನ ಅವರ ಸಂಬಂಧ ಹಣವೇ ಆಗಿದ್ದರೆ ಇಲಿಗಾಗಿ ಕಾದುಕೊಂಡು ಕುಳಿತ ಬೆಕ್ಕಿನಂತೆ ನಾನು ಅವರ ಹಣಕ್ಕಾಗಿ ಕಾದುಕೊಂಡು ಕುಳಿತಕೊಳ್ಳ ಬೇಕಿತ್ತು.

ಆದರೆ ಅಂತಹ ವಿಚಾರವೇ ನನ್ನಲ್ಲಿ ಮೂಡುವದಿಲ್ಲ. ಇಂತಹದು ನನಗೆ ಬೇಕು; ಎಂದು ನಾನು ತಪ್ಪಿಕೂಡ ಅವರೆದುರು ಹೇಳಿಲ್ಲ.

ಹಾಗಾದರೆ ನನ್ನ ಅವರ ಸಂಬಂಧ ದೈಹಿಕ ಸುಖವೆ ?

ಹಾಗೆಂದೂ ನಾನು ಹೇಳಲಾರೆ.

ಅವರು ಯಾವಾಗಲೂ ಬರುತ್ತಾರೆ. ಬಂದು ಹೋಗುತ್ತಾರೆ. ಹಗಲು ಬರುತ್ತಾರೆ ರಾತ್ರಿ ಬರುತ್ತಾರೆ. ಬಂದಾಗೆಲ್ಲ ಪ್ರಸನ್ನವದನರಾಗಿರುತ್ತಾರೆ. ನನ್ನನ್ನು ಕಂಡು ಮನಃಪೂರ್ವಕವಾಗಿ ನಗುತ್ತಾರೆ. ಆನಂದಿಸುತ್ತಾರೆ. ಹರುಷ ಹೊಂದುತ್ತಾರೆ.

ಆದರೆ ಆ ನಗುವಿನಲ್ಲಿ ಆನಂದದಲ್ಲಿ ಹರುಷದಲ್ಲಿ ಕಾಮದ ಲವಲೇಶವೂ ಇಲ್ಲ. ಪರಿಚಯವಾದ ಹೊಸದರಲ್ಲಿ ನನ್ನನ್ನು ಹಿಡಿದೆಳೆಯುತ್ತಿದ್ದರು. ಹತ್ತಿರ ಕೂಡುತ್ತಿದ್ದರು. ಈಗ್ಗೆ ಅದೂ ಕೂಡ ಇಲ್ಲ. ತಮ್ಮ ಮನೆಗೆ ಬಂದಂತೆ ಬರುತ್ತಾರೆ. ತಮ್ಮ ಮನೆಯಲ್ಲಿಯೇ ಇರುವಂತೆ ಇರುತ್ತಾರೆ. ಕೂಡುತ್ತಾರೆ. ನಿಲ್ಲುತ್ತಾರೆ. ಚಹ ಮಾಡುವಾಗ ಸಕ್ಕರೆಯ ಡಬ್ಬಿಯನ್ನು ಕೊಡುತ್ತಾರೆ. ಚಹ ಸೋಸುವಾಗ ಜಾಳಣಿ ಹಿಡಿಯುತ್ತಾರೆ. ಅಡಿಗೆ ಮಾಡುವಾಗ ಒಲೆಯ ಹತ್ತಿರ ಕೂಡುತ್ತಾರೆ. ನಾನು ಮಾಡಿದ ಅಡಿಗೆಯನ್ನು ಯಾವ ಸಂಕೋಚವಿಲ್ಲದೇ ಊಟಮಾಡುತ್ತಾರೆ. ಮನಸ್ಸು ಬಂದರೆ ಮಲಗುತ್ತಾರೆ. ಇಲ್ಲದಿದ್ದರೆ ಹೊರಟುತ್ತಾರೆ.

ಈ ಎಲ್ಲವುಗಳ ಮಧ್ಯದಲ್ಲಿ ತಪ್ಪಿಕೂಡ ಕಾಮುವ ಭಾವನೆಯಿಲ್ಲ. ಈಗ ಆಲ್ಲಿ ಅಂತಹ ಭಾವನೆ ಕಾಣದು.

ಆದರೆ ರಂಗನ ಕಂಗಳಲ್ಲಿ? ಗಿಡದ ಮರೆಯಲ್ಲಿ ಬೇಟೆಗಾಗಿ ನಿಂತ ಹಸಿದ ಹುಲಿಯ ಕಂಗಳಾಗಿದ್ದವು. ಯಾವಾಗಲೂ ನನ್ನ ನೇತ್ರ ಹೀರುವದಕ್ಕೆ ಬಾದ ಕಾಡು ಮೃಗದ ಕಂಗಳಾಗಿದ್ದವು ಅವು ದೇಹದ ಪ್ರತಿಯೊಂದು ಅಂಗಾಂಗಗಳನ್ನು ಎಳೆದು ಹರಿದು ಘಾಸಿಮಾಡುತ್ತಿದ್ದ ಆತ.

ಆದರೆ ಮಾಧವರಾಯರು ಹಾಗಲ್ಲ.

ಆತ ತರುಣ. ಮಾಧವರಾಯರು ತರುಣರಲ್ಲ.

ತರುಣರಲ್ಲದ ಮಾಧವರಾಯರು ಧೀರ ಗಂಭೀರ ವೃತ್ತಿಯಿಂದ ನನ್ನೊಡನೆ ನಡೆದು ಕೊಳ್ಳುತ್ತಿದ್ದರು.

ತರುಣನಾದ ರಂಗ ಉನ್ಮತ್ತತೆಯಿಂದ ಹುಂಬತನದಿಂದ ವರ್ತಿಸಿದ್ದ. ವೇಳೆ ಬಂದಾಗ್ಗೆ......?

ಅಯ್ಯೋ... ಅದರ ನೆನಹು ಬೇಡ... ಬೇಡ.

ಮಾಧವರಾಯರೂ ರಂಗನಂತೆ ವರ್ತಿಸಿದರೆ ...?

ರಂಗನೂ ಹೇಳುತ್ತಿದ್ದ— " ನಿಮ್ಮಿ... ನಿನಗೆ ಹೆದರಿಕೆ ಏಕೆ ? ನಾನಿಲ್ಲವೆ " ಅಹುದು. ರಂಗನಿದ್ದ ಆದರೆ ವೇಳೆ ಕೂಡಿಬಂದಾಗ್ಗೆ ಇದ್ದ ರಂಗ ಇಲ್ಲನಾದ. ಅವನ ದಾರಿಯಲ್ಲಿಯೇ ಮಾಧವರಾಯರು ಮುಂದುವರಿದರೆ........?

" ಸುಮಿತ್ರಾ ನಾನು ತರುಣನಲ್ಲ. ಹಿಂದು ಮುಂದಿನ ವಿಚಾರವಿಲ್ಲದೆ ಮನಕ್ಕೆ ತೋರಿದಂತೆ ಮಾತನಾಡುವ ಹುಡುಗುತನ ನನ್ನಲ್ಲಿ ಇಲ್ಲ. ನನಗೆ ಒಳಿತು ಕೆಡಕುಗಳ ವಿಚಾರವಿದೆ. ನನ್ನಿಂದ ಇನ್ನಾರಿಗೂ ಕೆಡಕಾಗಬಾರದು ಎನ್ನುವ ಭಾವನೆ ಇದೆ. ನನಗೆ ತಿಳುವಳಿಕೆ ಬಂದಂದಿನಿಂದ ನಾನಾಗಿಯೇ ಯಾರಿಗೂ ಕೆಡಕು ಮಾಡಿಲ್ಲ. ಇನ್ನೊಬ್ಬರಿಗೆ ಕೇಡು ಬಗೆದು ನನಗೆ ದೊರೆಕಿಸಬೇಕಾಗಿದೆಯಾದರೂ ಏನ? ನನ್ನ ಇಚ್ಛೆ ನೀನು ಸುಖಿಯಾಗಿರಬೇಕು ಎಂದು. ನನ್ನ ಇಚ್ಛೆ ನೀನು ಮಾನದಿಂದ ಬಾಳಬೇಕು ಎಂದು. ಸುಮಿತ್ರಾ.........ನನ್ನ ನಿನ್ನ ಕೂಡುವಿಕೆ ಈ ಜನ್ಮದ ಸಂಬಂಧವಲ್ಲ. ಪೂರ್ವ ಜನ್ಮದ ಋಣಾನು

ಬಂಧ. ಅದಾವುದೋ ಕರ್ಮಬಂಧನಕ್ಕೆ ಒಳಗಾಗಿ ಇಂದಿನ ವರೆಗೆ ನಾನು ನೀನು ದೂರಾಗಿದ್ದೆವು. ಆದರೆ ಇಂದು ಒಂದಾಗಿರುವೆವು........" ಎಂದು ಮಾಧವರಾಯರು ಹೇಳುತ್ತಾರೆ.

ಪೂರ್ವ ಜನ್ಮದ ಋಣಾನುಬಂಧ !

ಇದ್ದಿರಬಹುದು. ಇಲ್ಲದಿದ್ದರೆ ಇಷ್ಟೊಂದು ಅವರು ನನ್ನನ್ನು ಪ್ರೀತಿಸುತ್ತಿದ್ದರೆ ? ಹಣಕ್ಕಾಗಿ ಒಲಿದು ಬಂದ ಹೆಣ್ಣು ನಾನು. ನನ್ನವರ ಸಂಬಂಧ ಹಣವಾಗಿರಬಹುದಿತ್ತು. ಆದರೆ ಹಾಗಿಲ್ಲ ಅವರು ನನ್ನನ್ನು ವಿಶ್ವಾಸದಿಂದ ಕಾಣುತ್ತಾರೆ. ನನ್ನ ಮನೆ ಎಲ್ಲವನ್ನು ಶೋಧಿಸುತ್ತಾರೆ. ಯಾವುದರ ಕೊರತೆ ಎನ್ನಿಸುವದೊ ಅದರ ಕೊರತೆಯನ್ನು ದೂರ ಮಾಡುತ್ತಾರೆ. ಬಟ್ಟೆ ಬಳೆ ಏನಿದೆ ಏನಿಲ್ಲ....ಎಲ್ಲದರ ವಿಚಾರ ಅವರಿಗಿದೆ.

ನನ್ನ ತಂದೆ ಕೂಡ ಇಷ್ಟೊಂದು ನನ್ನ ವಿಚಾರವನ್ನು ಮಾಡಿರಲಿಲ್ಲ. ಬಟ್ಟೆ ಹರಿದು ಚಿಂದಿಯಾಗಿದ್ದರೂ ಬಟ್ಟೆ ತರುತ್ತಿರಲಿಲ್ಲ. ಹರಿದ ಚಿಂದಿಯನ್ನೆ ಮತ್ತೆ ಹೊಲಿದು ತೊಟ್ಟುಕೊಳ್ಳಬೇಕಾಗುತ್ತಿತ್ತು.

ಅದಕ್ಕೆ ಕಾರಣ ಬಡತನವೂ ಇದ್ದಿರಬಹುದೇ ?

ಇಲ್ಲ. ಹೊಟ್ಟೆ ಸಾಲುವಷ್ಟನ್ನು ಅಪ್ಪ ದುಡಿಯುತ್ತಿದ್ದ, ಹೊಲದ ಕಾಳು ಬರುತ್ತಿದ್ದವು. ಆದರೂ ಬಟ್ಟೆ ಬರೆಗಳು ಸಿಕ್ಕುತ್ತಿರಲಿಲ್ಲ. ಏಕೆಂದರೆ- ಮನೆಯಲ್ಲಿ ಬಿಸಾಕಿದ ವಸ್ತುವಾಗಿದ್ದೆ. ನಾನು.

ತಾಯಿ ಹೇಳುತ್ತಿದ್ದಳು " ನಿರ್ಮಲೆಯ ಬಟ್ಟೆಗಳು ಹರಿದುಹೋಗಿವೆ" ಬಟ್ಟೆ ತಗೆದುಕೊಂಡು ಬನ್ನಿರಿ " ಎಂದು.

ಈ ವಾಕ್ಯದ ಜಪ ನಡೆದಾಗ ಎಂದಾದರೊಂದು ದಿನ ಪ್ರತ್ಯಕ್ಷವಾಗುತ್ತಿತ್ತು ಬಟ್ಟೆ.

ಆದರೆ ಇಂದು ಹಾಗಿಲ್ಲ. ನಾನು ಹೇಳುವ ಅವಶ್ಯಕತೆಯೇ ಇಲ್ಲ. ನನಗೆ ಬೇಕಾಗದಿದ್ದರೂ ಅವರು ಬಟ್ಟೆ ತಂದು ಒಟ್ಟುತ್ತಾರೆ. ನನಗೇ " ಪೇಟೆಗೆ ಹೋಗಿ, ಬಟ್ಟೆ ಕೊಂಡು ಕೊಂಡು ಬಾ. ಬೇಕಾದರೆ ಕಾಮಿನಿ ಬಾಯಿಯನ್ನು ಕರೆದುಕೊಂಡು ಹೋಗು " ಎಂದೂ ಹೇಳುತ್ತಾರೆ.

ಕಾಮಿನಿ ಕೂಡ " ಹುಚ್ಚೀ ಕೊಡುವವರು ಸಮರ್ಥರಿರುವಾಗಲೇ ತೆಗೆದುಕೊಳ್ಳುವದೆಲ್ಲವನ್ನೂ ತಗೆದುಕೋ. ಹೋದ ವೇಳೆ ಬರಲಿಕ್ಕಿಲ್ಲ " ಎಂದು ಎಚ್ಚರಿಸುತ್ತಾಳೆ.

ನಾನು ಅವರಿಗೆ ನಾಳೆ ಬೇಡವಾಗಬಹುದೇ ?

ಏಕೆ ? ಕಾರಣವೇನು ?

ನಾನು ಹೆಂಡತಿಗಿಂತ ಹೆಂಡತಿಯಾಗಿ ನಡೆದುಕೊಳ್ಳುತ್ತಿರುವೆ. ನನ್ನ– ಮನದಲ್ಲಿ ತಪ್ಪಿಕೂಡ ಅವರಿಗಾಗಿ ಅನ್ಯ ವಿಚಾರಗಳಿಲ್ಲ. ಆದರೂ ನಾನೇಕೆ ಆವರಿಗೆ ಬೇಡವಾಗಬಹುದು ?

ಆದರೆ ಕ್ರೂರ ವಿಧಿ ಎದುರಾಳಿಯಾಗಿ ನನ್ನಂತಹ ಅಬಲೆಯೊಡನೆ ಹೋರಾಟಕ್ಕೆ ನಿಂತರೆ ನಾನು ಗೆಲ್ಲುವದಾದರೂ ಹೇಗೆ ? ನಾನು ಅಬಲೆ ವಿಧಿಯೊಡನೆ ಹೋರಾಡುವ ಶಕ್ತಿ ನನ್ನಲ್ಲಿ ಇಲ್ಲ. ನನ್ನನ್ನು ನಾನು ವಿಧಿಗೊಪ್ಪಿ ಕೊಳ್ಳುವೆ. ಅದರಂತೆ ಆಗಲಿ.

ನನಗೆ ಇನ್ನೇನೂ ಬೇಡ. ಯಾವುದನ್ನೂ ಅವರಿಂದ ಅಪೇಕ್ಷಿಸಲಾರೆ. ಅತ್ಯಾಶೆ ನನ್ನಲ್ಲಿ ಇಲ್ಲ. ನನ್ನ ಇದ್ದ ಒಂದೇ ಒಂದು ಆಶೆ......

ಮಾನವಂತಳಾಗಿ ಬಾಳುವದು. ಅದುವೇ ನನ್ನ ಹಿರಿದಾದ ಆಶೆ.

ಎಲ್ಲ ಸ್ತ್ರೀಯರಂತೆ ವಿವಾಹ ಮಾಡಿಕೊಂಡು ಬಾಳುವದು ನನ್ನ ಹಣೆಬ ರಹದಲ್ಲಿ ಬರೆದಿಲ್ಲ. ನಿಜ. ಆದರೆ 'ಬೀದಿಯ ಹೆಣ್ಣು' ನಾನಾಗುವದು ಬೇಡ

'ದೇವಾ ನಾನು ಅರಿತು ಆದಾವ ಅಪರಾಧವನ್ನು ಮಾಡಲಿಲ್ಲ ಅರಿ ಯದ ಹುಚ್ಚು ಹುಡುಗಿ ಇದ್ದಾಗ ನಾನು ದಾರಿ ತಪ್ಪಿದೆ. ದಾರಿ ತಪ್ಪಿದ ನಾನು ಪುನಃ ದಾರಿಗೆ ಹತ್ತಲು ಪ್ರಯತ್ನ ಮಾಡಿದೆ........ ದೇವಾ ನಿನಗರಿಯದ್ದು ಇನ್ನೇನಾದರೂ ಉಂಟೆ ಈ ಜಗದಲ್ಲಿ ? '

ನನ್ನ ಜೀವನದ ನೆನಹು ನುಗ್ಗಿದಾಗ ಜೀವ ವಿದೀರ್ಣವಾಗುತ್ತಿತ್ತು. ಜಗತ್ತನ್ನು ದಹಿಸುವ ಜ್ವಾಲೆ ನನ್ನನ್ನು ಸುತ್ತಿದಂತಾಗುತ್ತಿತ್ತು. ನಾನು ತಳ ಮಳಿಸುತ್ತಿದ್ದೆ. ನನ್ನನ್ನು ಈ ಅವಸ್ಥೆಗೆ ತಂದವರನ್ನು ಶಪಿಸುತ್ತಿದ್ದೆ.

ಯಾರು ನನ್ನನ್ನು ಈ ಅವಸ್ಥೆಗೆ ಗುರಿಮಾಡಿದವರು ? ಯಾರು ?

ಯಾರೂ ಅಲ್ಲ. ನಾನು. ನಾನೇ ನನ್ನನ್ನ ಕಾಣದ ಆಳವಾದ ಕಂದರಕ್ಕೆ ನೂಕಿಕೊಂಡೆ. ಮತ್ತು ನನ್ನ ಹಿಂದಿನ ಕರ್ಮಕ್ಕಾಗಿ ಇನ್ನೊಬ್ಬರನ್ನು ಹೆರವರನ್ನು ಹಳಿಯುವದರಲ್ಲಿ ಅದಾವ ಲಾಭವಿದೆ ?

ಪ್ರತಿ ವ್ಯಕ್ತಿಗೂ ದೇಹಕ್ಕೆ ಹೊಂದಿಕೊಂಡು ಬಂದ ಮನವಿದೆ. ಸ್ವಾರ್ಥವಿದೆ. ಪ್ರತಿಯೊಬ್ಬರೂ ವಿಚಾರ ಮಾಡುವದು ತಮ್ಮ ವಿಷಯವನ್ನು, ತಮ್ಮ ಸುಖವನ್ನು. ಅಲ್ಲದೆ ಹೆರವರ ವಿಷಯವನ್ನಲ್ಲ ಹೆರವರ ಕಲ್ಯಾಣವನ್ನಲ್ಲ

ತಮ್ಮ ಸುಖದ ಸಾಧನೆಯಲ್ಲಿ ವ್ಯಕ್ತಿ ತೊಡಗಿದಾಗ ಇನ್ನೊಬ್ಬರಿಗೆ ಅದರಿಂದ ಅಪಾಯವಾಗುವದುಂಟು. ಅಕಲ್ಯಾಣವಾಗುವದುಂಟು. ಅದಕ್ಕೆ ದೋಷಿ ಆ ವ್ಯಕ್ತಿಯಲ್ಲ.

ಎಲ್ಲರೂ ತಮ್ಮತಮ್ಮ ವಿಷಯಕ್ಕೆ ಜಾಗೃತರಿದ್ದರೆ, ಇನ್ನೊಬ್ಬರ ಸ್ವಾರ್ಥ ದೂಷಿತ ದೃಷ್ಟಿಯಿಂದ ದೂರಿದ್ದರೆ, ಯಾರ ಅಕಲ್ಯಾಣವೂ ಆಗದು.

ಆದರೆ ನಾನು ಅಜಾಗೃತಳಿದ್ದೆ. ಅಂತೆಯೇ ಇನ್ನೊಬ್ಬರು ಒಡ್ಡಿದ ಬಲೆಯಲ್ಲಿ ಬಿದ್ದೆ.

ಬಲೆ ಒಡ್ಡುವದು ಬೇಟೆಯಾಡಲಿಕ್ಕೆ. ಬೇಟೆ ಹಿಡಿಯಲಿಕ್ಕೆ.

ಬಲೆಯಲ್ಲಿ ಸಿಕ್ಕುಬಿದ್ದ ಬೇಟೆಯನ್ನು ಮುಕ್ತಗೊಳಿಸುವದಾದರೆ— ಬೇಟೆ ಆಡುವದಾದರೂ ಏಕೆ? ಅದೂ ಒಂದು ವೇಳೆ ಹೋಗದ ಉದ್ಯೋಗವೆ? ಅಥವಾ ವೇಳೆಗಳೆಯುವ ಸಾಧನವೆ ?

ನಾನು ಬೇಟೆಗಾರನ ಬಲೆಯಲ್ಲಿ ಸಿಕ್ಕುಬಿದ್ದೆ.

ಬೇಟೆಗಾರನ ಉದ್ದೇಶ ಸಫಲವಾಯಿತು.

ನನ್ನ ಜೀವನ ಹಾಳಾಯಿತು. ನಾನು ಹಾಳಾಗಿ ಹಾದಿಗೂಡುವ ವೇಳೆ ಬಂದಿತ್ತು. ಆದರೆ ನನ್ನ ದೈವ, ದೇವರಂತಹರೊಬ್ಬರು ನನಗೆ ನೆರವಿನ ಕೈ ಮುಂದು ಚಾಚಿದರು.

ಅವರು........

ಅವರೇ ಕುಲಕರ್ಣಿಯವರು.

ಆದರೆ ನನ್ನ ದುರ್ಭಾಗ್ಯ. ಅವರೂ ನನ್ನವರಾಗಿ ಉಳಿಯಲಿಲ್ಲ. ಮನೆಯಿಂದ ಮನಿಗೆ ತಿರುಗುವ ಬೀದಿಯ ನಾಯಿಯಂತೆ ನನ್ನ ಅವಸ್ಥೆಯಾಯಿತು.

ಅಂತಹ ಅವಸ್ಥೆಯಲ್ಲಿಯೂ ನಾನು ಸುದೈವಿಯೇ ಆಗಿದೆ. ಆಂತೆಯೇ ದೇವರಂತಹ ಮಾಧವರಾಯರು ನನ್ನನ್ನು ಸಲಹತೊಡಗಿದರು.

" ಹುಚ್ಚಿ ನಾನು ದೇವರಲ್ಲ. ಮನುಷ್ಯ, ಹುಟ್ಟಿಬಂದ ಮನುಷ್ಯನಿಗೆ ಹಲವು ಕರ್ತವ್ಯಗಳು ಇರುತ್ತವೆ ಅವನ್ನು ಅತ ನಿರ್ವಹಿಸಲೇಬೇಕು. ಇಲ್ಲದಿದ್ದರೆ ಕೃತಘ್ನನಾಗುತ್ತಾನೆ. ಕರ್ತವ್ಯಚ್ಯುತನಾಗುತ್ತಾನೆ. ಸುಮಿತ್ರಾ... ....... ಇದೂ ಒಂದು ನನ್ನ ಕರ್ತವ್ಯ. ಅದನ್ನು ನಾನು ಪೂರ್ಣಗೊಳಿಸಬೇಕಾಗಿದೆ...ಒಂದೊಂದು ಸಲ ನಿನ್ನನ್ನು ಲಗ್ನವಾಗಬಾರದೇಕೆ ಎನಿಸುತ್ತದೆ. ಆದರೆ ಈಗಾಗಲೇ ನನ್ನ ಲಗ್ನವಾಗಿದೆ. ಹೊಸ ಕಾಯಿದೆಯಿಂದಾಗಿ ಇನ್ನೊಂದು ವಿವಾಹವಾಗಲುಬಾರದು...... ವಿವಾಹವಾಗದಿದ್ದರೆ ಇರಲಿ, ಮನದಿಂದ ನಾವು ಪತಿ-ಪತ್ನಿಯರೇ ಆಗಿರುವೆವು. ಸುಮಿತ್ರಾ ನನಗೆ ಹೆಂಡತಿ ಇರುವಳು. ಮಕ್ಕಳು ಇರುವರು. ಹೆಂಡತಿ ಮಕ್ಕಳಿರುವವರು ಹೀಗೆಲ್ಲ ಮಾಡಕೂಡದು ಎಂದು ಜನ ಹೇಳುತ್ತಾರೆ. ಆದರೆ ಹಾಗೆ ಹೇಳಬೇಕಾದುದು ಪಾಪಿಗಳಿಗೆ. ನಾನು ಮಾಡುವದು ಪಾಪವಲ್ಲವೆಂಬ ನಂಬಿಗೆ ನನ್ನಲ್ಲಿದೆ.... ಇದು ಪಾಪವೆಂದು ಪುರಾಣ ಕಾಲದಲ್ಲಿ ಒಬ್ಬರು ಹಲವು ವಿವಾಹಗಳನ್ನು ಮಾಡಿಕೊಳ್ಳುತ್ತಿರಲಿಲ್ಲವೆ ? ಆಸ್ಪದವಿದ್ದರೆ ನಾನುಕೂಡ ವಿವಾಹ ಮಾಡಿಕೊಳ್ಳುತ್ತಿದ್ದೆ.... ಸುಮಿತ್ರಾ... ನನ್ನ ಮೇಲೆ ನಿನಗೆ ನಂಬಿಗೆಯಿಲ್ಲವೆ ? ನಾನು ಹಣವಂತನೆಂಬ ಹೆಮ್ಮೆ, ಗರ್ವ ನನ್ನಲ್ಲಿ ಇಲ್ಲ. ಹಣ ಬರುತ್ತದೆ— ಹೋಗುತ್ತದೆ. ಅದಕ್ಕಾಗಿ ಗರ್ವ ತಾಳುವದು ಹುಚ್ಚುತನ...... "

ಅವರು ಮಾತನ್ನಾಡುತ್ತಿದ್ದರು ಅವರ ಮಾತುಗಳೆಲ್ಲವೂ ನನಗೆ ಹಿತಕರವಾಗಿರುತ್ತಿದ್ದವು. ನಾನು ಅವರನ್ನು ನಂಬದೆ ಹೇಗೆ ಇರಲಿ ? ಅವರಲ್ಲಿ ನಾನು ಅವಿಶ್ವಾಸವನ್ನು ತಾಳುವದಾದರೂ ಹೇಗೆ ?

ದೇವರನ್ನು ನಂಬದೆ ಹೋದರೆ ಇನ್ನಾರನ್ನು ನಂಬುವದು ?

ಅವರು ನನ್ನಪಾಲಿನ ದೇವರಾಗಿದ್ದರು.

ದೇವರಿಗೆ ತಾನು ನಿರ್ಮಿಸಿದ ತನ್ನ ಆಶ್ರಿತ ಮನುಷ್ಯಪ್ರಾಣಿಗಳ ಚಿಂತೆ.

ತಮ್ಮ ಆಶ್ರಿತ ನನ್ನ ಚಿಂತೆ ನನ್ನ ದೇವರಿಗೆ.

ನನಗೆ ಆಶ್ರಯ ಕೊಟ್ಟ ಅವರು ತಾವು ಆದಾವ ಮಹಾಕಾರ್ಯವನ್ನು ಮಾಡಿಲ್ಲವೆಂದು ಹೇಳುತ್ತಿದ್ದರು ಅವರು ನನ್ನ ಬಳಿಗೆ ಬರುತ್ತಿದ್ದದು ನಾನು 'ಅವರ ಹೆಣ್ಣು' ಎಂದಲ್ಲ. ನಾನವರ ಹೆಂಡತಿಯೆಂದು.

ಗಂಡ ಹೆಂಡರ ನಡುವಿನ ಸಂಬಂಧ ಗಂಡು ಹೆಣ್ಣುಗಳ ನಡುವಿನ ಸಂಬಂಧವಾಗಿರಲಾರದು. ಸಂಬಂಧವಾಗಿರಬಾರದು.

ಜಗತ್ತಿನ ಪ್ರಗತಿಯಾಗುವದು 'ಗಂಡು ಹೆಣ್ಣು'ಗಳಿಂದ ಅಲ್ಲ. ಪತಿ ಪತ್ನಿಯರಿಂದ. ಕಾಮವೇ ಜಗದ ಮೂಲವಲ್ಲ, ಜಗದ ಉತ್ಪತ್ತಿಗೆ ಕಾಮವೂ ಒಂದು ಸಾಧನ ಅಲ್ಲದೆ ಅದುವೇ ಜಗದ ಬೀಜವಲ್ಲ

ಕಾಮವು ನಮ್ಮ ಜೀವನದಲ್ಲಿ ಆದಾವ ಮಹತ್ವದ ಸ್ಥಾನವನ್ನೂ ಆಕ್ರಮಿಸಿರಲಿಲ್ಲ. ನಮ್ಮ ಮಿಲನಕ್ಕೆ ಅದುವೇ ಮೂಲವಾಗಿರಲೂಬಹುದು. ಆದನ್ನು ಅಲ್ಲಗಳೆಯುವ ಅಧಿಕಾರ ನನ್ನಲ್ಲಿ ಇಲ್ಲ ಏಕೆಂದರೆ ಹೆಣ್ಣುಒಬ್ಬಳೇ ಕಾಮ ಜೀವನದ ಜೀವವಲ್ಲ. ಅವಳೂ ಒಬ್ಬಳು ಪಾಲುಗಾರ್ತಿ.

ಅವರು ಹೇಳುವರು 'ತಾವು ತಮ್ಮ ಕರ್ತವ್ಯವನ್ನು ನಿರ್ವಹಿಸುತ್ತಿರುವೆ' ಎಂದು ಆದರೆ ನಾನಾರು ? ನನ್ನನ್ನು ಬೆಳೆಸುವ ಬಾಳಿಸುವ ಹೊಣೆಗಾರಿಕೆ ಅವರ ಮೇಲೆ ಏಕೆ ?

ನನ್ನ ಅವರ ಸಂಬಂಧವೇನು ?

ನಾನವರ ಪತ್ನಿಯಲ್ಲ

ಸರಕಾರದ ಕಾಯಿದೆ ಇಲ್ಲದಿದ್ದರೆ ನಿನ್ನನ್ನು ವಿವಾಹ ಮಾಡಿಕೊಳ್ಳುತ್ತಿದ್ದೆ ಎಂದೂ ಅವರು ಹೇಳುತ್ತಾರೆ.

ಅವರಿಗೆ ನನ್ನ ಜೀವನ ಪೂರ್ಣ ಪರಿಚಯ ವಿರಲಿಕ್ಕಿಲ್ಲ. ನನ್ನ ಜೀವನದ ಪರಿಚಯವಿದ್ದುದಾದರೂ ನೆನ್ನೊಡನೆ ವಿವಾಹಕ್ಕೆ ಸಿದ್ಧರಾಗಬಾರದು.

ಆದರೆ ಕುಲಕರ್ಣಿಯವರು..........?

ಅವರು ವಿವಾಹಕ್ಕೆ ಸಿದ್ಧರಾಗಿದ್ದರು ! ಅವರಿಗೆ ನನ್ನ ಜೀವನದ ಪೂರ್ಣ ಪರಿಚಯ ವಿದ್ದಿತು.

ಇಲ್ಲ ಅವರಿಗೆ ನಾನೇ ಎಲ್ಲವನ್ನೂ ಹೇಳಿಕೊಟ್ಟಿದ್ದೆ.

ನನ್ನ ಹಾಳಾದ ಜೀವನ ಅವರಿಗೆ ಪರಿಚಯವಾಗಿದ್ದಿತು. ನನ್ನ ಕುಲ ಗೋತ್ರಗಳು ಅವರಿಗೆ ಗೊತ್ತಿದ್ದವು. ಆದರೂ ಅವರು ಹೇಳುತ್ತಿದ್ದರು

" ನೋಡಿರಿ...... ಈ ಜಗದಲ್ಲಿ ನಡೆಯುವವರು ಎಡವುತ್ತಾರೆ. ತಾವು ಎಡವಿ ಬೀಳುವೆವೆಂದು ನಡೆಯುವದನ್ನು ಬಿಟ್ಟು ಕುಳಿತುಕೊಳ್ಳಲಾಗುತ್ತದೆಯೇ ? ಕುಳಿತುಕೊಳ್ಳುವದೇ ಆಗಿದ್ದರೆ ಕಾಲುಗಳಾದರೂ ಏಕೆ ? ಏನೋ ಯಾವುದೋ ಒಂದು ವಿಷಘಳಿಗೆಯಲ್ಲಿ ನಮ್ಮೆಲ್ಲರಿಂದಲೂ ತಪ್ಪುಘಟಿಸುತ್ತದೆ ಕಡಿಯ ಆ ಕಡ್ಡಿಯಂತಹ ತಪ್ಪನ್ನೇ ಹಿಮಾಲಯದ ಎತ್ತರಕ್ಕೆ ಏರಿಸಿದರೆ ಆಗುವದೇನು ? ಆದರಿಂದ ಯಾವ ಕಾರ್ಯವನ್ನೂ ಮಾಡಿದ ಪುಣ್ಯ ಸಿಕ್ಕದೆ ಅಂತಹ ಕಾರ್ಯದ ಪಾಪ ಮಾಡಿದ ಮನುಷ್ಯನಿಗೆ ಅಂಟಿಕೊಂಡು ಜನ್ಮ ಜನ್ಮಕ್ಕೂ ಆವರಲ್ಲಿ ತೊಳಲಾಡುತ್ತಾನೆ ......" ಎಂದು

ಇಂದು ಅವರೇ ಇದ್ದಿದ್ದರೆ ? ನನ್ನ ಜೊತೆಗೆ ಅವರು ವಿವಾಹ ಮಾಡಿಕೊಂಡಿದ್ದರೆ........? ನಾನವರ ಮಡದಿಯಾಗಿದ್ದರೆ . ....?

ಎಲ್ಲವೂ ವಿಚಾರ; ಎಲ್ಲವೂ ನನ್ನ ವಿಚಾರ. ಓರ್ವ ಅಬಲೆಯ ವಿಚಾರ. ಎಲ್ಲವನ್ನೂ ಕಳೆದುಕೊಂಡ ಹೆಣ್ಣಿನ ವಿಚಾರ.

ಎಲ್ಲವೂ ಕಳೆದು ಹೋಗುವದಕ್ಕೆ ಆರಂಭವಾಗುವ ಪೂರ್ವದತ್ತ ಈ ಇಂತಹ ವಿಚಾರ ಮೂಡಿದ್ದರೆ......?

ವಿಚಾರಗಳು ಆಗಲೂ ಇದ್ದವು. ಆದರೆ ವಿಚಾರವನ್ನು ಆಚಾರದಲ್ಲಿ ಪರಿವರ್ತಿಸುವ ಶಕ್ತಿಯಿರಲಿಲ್ಲ. ನಾನು ಆಗ ಹುಂಬ ವಯಸಿನ ತರುಣಿಯಾಗಿದ್ದೆ. ಮನ, ದೇಹ ಸುಖದ ದಾರಿಯಲ್ಲಿ ಇದ್ದು ಕಡಿವಾಣವನ್ನು ಕಿತ್ತೆಸೆದು ಉನ್ನತೆಯಿಂದ ಧಾವಿಸುತ್ತಿತ್ತು ಹಿರಿಯರ ಹಿತವಚನಗಳು ಕಸಕ್ಕಿಂತ ಕಡೆಯಾಗಿದ್ದವು. ಕಿವಿಯಲ್ಲಿ ಸೇರುತ್ತಲೇ ಇರಲಿಲ್ಲ. ನನ್ನನ್ನು ಕಾಣುವ ಗಂಡಿನಿಂದ ನನಗೆ ಅನ್ಯಾಯವಾಗಬಹುದೆನ್ನುವ ವಿಚಾರ ತಪ್ಪಿಕೂಡ ಮನದಲ್ಲಿ ಉದ್ಭವಿಸುತ್ತಿರಲಿಲ್ಲ. ಜಗತ್ತು, ಜನ, ಮನೆ, ತಂದೆ ತಾಯಿಗಳು ಎಲ್ಲರೂ ಬೇಡವಾಗುತ್ತಿದ್ದರು. ಆಗ್ಗೆ ತಿರುತಿರುಗಿ ಬರುವ ವಿಚಾರ.

ಅವ ಬರುವದಕ್ಕೆ ಇಷ್ಟೇಕೆ ವೇಳೆ ?

ಏಕೆ ತೀವ್ರ ಬರಲಿಲ್ಲ......?

ಆತ ತೀವ್ರ ಬರಬಾರದೇಕೆ ?

ಎಲ್ಲದಕ್ಕೂ ಉತ್ತರ ಅವನ ಹಾಸ್ಯವಾಗಿರುತ್ತಿತ್ತು. ಆ ಹಾಸ್ಯದ ಹುಚ್ಚು ಹೊಳೆಯಲ್ಲಿ ಎಲ್ಲವೂ ತೇಲಿ ಹೋಗುತ್ತಿತ್ತು. ಹೃದಯದ ಹೊಳೆಯ ನೀರು ನಿರ್ಮಲವಾಗುತ್ತಿದ್ದವು. ಮಳೆಗಾಲದ ಉಬ್ಬಿನ ಕಡಿಮೆಯಾಗಿ ನೀರು ಮಂಜು ಳನಾದ ಗೈಯುತ್ತ ಛುಮ್ ಛುಮ್ ಎಂದು ಗೆಜ್ಜೆಕಟ್ಟಿದ ಪುಟ್ಟ ಮಗುವಿ ನಂತೆ ನಲಿಯುತ್ತ ಅಲೆಯುತ್ತಿತ್ತು.

ಎರಡು ತರುಣ ಹೃದಯಗಳು ಯಾರಿಗೆ ಅರಿವಿಲ್ಲದಂತೆ ಕೂಡಿದಾಗ ಮಲಿತನಿಂತ ನೀರಿಗೆ ನೆರೆಬರುತ್ತಿತ್ತು. ಕಾಮದ ಉನ್ಮತ್ತತೆ ಎಲ್ಲ ವಿಚಾರದ ಚಿಕ್ಕ ದೊಡ್ಡ ಗಿಡಗಂಟೆಗಳನ್ನು ಅಡೆ ತಡೆಯನ್ನು ಲೆಕ್ಕಿಸದೆ ಮಾರ್ಗದಲ್ಲಿ ಎದುರು ಬಂದವುಗಳನ್ನು ಕೊಚ್ಚಿಕೊಂಡು ನುಗ್ಗುತ್ತಿತ್ತು. ಆಗ್ಗೆ ನನ್ನ ಅಸ್ತಿ ತ್ವದ ನೆಲೆಯೇ ನನಗಿರುತ್ತಿರಲಿಲ್ಲ.

ನಾನು ಎಲ್ಲಿಯೋ ಅಲೆಯುತ್ತಿದ್ದೆ. ಆಗಸದಲ್ಲಿ ಕಾಲುಬುಡದಲ್ಲಿ ನೆಲದ ಆಧಾರವಿಲ್ಲದೆ ನರ್ತಿಸುತ್ತಿದ್ದೆ. ರೆಕ್ಕೆಗಳಿಲ್ಲದೆ ಅಂತರಿಕ್ಷದಲ್ಲಿ ಹಕ್ಕಿಗಿಂತ ಹಕ್ಕಿ ಯಾಗಿ ಹಾರುತ್ತಿದ್ದೆ. ನಾಲ್ಕು ಗೋಡೆಗಳ ಆಧಾರವಿಲ್ಲದೆ ಭವ್ಯ ಮಹಲಿಗೆ ಛಾವಣಿ ಹಾಕಲೆತ್ನಿಸುತ್ತಿದ್ದೆ.

ಗೋಡೆಯ ಆಧಾರವಿಲ್ಲದ ಛಾವಣಿ ನಿಂತೀತೆ ?

ರೆಕ್ಕೆಯಿಲ್ಲದೆ ಆಗಸದಲ್ಲಿ ಹಾರಬಹುದೆ ?

ನೆಲದ ಆಧಾರವಿಲ್ಲದೆ ನರ್ತಿಸಲು ಸಾಧ್ಯವೆ ?

ಆಗಸದಲ್ಲಿ ಗಾಳಿ ಸವಾರಿ ಮಾಡಬಹುದೆ ?

ಇವೆಲ್ಲ ವಿಚಾರಕ್ಕೆ ಸಾಧ್ಯ.

ಆದರೆ ಅವೆಲ್ಲವೂ ನನ್ನ ಆಚಾರವಾಗಿದ್ದವು !

ಅಂತೆಯೇ ನನ್ನ ಮಸ್ತಕ ನೆಲಕ್ಕೆ ಅಪ್ಪಳಿಸಿತು. ಸತ್ಯಲೋಕದ ಅರಿವು ಬಂದಿತು. ನನ್ನ ಸುತ್ತೆಲ್ಲ ನೋಡಿದೆ.

ಏನಿತ್ತು ? ಏನು ಉಳಿದಿತ್ತು ?

ಎಲ್ಲವೂ ಮಾಯವಾಗಿತ್ತು. ರಾಕ್ಷಸ ಮಾಯಾ ಮಹಲಿನಂತೆ ಇದ್ದುದೆಲ್ಲವೂ ಮಾಯವಾಗಿತ್ತು. ನಾಲ್ಕೂ ದಿಕ್ಕಿನಲ್ಲಿ ನನಗಾಗಿ ಉಳಿದುದು ನನ್ನನ್ನು ಹರಿದು ತಿನ್ನಲು ಮುತ್ತಿಬರುವ ಜನ, ನೆರೆಹೊರೆಯವರು, ಮನೆಯ ತಂದೆ-ತಾಯಿಗಳು ಮನೆಯವನೆಂದು ನಂಬಿದವನ ತಂದೆ-ತಾಯಿಗಳು. ಎಲ್ಲರ ಮಧ್ಯದಲ್ಲಿ ನಾನು ಒಬ್ಬಳೇ ಒಬ್ಬಳು

ನಾನು ಎಲ್ಲರಂತೆ ಇರಲಿಲ್ಲ. ನಾನು ಎಲ್ಲರಂತೆ ಆಚರಿಸಿರಲಿಲ್ಲ.

ನನ್ನಂತಹ ತರುಣಿಯರೆಲ್ಲರಿಗೂ ಮನೆಯಲ್ಲಿ ಮಾಡಿಕೊಂಡವನೊಬ್ಬ ಇರುತ್ತಿದ್ದ. ಅಂತೆಯೇ ಅವರು ಬಣ್ಣ ಬದಲಾದಾಗ ದೇಹದ ಭಾರ ಹೆಚ್ಚಿದಾಗ ಎಲ್ಲೆಲ್ಲಿಯೂ ಸಂಭ್ರಮ, ವಿಜೃಂಭಣೆ

ನನಗೆ ಮಾಡಿಕೊಂಡವನ ಮನೆಯಿರಲಿಲ್ಲ. ಮಾಡಿಕೊಳ್ಳುವವನಿರಲಿಲ್ಲ. ಮಾಡಿಕೊಳ್ಳುವೆನೆಂದವ ಮರೆಯಾಗಿದ್ದ. ಶಕುಂತಲೆಯನ್ನು ಗರ್ಭದಲ್ಲಿ ಧರಿಸಿದ ಮೆನಕೆಯ ಎದುರಿನ ವಿಶ್ವಾಮಿತ್ರನಾಗಿದ್ದ ಆತ.

ಸುತ್ತಲಿನವರ ಕ್ರೂರ ಮಾತು ತಪ್ತ ಕಬ್ಬಿಣ ಒಣಗಿದ ಕೊರಡಿನಲ್ಲಿ ಸೇರುವಂತೆ ಸೇರುತ್ತಿದ್ದವು ನನ್ನ ಕಿವಿಯಲ್ಲಿ ತೀಕ್ಷ್ಣವಾಗಿ, ತೀವ್ರವಾಗಿ. ಅದರ ಜೊತೆಗೆ ತಂದೆ "ಯಾರು ಆತ ? ಅವನ ಹೆಸರೇನು !" ಎಂದು ದೇಹ ಹಣ್ಣಾಗುವಂತೆ ಗುದ್ದಿ ಕೇಳುತ್ತಿದ್ದ.

ನನ್ನ ದೇಹ ಜರ್ಜರವಾಗಿತ್ತು. ಹೊಟ್ಟೆಯೊಳಗೆ ನಾನು ಹೆರಲಿರುವ ಕೂಸಿನ ಕಾಟ. ಹೊರಕ್ಕೆ ನನ್ನನ್ನು ಹೆತ್ತ ತಂದೆಯ ಕೋಪ.

ನಾನು ಹೆಣ್ಣು.ಸಾಮಾನ್ಯ ಅಬಲೆ. ಕ್ರೂರ ಪ್ರಹಾರಕ್ಕೆ ಎಲ್ಲಿಯವರೆಗಾದರೂ ತಾಳುವದು ?

ನಾನು ನಿಶ್ಚೇಷ್ಟಿತಳಾಗಿ ಬಿದ್ದೆ. ಆದರೂ ಹೆತ್ತವರುಳಿಗೆ ದಯೆ ಇದ್ದಿರಲಿಲ್ಲ !

"ಇವಳು ನಾನು ಹೆತ್ತ ಮಗಳಲ್ಲ. ನಮ್ಮ ಮನೆತನದ ಮುಖಕ್ಕೆ ಕಪ್ಪು ತೊಡೆಯಲು ಜನ್ಮ ತಾಳಿದ ನನ್ನ ಹಿಂದಿನ ಜನ್ಮದ ವೈರಿ" ಎಂದು ಇಂದು ನಾನು ಮಾಡಿದ ಅಪರಾಧವನ್ನು ಇನ್ನಾರಮೇಲೆಯೋ ಹಾಕಿ

ಅಸಮಾಧಾನದಲ್ಲಿಯೇ ಕೊಂಚ ಸಮಾಧಾನ ಪಡೆಯಲೆತ್ನಿಸುತ್ತಿದ್ದರು ನನ್ನ ತಂದೆ-ತಾಯಿ.

ತಂದೆ-ತಾಯಿ.

ಹೊತ್ತು ಬೆಳೆಸಿ ಜನ್ಮ ಕೊಟ್ಟವಳು ತಾಯಿ.

ಅದಕ್ಕೆ ಸಹಾಯಕ ತಂದೆ.

ಇವರ ಕರ್ತವ್ಯ ಮಕ್ಕಳನ್ನು ಆಡಿಸುವದು, ಬೆಳೆಸುವದು, ಬಾಳಿಸುವದು.

ಆದರೆ ಬಾಳಿಸುವ ತಂದೆ ಬಾಳು ಮುಗಿಸಲು ಹೇಳುತ್ತಿದ್ದ. "ಹೋಗು.... ಎಲ್ಲಿಯಾದರೂ ಹೋಗಿ ಬಾವಿ ಹಾರಿಕೋ. ನಿನ್ನ ಕಲಂಕಿತ ಮುಖವನ್ನು ಈ ಜಗದಿಂದ ಮರೆ ಮಾಡು........ನೀನು ಹುಟ್ಟಬಾರದಿತ್ತು ಹುಟ್ಟಿದ್ದರೂ ಹುಟ್ಟಿದ ಕೂಡಲೆ ಸತ್ತುಹೋಗಬೇಕಿತ್ತು .. .... ನಿನ್ನಿಂದ ......"

ಬೆಳೆಸುವ ತಾಯಿ "ಅವಳಿಗೆ ಅನ್ನ, ನೀರು ಕೊಡುವದು ಕೂಡ ಬೇಡ ಮನೆಯಹೊರಗೆ ತಲೆ ಎತ್ತಲೂ ಕೂಡ ಸ್ಥಾನವಿಲ್ಲದಂತೆ ಮಾಡಿದ್ದಾಳೆ.....ಇಂತಹಳಿಗೆ ಅನ್ನ ಹಾಕುವದೆಂದರೆ ಹಾವಿಗೆ ಹಾಲು ಹಾಕಿದಂತೆ...." ಎಂದು ಹೇಳುತ್ತಿದ್ದಳು ಆದರಂತೆ ಆಚರಿಸುತ್ತಿದ್ದಳು.

ಮೂರು ದಿನದಿಂದ ಮೂಲೆಯಲ್ಲಿ ಬಿದ್ದಿದ್ದೆ ಅನ್ನ, ನೀರು ಇಲ್ಲದೆ....!

ಅನ್ನ-ನೀರು........?

ಅನ್ನ-ನೀರು ಕೊಡುವದು ಬದುಕುವದಕ್ಕಾಗಿ, ಬದುಕಲೆಂದು. ಆದರೆ ನಾನು ಬದುಕುವದು ಯಾರಿಗೂ ಬೇಕಾಗಿರಲಿಲ್ಲ. ಎಲ್ಲರಿಗೂ ಬೇಕಾಗಿದ್ದುದು ನನ್ನ ಮರಣ ನನ್ನ ಸಾವು. ಆದಕ್ಕಾಗಿ ನನ್ನ ಕೊಲೆ ಮಾಡತೊಡಗಿದ್ದರು ಎಲ್ಲರೂ ಕೂಡಿ .......

ಹೆತ್ತ ತಂದೆ-ತಾಯಿಗಳು, ನೆರೆಹೊರೆಯವರು, ಎದುರಿನ ಮನೆಯವರು.

ಎದುರಿನ ಮನೆಯವರು........ಎದುರಿನ ಮನೆ—

ಆ ಎದುರಿನ ಮನೆ, ನಿಮಿಷ ನಿಮಿಷಕ್ಕೂ ನನ್ನನ್ನು ಎಳೆಯುತ್ತಿತು ಒಂದು ಕಾಲ. ಎದುರಿನ ಮನೆಯು ತೆರೆದ ಬಾಗಿಲು ಸರ್ವಕಾಲ ನನ ಸ್ವಾಗತಕ್ಕೆ ಸಿದ್ಧವಿರುತ್ತಿತ್ತು. ಮನೆಯೇ ಮುಗುಳ್ನಗೆಯಿಂದ ನನ್ನ ಸ್ವಾಗತ

ಬಯುಸುತ್ತಿತ್ತು. ಮನೆಯ ಪ್ರತಿಯೊಂದು ವಸ್ತು ನಿರ್ಜೀವ ಸಜೀವ ನನ್ನನ್ನು ಕೈ ಮಾಡಿ ಕರೆಯುತ್ತಿದ್ದವು.

ಆ ಕರೆಯುತ್ತಿದ್ದ ಕೈಗಳೇ ನನ್ನನ್ನು ವಂಚಿಸಿದ್ದವು. ನನ್ನ ಘಾತ ಮಾಡಿದ್ದವು.

ಆ ಕೈಗಳು......

ಅವು ಕೈಗಳಾಗಿರಲಿಲ್ಲ. ಹಾವುಗಳಾಗಿದ್ದವು

ಆ ಹಾವುಗಳು ನನ್ನನ್ನು ಬಿಗಿದವು ಆ ಬಿಗಿತ ನನ್ನ ಕೊರಳಿಗೆ ಬಂದಿತ್ತು. ನನ್ನ ಕೊರಳನ್ನು ಬಿಗಿಯತೊಡಗಿತ್ತು. ನನಗೆ ಉಸಿರಾಡಿಸಲು ಕೂಡ ಸಾಧ್ಯವಿಂಲಿಲ್ಲ ...

ತಂದೆ ಆ ಬಿಗಿತವನ್ನು ಇನ್ನೂ ಬಿಗಿ ಮಾಡುತ್ತಿದ್ದ. ಕೇಳುತ್ತಿದ್ದ.

"ಹೇಳು ....ಯಾರು ಆತ... ? ಅವನ ಹೆಸರು".

ಹೇಳುವದಕ್ಕೆ ಹೆಸರು ಇದ್ದಿತು. ಆದರೆ ಹೇಳುವದು ಹೇಗೆ ? ಬಿಗಿತ ಕೊರಳನ್ನು ಬಿಗಿಯುತ್ತಿತ್ತು. ಶ್ವಾಸ ಕಟ್ಟುತ್ತಿತ್ತು. ಹೇಳದೆ ಬೇರೆ ವಿಧಿಯಿರಲಿಲ್ಲ ಆದರೂ ಹೇಳುವದು ಹೇಗೆ ?

ಹೆಸರು ಹೇಳದಿರುವದಕ್ಕೆ ನಾಚಿಕೆ ಅಡ್ಡ ಬರುತ್ತಿರಲಿಲ್ಲ. ಮಾಡಿಕೊಂಡ ಪತಿಯ ಹೆಸರು ಹೇಳುವದಕ್ಕೆ ಲಜ್ಜೆಯು ತಡೆಯೊಡ್ಡುತ್ತದೆ. ಆದರೆ ಅಲ್ಲಿ ಆ ತಡೆಯಲ್ಲಿ ಮಧುರತೆಯಿದೆ. ಆನಂದವಿದೆ ಉದ್ವೇಗವಿದೆ. ಸರ್ವಸ್ವವೂ ತನ್ನದು. ತನ್ನದಲ್ಲದೆ ಅದು ಇನ್ನಾರದೂ ಅಲ್ಲ ಎನ್ನುವ ಹೆಮ್ಮೆಯಿದೆ.

ಆದರೆ ನಾನು ಹೆಸರು ಹೇಳದಿರುವದಕ್ಕೆ ಅಂತಹ ಕಾರಣಗಳಾವವೂ ಇರಲಿಲ್ಲ. ನಾನು ಹೆಸರುಸಿರದರುವದಕ್ಕೆ ಕಾರಣ ಲಜ್ಜೆಯಲ್ಲ, ಹೆದರಿಕೆ. ನಾಚಿಕೆ ಬಿಟ್ಟವಳು ಎಂದು ಜನ ಹೇಳುವರೆಂದು ಹೆದರಿಕೆ. ಹೇಳಿದರೆ ಮುಂದೇನಾಗುವದೋ ಎಂಬ ಹೆದರಿಕೆ. ಹೇಳಿದಲ್ಲಿ ನಾನು ಮಾಡಿದ ಕೆಲಸಕ್ಕೆ ಸತ್ಯನ ಮುದ್ರೆಬೀಳುವದಾಗಿ ಹೆದರಿಕೆ. ನಾನು ಹೇಳಿದರೂ, ಹೆಸರು ಕೇಳಿದವ ಒಪ್ಪಿಕೊಳ್ಳಬಹುದೇ ಎಂಬ ಹೆದರಿಕೆ.

ಹೆಸರು ಹೇಳುವದಕ್ಕೆ ಹೆದರಿಕೆ ಹೇಳದಿರುವದಕ್ಕೆ ಹೆದರಿಕೆ.

ಹೇಳದಿರೆ...?

ಹೇಳದಿದ್ದರೆ....?

ಹೇಳಿದರೆ ಈಗಾಗಲೇ ತುಂಬಾ ಕೋಪದಿಂದ ಹೆತ್ತ ಕರುಳಿನ ಕತ್ತಿಗೆ ಕೈಹಾಕಿರುವ ಕೋಪಿಷ್ಟ ತಂದೆ ಮುಂದೇನಾದರೂ ಅನಾಹುತಮಾಡಿದರೆ....?

ಹೇಳದಿದ್ದರೆ ..? ಹೇಳದಿದ್ದರೆ ನನ್ನ ಬದುಕಿನ ಆಶೆಯೇ ಇಲ್ಲ. ಮಾತು ಮಾತಿಗೆ "ಹೇಳು-ಇಲ್ಲದಿದ್ದರೆ ಕೊಲ್ಲುವೆ" ಎನ್ನುವ ಕ್ರೂರತೆಯೊಡನೆ ಸೆಣಿ ಸಾಡಲು ನನ್ನಂತಹ ಆಗಲೇ ನಿರ್ಜೀವವಾದ ಅಬಲೆಗೆ ಹೇಗೆ ಸಾಧ್ಯ?

ನನಗೆ ಯಾವುದೂ ತೋಚುತ್ತಿರಲಿಲ್ಲ. ಏನು ಮಾಡಲಿ? ಕಳೆದ ಮೂರು ದಿನಗಳಿಂದ ಬೆಳಕಿನ ಮುಖ ಕಂಡಿರಲಿಲ್ಲ.

ಮೂರು ದಿನಗಳ ಮುನ್ನ ನೆರೆಮನೆಯವಳು ತಾಯಿಗೆ "ನಿನಗೆ ಮಕ್ಕಳನ್ನು ಹೆರುವದೊಂದೇ ಗೊತ್ತು. ಮದುವೆಯ ವಯಸ್ಸು ಮೀರಿದ ಮಗಳು ಮದಿವೆಯಿಲ್ಲದೆ ಬಸಿರಾದದ್ದು ಕೂಡ ತಿಳಿಯಲಾರದಾಗಿದೆ." ಎಂದು ಕೋಪದಿಂದ ಹೇಳಿದ್ದಳು ಮಕ್ಕಳ ನ್ಯಾಯದಲ್ಲಿ ಮುದುಕಿ ಕೈ ಹಾಕಿದಾಗ

ಅಂದಿನಿಂದ....ಆ ಕ್ಷಣದಿಂದ ಮನೆ ಮಸಣವಾಯ್ತು ನನ್ನ ಪಾಲಿಗೆ.

ಮಸಣ....! ಮಸಣದಲ್ಲಿ ಶಾಂತಿಯಿರುತ್ತದೆ. ಸತ್ತವರನ್ನು ಮಸಣ ದಲ್ಲಿ ಯಾರೂ ಮಾತನಾಡಿಸುವದಿಲ್ಲ ಕೇಳುವದಿಲ್ಲ. ಕೋಪಿಸುವದಿಲ್ಲ ಕಾಡುವದಿಲ್ಲ ದಂಡಿಸುವದಂತೂ ಎಲ್ಲಿಯೋ ಯೋಜನದ ಮಾತು.

ಮಸಣ ಬೇಕು. ಮನೆ ಬೇಡ. ಸಾಯುವದೇ ಸರಿ ಸತ್ತು ಹೋದರೆ ಈ ಎಲ್ಲ ಕಾಟದಿಂದ ಮುಕ್ತಳಾಗುವೆ.

ಆದರೆ ಸಾಯುವವರೆಗೆ ಸಹಿಸುವದಾದರೂ ಹೇಗೆ? ಸಹನೆಗೆ ಮೀರಿದ ಕಷ್ಟ...ಆದರೂ ಸಹಿಸಬೇಕು...

"ಅಯ್ಯೋ .. .... ಸಹಿಸಲಾರೆ......ಕೋಪದಿಂದ ಕಂಗೆಟ್ಟ ತಂದೆಯ ಪ್ರಹಾರ ಬೆಳೆದ ಹೊಟ್ಟೆಯ ಮೇಲೆ ಆಘಾತವಾದಾಗ....... "ಅಯ್ಯೋ" ಸಹನೆ ಮೀರಿತು. ತಡೆಯುವದು ಅಸಾಧ್ಯ

ತಡೆಯುವದು ಅಸಾಧ್ಯವೆಂದು ಹೆಸರು ಹೇಳಿದೆ. ಹೆಸರು ಹೇಳಿದರೆ ಈ ಕಷ್ಟದಿಂದ ಮುಕ್ತಳಾಗುವೆನೆಂದು ಹೇಳಿದೆ. ಒಂದು...ವೇಳೆ....

ಒಂದು ವೇಳೆ........ ಹೆಸರು ಹೇಳಿಸಿಕೊಂಡವ ಬಂದು ನನ್ನನ್ನು ಕಷ್ಟ ದಿಂದ ಮುಕ್ತ ಮಾಡಬಹುದೆಂಬ ಆಶೆಯಿಂದ ಹೇಳಿದೆ.

ಆಶೆ.......

ಆಶೆ....ಅದುವೇ ಬದುಕಿನ ಜೀವಸೂತ್ರ. ಆ ಸೂತ್ರಕ್ಕೆ ಅಂಟಿಕೊಂಡು ಬಾಳಬಳ್ಳಿ ಕುಡಿಯೊಡೆಯುತ್ತದೆ. ಸಾವಿನ ಕ್ಷಣದಲ್ಲಿ ಬದುಕುವೆನೆಂಬ ಆಶೆ ಯಿಂದ ಕೊನೆಯುಸಿರನ್ನು ಎಳೆಯುತ್ತಾನೆ ಮನುಷ್ಯ !

ಆಶೆ....ಆಶೆಯಿಂದಲೇ ಜಗತ್ತು ಉರುಳುತ್ತದೆ.

ಮರುದಿನ ಮುಂಜಾವಿನಲ್ಲಿಯೇ ಪುನಃ ತಾನು ಉದಯಿಸುವೆಂಬ ಆಶೆ ಯಿಂದಲೇ ಸೂರ್ಯ ಇಂದು ಸಂಜೆಗೆ ಅಸ್ತವಾಗುತ್ತಾನೆ. ಇನ್ನೊಂದು ಜನ್ಮ ತನಗೆ ಬಂದೇ ಬರುತ್ತದೆ ಎನ್ನುವ ಕ್ಷಣದ ಆಶೆಯಿಂದ ಮಾನವ ಈ ಬದು ಕಿನ ನದಿಯಲ್ಲಿ ಈಸುತ್ತಾನೆ-- ಸಾಯುವವರೆಗೂ....!

ಮುಂದೆ ಬೆಳೆ ಬರುವದೆಂಬ ಆಶೆಯಿಂದ ಹೊಟ್ಟೆಯ ಕಾಳುಗಳನ್ನು ಭೂಮಿಗೆ ಬಿತ್ತುತ್ತಾನೆ ಮಾನವ. ಹುಟ್ಟಿದ ಮಗು ನಾಳೆ ತನ್ನನ್ನು ಸಲಹು ವದು ಎಂಬ ಆಶೆಯಿಂದ ತನ್ನ ನೆತ್ತರದಿಂದ ಮಗುವಿನ ಬಾಳನ್ನು ಬೆಳೆಸುತ್ತಾನೆ ಮಾನವ.

ಆಶೆಗೆ ಅಂತ್ಯವಿಲ್ಲ. ಆದರೆ ಆಶೆ ಕ್ಷಿತಿಜದಂತೆ.

ಕಣ್ಣಿಗೆ ಕಾಣುತ್ತದೆ. ಆದರೆ ನಡೆದಷ್ಟೂ ದೂರವಾಗುತ್ತದೆ. ನಡೆ ಯುತ್ತ ನಡೆಯುತ್ತ ಕುಸಿದು ಬೀಳುವದೇ ಮನುಷ್ಯನ ಬಾಳು.

ಆಶೆ.......ಮನುಷ್ಯನ ಬಾಳು.

ಬಾಳುವದಕ್ಕಾಗಿ ಮನುಷ್ಯನಿಗೆ ಆಶೆ. ಬಾಳುವ ಆಶೆ. ಬಾಳಿ ಬದು ಕುವ ಆಶೆ. ಬದುಕಿ ಸುಖಪಡುವ ಆಶೆ....ಸುಖ ಪಡುವದಕ್ಕಾಗಿ ಬದುಕುವ ಆಶೆ.... ಸುಖಕ್ಕಾಗಿ ಬದುಕುವ ಆಶೆ....

ಸುಖಕ್ಕಾಗಿ.... ಆಶೆ...

ಆ ಸುಖದ ಆಶೆಯೇ ನನ್ನ ಕತ್ತಿಗೆ ದುಃಖದ ಉರುಲು ಬಿಚ್ಚದಂತೆ ಬಿಗಿದಿತ್ತು.

ಅವನೂ ಹೇಳುತ್ತಿದ್ದ " ನಿರ್ಮಲಾ . ನೀನು ಸುಮ್ಮನೇ ಹೆದರುವಿ ನನ್ನಂತಹ ಕಲಿತ ಸುಸಂಸ್ಕೃತ ತರುಣ ಅದೆಂದಾದರೂ ಮಧ್ಯದಲ್ಲಿ ಕೈಬಿಡುವೆನೆ? ....ನಿಮ್ಮಿ....ಇದು ಸುಧಾರಣೆಯ ಕಾಲ. ಹಳೆಯ ಕಾಲದಲ್ಲಿ ತಂದೆ ಆರಿಸಿದ ವಧುವಿನೊಡನೆ-ಅದು ಹೇಗೆಯೇ ಇರಲಿ-ವಿವಾಹ ಮಾಡಿಕೊಳ್ಳಲೇ ಬೇಕಿತ್ತು. ಆದರೆ ಈಗ್ಗೆ....? ಈಗ್ಗೆ ಹಾಗಿಲ್ಲ...ಕಾಲ ಬದಲಾಗಿದೆ ದಿನ ಬದಲಾಗಿದೆ. ಮನುಷ್ಯ ಬದಲಾಗಿರುವ, ಸಮಾಜ ಬದಲಾಗಿದೆ. ಜಗತ್ತೇ ಬದಲಿಸಿದೆ...ನಿಮ್ಮೀ...ಜಗತ್ತೆ ಬದಲಿಸಿದೆ. ನಾನು ನಿನ್ನನ್ನು ಪ್ರೀತಿಸುವೆ... ನಿನ್ನ ಮೇಲೆ ನನ್ನ ಪ್ರೇಮವಿದೆ....ಪ್ರತಿಯೊಬ್ಬ ತರುಣ ತರುಣಿಯರು ಆದರ್ಶ ಪ್ರೇಮ ಮಾಡಲು ಇಚ್ಛಿಸುವರು. ಪ್ರಯತ್ನವಡುವರು ಆದರೆ ಎಲ್ಲರಿಗೂ ಪ್ರೇಮ ದೊರೆಯುವದು ದುರ್ಲಭ. ಸಾವಿರ ವರುಷ ಅಡವಿಯಲ್ಲಿ ಖುಷಿಯಾಗಿ ಕುಳಿತು ತಪಶ್ಚರ್ಯ ಮಾಡಿದರೂ ದೊರೆಯದ ನಿನ್ನ ಪ್ರೇಮಾಮೃತ ತಾನಾಗಿ ನನ್ನದುರು ಪ್ರತ್ಯಕ್ಷವಾಗಿದ್ಯೆ, ಧ್ರುವನೆದುರು ಪ್ರತ್ಯಕ್ಷನಾದ ಭಗವಾನ ವಿಷ್ಣುವಿನಂತೆ..... ಹಾಗೆ ನನಗೆಲ್ಲ ದೇವರಲ್ಲಿ ವಿಶ್ವಾಸವಿಲ್ಲ ಆದರೂ ಉದಾಹರಣೆಗಾಗಿ ಹೇಳಿದೆ....ನಿಮ್ಮಾ....ತಾನಾಗಿ ನನ್ನೆದುರು ಪ್ರಸನ್ನವಾದ ಪ್ರತ್ಯಕ್ಷವಾದ ಪ್ರೇಮಾಮೃತವನ್ನು ಕಾಲಿನಿಂದೊದೆದು ಬೀಸಾಕಲಾ? ಕುಡಿದು ತೃಪ್ತನಾಗಬೇಕೆಂದು ಮುಖದಲ್ಲಿ ತೆಗೆದುಕೊಂಡ ಅಮೃತವನ್ನು ಬೀದಿಗೆ ಬೀಸಾಕಲಾ ? .. ....ಇಲ್ಲ .. ನಿಮ್ಮ......ಇಲ್ಲ...... ಎಂದೆಂದಿಗೂ ಇಲ್ಲ. ನಾನು ಆದರ್ಶ ಪ್ರೇಮ ಮಾಡುವೆ ಯಾವ ತಡೆಗೂ ಹೆದರೂದೆ ಯಾರ ಭಯವೂ ನನಗಿಲ್ಲ. ತಂದೆ-ತಾಯಿಗಳು ಅಡ್ಡಿ ಮಾಡಿದೂ ಕೂಡ ಅವರ ತಡೆಯನ್ನು ಕಿತ್ತೆಸೆದು ನಾನು ನಿನ್ನ ಜೊತಗೆ ವಿವಾಹ ಮಾಡಿಕೊಳ್ಳುವೆ...

" . ನಾನು ನಿನ್ನ ಜೊತೆಗೆ ವಿವಾಹ ಮಾಡಿಕೊಳ್ಳುವೆ.....

ಇವು ಅವನೇ ಹೇಳಿದ ಮಾತುಗಳು. ಅವನು ತನ್ನ ಮುಖದಿಂದ ಉಸುರಿದ ವಾಕ್ಯಗಳು ಅದುವೇ ಅವನು ನನಗೆ ಕೊಟ್ಟ ವಚನ.

ಅಂತೆಯೇ ಆಶೆ ... ಆಶೆ........

ಆದರೆ ಬೆಳಕಿನ ಬುಡದಲ್ಲಿಯೇ ಕತ್ತಲೆಯಿದೆ ಎನ್ನುವದು ಗೊತ್ತಿದ್ದರೂ, ನಿತ್ಯ ನೋಡುತ್ತಿದ್ದರೂ ಲಕ್ಷಕ್ಕೆ ತಂದುಕೊಳ್ಳುವದಿಲ್ಲ ಆಶೆಯ ಅಂತರಿಕ್ಷದಲ್ಲಿ ಆಶೆಯ ಗರಿಗೆದರಿ ಹಾರುತ್ತಿರುವಾಗ್ಗೆ ನೆನಹಿಗೆ ಬರುವದಿಲ್ಲ. ಆಶೆಯೇ ನಿರಾಶೆಯ ತಾಯಿ, ಅಥವಾ ಮಗಳು....ಅಥವಾ ಎರಡೂ ಎನ್ನುವದು........ಅದನ್ನು ನೆನಹಿಗೆ ತಂದುಕೊಳ್ಳುವದು ಇಲ್ಲ. ಏಕೆಂದರೆ ಆಶೆ ಎಲ್ಲವನ್ನೂ ಮರೆಯಿಸಿರುತ್ತದೆ.

ಆಶೆ... ನಿರಾಶೆ........

"ನಿನ್ನ ಜೊತೆಗೆ ವಿವಾಹ ಮಾಡಿಕೊಳ್ಳುವೆ......"

ಈ ಅಮೃತ ವಾಕ್ಯವನ್ನು ಒಂದು ದಿನ ರಂಗ ಹೇಳಿದ್ದ. ಅಂದು ನಾನು ಪೂರ್ಣವಾಗಿ ನಂಬಿದ್ದೆ. ನಾನು ಸಂಪೂರ್ಣವಾಗಿ ವಿಶ್ವಾಸ ತಾಳಿದ್ದೆ ಅವೇ ಮಾತುಗಳನ್ನು— ಅದೇ ಅಮೃತ ವಾಕ್ಯವನ್ನು—

" ನಿಮ್ಮ ಜೊತೆಗೆ ವಿವಾಹ ಮಾಡಿಕೊಳ್ಳುವೆ "

ಎಂದು ಕುಲಕರ್ಣಿಯವರು ಕೂಡ ಹೇಳಿದ್ದರು.

ಕುಲಕರ್ಣಿಯವರು.......

ಸಭ್ಯರು, ದೇವರಂಥಹರ, ಮಹಾತ್ಮರು, ದೇವರು ....... ಅವರೂ ಹೇಳಿದ್ದರು—

" ಸುಮಿತ್ರಾ ಜಗದಲ್ಲಿ ಒಳಿತು, ಕೆಡಕು, ಆಶೆ, ನಿರಾಶೆ, ಸಜ್ಜನ, ದುರ್ಜನ, ಬೆಳಕು, ಕತ್ತಲೆ........ ಎಲ್ಲವೂ ಇವೆ. ಅವೆಲ್ಲವೂ ಒಂದಕ್ಕೊಂದು ಪೋಷಕವಾಗಿ ಇವೆ. ತಾಯಿ ಮಕ್ಕಳಾಗಿ ಇವೆ. ಪತಿ ಪತ್ನಿಯರಾಗಿ ಇವೆ. ಆಶೆಯಿಲ್ಲದ ನಿರಾಶೆಯಿಲ್ಲ ಸಜ್ಜನರಿಲ್ಲದಿದ್ದರೆ ದುರ್ಜನರಿಲ್ಲ. ಬೆಳಕಿಲ್ಲದಿದ್ದರೆ ಕತ್ತಲೆಯೆನ್ನುವದೂ ಕೂಡ ಯಾರಿಗೂ ಗೊತ್ತಿರುತ್ತಿರಲಿಲ್ಲ. ಕೆಡಕೇ ಇಲ್ಲದಿರುತ್ತಿದ್ದರೆ ಒಳ್ಳೆಯದೆನ್ನುವದನ್ನು ಅಪೇಕ್ಷಿಸುತ್ತಿರುವವರು ಯಾರು ? ಒಳ್ಳೆಯದನ್ನು ಅಪೇಕ್ಷಿಸುವ ನಾವು ಕೆಡಕಿನ ವಿಚಾರವನ್ನೇ ಮಾಡುವದಿಲ್ಲ.

ಅಂತೆಯೇ ಕೆಡಕು ನಮ್ಮೆದುರು ಬಂದಾಗ ಭೂತದಂತೆ ಕಾಣುತ್ತದೆ. ಭೂತಾಕಾರವಾಗಿ ನಮ್ಮನ್ನು ಹೆದರಿಸುತ್ತದೆ. ಆದರೆ ಒಳಿತಾಗಬೇಕು ಎನ್ನುವ ವಿಚಾರ ಬಂದಾಗಲೇ ಒಳಿತಾಗದಿದ್ದರೆ-ಕೆಡಕಾದರೆ ಎಂಬುದನೂ ಕೂಡ ನಾವು ವಿಚಾರಿಸದಿದ್ದರೆ ಒಳಿತಾದರೆ ಒಳಿತು. ಒಳಿತಾಗದಿದ್ದರೆ ಬರುವ ಒಳಿತಿರದ, ಕೆಡಕಿಗೂ ಸಿದ್ಧರಿರುತ್ತೇವೆ ಆಗ್ಗೆ ನಮ್ಮಲ್ಲಿ ಕೆಡಕನ್ನು ಎದುರಿಸುವ ಸಾಮರ್ಥ್ಯವಿರುತ್ತದೆ. ಆ ಸಾಮರ್ಥ್ಯದಿಂದ ನಾವು ಹೆಚ್ಚು ದುಃಖಿಗಳಾಗುವದಿಲ್ಲ. ಅಥವಾ ದುಃಖವನ್ನು ಎದುರಿಸುವ ಸಾಮರ್ಥ್ಯವನ್ನು ತಂದುಕೊಳ್ಳುತ್ತೇವೆ. ನೀವು ಹೆಚ್ಚು ದುಃಖಿಯಾಗಿರುವದಕ್ಕೆ ಅದುವೇ ಕಾರಣ. ಒಮ್ಮೆಲೆ ನಿಮ್ಮ ಕಲ್ಪನೆಗೆ ಆಘಾತವಾಯಿತು. ಅದನ್ನು ಸಹಿಸಿಕೊಳ್ಳುವ ಸಾಮರ್ಥ್ಯ ನಿಮ್ಮಲ್ಲಿರಲಿಲ್ಲ ಅಂತೆಯೇ ನೀವು ದುಃಖಿಯಾಗಿರುವಿರಿ. ಯಾವುದಕ್ಕೂ ನೀವು ದುಃಖಿಸುವದು ಬೇಡ. ಯಾರನ್ನೂ ನೀವು ದೂಷಿಸುವದು ಬೇಡ ಈ ಜಗತ್ತಿನ ಎಲ್ಲ ವ್ಯಕ್ತಿಗಳೂ ಸರ್ವಶಕ್ತರಲ್ಲ. ಪರಿಪೂರ್ಣರಲ್ಲ. ಎಲ್ಲರೂ ಒಂದಿಲ್ಲೊಂದು ಅಸಮರ್ಥತೆಯಿಂದ ಅಪೂರ್ಣತೆಯಿಂದ ಬಳಲುತ್ತಾರೆ. ಒಬ್ಬೊಬ್ಬರು ಒಂದೊಂದು ವಿಧ. ಒಂದೊಂದು ತರದ ಅಪೂರ್ಣತೆ. ಒಬ್ಬೊಬ್ಬರಲ್ಲಿ ಒಂದೊಂದು ತರದ ಅಪೂರ್ಣತೆ. ಒಬ್ಬೊಬ್ಬರಲ್ಲಿ ಒಂದೊಂದು ತರದ ಅಸಮರ್ಥತೆ. ಯಾರೂ ಪರಿಪೂರ್ಣರಲ್ಲ ಸರ್ವಶಕ್ತ ಪರಿಪೂರ್ಣ ಭಗವಂತ ಕೂಡ ಮಾನವನ ರೂಪ ತಳೆದಾಗ ಮಾನವರಂತೆ ಅಪೂರ್ಣನಾಗಿ ಅಸಮರ್ಥನಾಗಿ ಬಾಳಬೇಕಾಗುತ್ತದೆ.ಬಾಳುತ್ತಾನೆ. ಅದಕ್ಕಾಗಿಯೇ ಹೇಳುವದು ಯಾರನ್ನೂ ದೂಷಿಸುವದು ಬೇಡ ಯಾರನ್ನೂ ಶಪಿಸುವದು ಬೇಡ....ನೀವು ತಾಳಿರಿ....ಅಂದರೆ ನಿಶ್ಚಯುವಾಗಿಯೂ ಬಾಳುವಿರಿ.... ನಿಮ್ಮಿಂದ ಅಪರಾಧವಾದುದು ನಿಜ. ಆದರೆ ಅದಕ್ಕೆ ನೀವೇ ಸಂಪೂರ್ಣವಾಗಿ ಹೊಣೆಗಾರರಲ್ಲ. ಹಾಗೆಂದು ನಿಮ್ಮ ಹೊಣೆಗಾರಿಕೆಯನ್ನು ನೀವು ಹಾರಿಸಿಕೊಳ್ಳಲಾರಿರಿ. ಗಂಡಸು ತೋರಿಕೆಗಾದರೂ 'ತಾನಲ್ಲ' ತನಗೇನೂ ಅರಿಯದು' ಎಂದು ಕಿವಿಯ ಮೇಲೆ ಕೈಯಿಟ್ಟುಕೊಳ್ಳಬಹುದು ಆದರೆ ಸ್ತ್ರೀ ಹಾಗಲ್ಲ- ಜಗತ್ತಿನ ತಪ್ಪನ್ನೂ ತನ್ನ ಹೊಟ್ಟೆಯಲ್ಲಿ ಹಾಕಿಕೊಂಡು ತಾನು ದುಃಖಿಯಾಗಬೇಕಾಗುತ್ತದೆ. ಅಂತೆಯೇ ಸ್ತ್ರೀಗೆ ದೇವಿ ಎನ್ನುವರು, ತಾಯಿ ಎನ್ನುವರು. ಅದರ ಜೊತೆಗೆ ಪಾಪಿ ಎನ್ನುವರು. ಕಲಂಕಿಣಿ ಎನ್ನುವರು.

ಅವಳು ಎಲ್ಲವೂ ಆಹುದು. ಮನುಷ್ಯನ ರೂಪ ತಳೆದ ಭಗವಂತನು ಕೂಡ ಮಾನವನ ಅಸಮರ್ಥತೆಯಿಂದ ಬಾಳುವಾಗ ಮಾನವರ ವಿಚಾರವಾದರೂ ಏಕೆ? ಸ್ತ್ರೀ ಮಾನವಳು. ಮನುಷ್ಯ ಸಹಜವಾದ ಆಶೆ ಅವಳಲ್ಲಿದ್ದರೆ ಅದು ಅಪರಾಧವಾಗಲಾರದು. ಆಶೆಗೆ ಆಶೆಯು– ಸುಖಕ್ಕೆ ಸುಖದ ತಾಕಲಾಟವಾದಾಗ ಘರ್ಷಣೆಯಾದಾಗಲೇ ಅಲ್ಲವೆ ಕಿಡಿಗಳು ಉದುರುವದು. ಉದುರುವ ಕಿಡಿಯಿಂದ ಜಗತ್ತಿಗೆ ಬೆಳಕು ತೋರುವ ಜ್ಯೋತಿಯೂ ಉರಿಯುವದು. ಜಗತ್ತನ್ನು ದಹಿಸುವ ಜ್ವಾಲೆಯಾಗಿ ಹಬ್ಬುವದು. ಸುಖದ ಆಶೆಯಿಂದ ಮುಂದೆ ಸಾಗುವಾಗ ತಪ್ಪಿ ತಪ್ಪು ಘಟಿಸುವದು. ಅದಕ್ಕೆ ಹೊಣೆಗಾರರು ಒಬ್ಬರಲ್ಲ- ಇಬ್ಬರು ಆದರೆ ಒಬ್ಬರು ಹೊಣೆಗಾರಿಕೆ ಹಾರಿಸಿಕೊಂಡಾಗ ಎಲ್ಲ ಅಪರಾಧವೂ ಉಳಿದ ಒಬ್ಬರದೇ ಆಗಿ ತೋರುತ್ತದೆ. ಕೆಲವೊಂದು ಸಹ ನಿರಾಪರಾಧಿ ಕೂಡ ಅಪರಾಧಿಯಾಗಬೇಕಾಗುತ್ತದೆ....ನೀವು .. ಅಹಲ್ಯೆಯ ಕತೆ ಕೇಳಿಲ್ಲವೆ? ಅವಳ ಅಪರಾಧವಾದರೂ ಏನು? ಆದರೂ ಅವಳು ಅಪರಾಧಿ.

"....ಏಕೆ ?...."

"....ಅವಳು ಸ್ತ್ರೀ. ತಾಯಿ. ಜಗತ್ತಿನ ಜನರ ಪಾಪದ ಕಾಲಕೂಟವನ್ನು ಕೂಡ ಕುಡಿದು ಜೀರ್ಣಿಸಿಕೊಳ್ಳುವ ಶಕ್ತಿಯಿದ್ದವಳು...."

"...ಅಂತೆಯೇ ಅವಳು ಅಪರಾಧಿ..."

" ಅಪರಾಧಕ್ಕೆ ಶಿಕ್ಷೆಯಾಗಲೇ ಬೆಕು...."

" ...ಎಂತಹ ಶಿಕ್ಷೆ....? "

"....ಸಾವಿರ ವರುಷವೂ ಶಿಲೆಯಾಗಿ ಬೀಳುವದು !...."

"...ಆದರೂ ಅವಳು ನಿರಪರಾಧಿ... "

"...ಸ್ತ್ರೀ....ದೇವಿ...ತಾಯಿ..."

"... ಅಂತೆಯೇ ಭಗವಂತನಿಗೂ ಕೂಡ ಇದ್ದಲ್ಲಿಂದ ಧಾವಿಸಿ ಬರಬೇಕಾಯ್ತು. ನಾನು ಹೇಳುವದು ಕತೆಯಲ್ಲ, ಸತ್ಯ. ಒಂದು ಉದಾಹರಣೆ...."

" ... ತಿಳಿದೋ ತಿಳಿಯದೆಯೋ ಅಪರಾಧಗಳು ಘಟಿಸುತ್ತವೆ.... "

" .... ತಿಳಿದು ಮಾಡಿದ ಅಪರಾಧ, ಪಾಪ.... "

"... ತಿಳಿಯದೆ ಘಟಿಸಿದ ಅಪರಾಧ ಪಾಪವಲ್ಲ... "

"....ಆದರೂ ಅಪರಾಧ. ನಿಜ..."

"..., ಅಪರಾಧಕ್ಕೆ ಶಿಕ್ಷೆಯಾಗಲೇಬೇಕು. ಆಗುತ್ತದೆ... "

"... ಆದರೆ ನಿಷ್ಪಾಪಿಗೆ ಆದ ಶಿಕ್ಷೆಯಿಂದ ಮುಕ್ತ ಮಾಡುವದಕ್ಕೆ ದೇವನಿಗೆ ಅವತಾರ ತಾಳಬೇಕಾಗುತ್ತದೆ..... "

"...ಸುಮಿತ್ರಾ ... ಹೆದರಬೇಡಿರಿ ಏಕೆಂದರೆ ನೀವು ನಿರಪರಾಧಿ. ನಿಮ್ಮ ರಕ್ಷಣೆ ದೇವಗೆ ಸೇರಿದೆ. ಇಂದಿಲ್ಲ ನಾಳೆ ಶಿಕ್ಷೆಯ ಅವಧಿ ಮುಗಿದಾಗ ನಿಮ್ಮ ಕಲ್ಯಾಣವಾಗುತ್ತದೆ. ನೀವು ಹೆದರಬೇಡಿರಿ....ಸುಮಿತ್ರಾ .. ನಿಮ್ಮ ಒಪ್ಪಿಗೆ ಇರುವದಾದರೆ...."

"....ನಿಮ್ಮ ಜೊತೆಗೆ ನಾನೇ ವಿವಾಹ ಮಾಡಿಕೊಳ್ಳುವೆ...." ಎಂದು ....ವಿವಾಹ ಮಾಡಿಕೊಳ್ಳುವೆ ...

ವಿವಾಹ..........

ಯಾರಿಗೆ ವಿವಾಹ ಬೇಡ ?

ಆದರಲ್ಲಿಯೂ ನನಗೆ........?

ಸಾವಿರ ವರುಷದ ತಪಶ್ಚರ್ಯಕ್ಕಾಗಿ ಭಕ್ತಳಿಗೆ ಸಿಕ್ಕ ವರವಾಗಿತ್ತು ನನಗೆ.

ವಿವಾಹ.... ...

ವಿವಾಹ ವಿಲ್ಲದಿದ್ದರೆ ಏನೂ ಇರಲಿಲ್ಲ ನನ್ನ ಜೀವನದಲ್ಲಿ.

ನನ್ನದೆಂದು ನಾನು ತಿಳಿದುಕೊಂಡದ್ದೆಲ್ಲ ತೊಳೆದು ಹೋಗಿತ್ತು. ಬಳಿದು ಹೋಗಿತ್ತು.

ನಾನು ತಿಳಿದು ಕೊಂಡದ್ದು ಅನಂತ.... ...

ಅನಂತ ...! ಜಗತ್ತೆಲ್ಲ ನನ್ನದು. ನಾನು ಎಲ್ಲವನ್ನೂ ದೊರಕಿಸಿರುವೆ. ನನಗೆ ಸಿಕ್ಕದೇ ಇರುವದು ಜಗತ್ತಿನಲ್ಲಿಯೇ ಇಲ್ಲ. ಇದು ಆ ದಿನದ ತಿಳುವಳಿಕೆ.

ಆದರೆ ಅದೆಲ್ಲವೂ ಮಾಯೆಯಾಗಿತ್ತು.

ಏಕೆಂದರೆ ನಾನು ಏನನ್ನೂ ದೊರಕಿಸಿರಲಿಲ್ಲ. ನನಗೆ ಏನೂ ಸಿಕ್ಕಿರಲಿಲ್ಲ. ಆದರೆ ತಿಳಿದದ್ದು ಆಗಲ್ಲ. ಮುಂದೆ ಬಹುದಿನಗಳ ನಂತರ.

ಬಹುದಿನಗಳ ನಂತರ ತಿಳಿದು ಬಂದಿತು. ನಾನು ಏನನ್ನೂ ದೊರ ಕಿಸಿಲ್ಲ ಯಾರನ್ನೂ ಇಲ್ಲ.... ನಾನು ನಿರಾಧಾರಿ... ಎಂದು.

‘ ನಿರಾಧಾರಿ........’

ಜಗತ್ತಿನಲ್ಲಿ ಯಾರ ಆಶ್ರಯವೂ ಇಲ್ಲ. ಯಾರೂ ನನ್ನನ್ನು ಮುಂದಕ್ಕೆ ಕರೆಯುವವರಿಲ್ಲ ಕಂಡವರೆಲ್ಲ ನನ್ನ ಮುಖ ನೋಡಿ ಕೇಕೆ ಹಾಕುವ ದಕ್ಕೆ ಸಿದ್ಧರಿದ್ದರು. ಅದಕ್ಕಾಗಿ ನನ್ನನ್ನು ನೋಡಿ ಕೇಕೆ ಹಾಕಿ ನಗುವ ದಕ್ಕಾಗಿ ನಾನವರಿಗೆ ಕಾಣಿಸಬೇಕಿತ್ತು.

ಆದರೆ ನಾನು ಯಾರಿಗೂ ಕಾಣಿಸುವಂತಿರಲಿಲ್ಲ. ನನ್ನನ್ನು ಒಂದು ದುಃಖಜೀವವನ್ನು ಮುಂದಕ್ಕೆ ಕರೆದು ಸಾಂತ್ವನ ಮಾಡುವವರು ಯಾರೂ ಇದ್ದಿರಲಿಲ್ಲ ಅಂತೆಯೇ ಯಾರನ್ನೂ ನೋಡುವಂತಿರಲಿಲ್ಲ- ನಾನು.

ಯಾರನ್ನೂ ನೋಡದೆ, ಯಾರ ಕಣ್ಣಿಗೂ ಬೀಳದೆ ಎಲ್ಲಿಯಾದರೂ ಅಡಗಬೇಕೆಂದು ನನ್ನ ವಿಚಾರ. ಓರ್ವ ನಿರಾಶ್ರಿತೆಯ ವಿಚಾರ ಓರ್ವ ನಿರಾಧಾರಿಯ ವಿಚಾರ. ಒಬ್ಬ ದುಃಖಿಯ ವಿಚಾರ. ಜಗದ ದೃಷ್ಟಿಯಲ್ಲಿ ಅದಕ್ಕೇ ಹೆಂಗುಸಾದ ನನ್ನ ದೃಷ್ಟಿಯಲ್ಲಿ ಕೂಡ — ಒಬ್ಬ ಪಾಪಿಯ ವಿಚಾರ... ........

ಪಾಪಿ........

ಆಹುದು ನಾನು ಪಾಪಿ !

ಪಾಪಿಯಲ್ಲದೆ ಇನ್ನೇನು ?

ಜನರು ಹೇಳುತ್ತಾರೆ ‘ನೀವು ಪಾಪಿ’ ಎಂದು.

ತಂದೆ-ತಾಯಿ ಹೇಳುತ್ತಾರೆ “ ನೀನೇ ಪಾಪಿ ” ಎಂದು.

ನನ್ನ ಎದುರಿನ ಮನೆಯವನ ತಂದೆ ಹೇಳುತ್ತಿದ್ದ ಅವಳೇ ಪಾಪಿ ‘ಎಂದು’

ಆತ-ರಂಗ ಹೇಳುತ್ತಿದ್ದ ‘ನನಗಾವುದೂ ಅರಿಯದು. ಯಾರದೊ ಪಾಪ ನನ್ನ ತಲೆಯಮೇಲೇಕೆ ಹೊರಿಸ ಬಯಸುತ್ತೀರಿ ? ಎಂದು.

ನನ್ನ ಹೊಟ್ಟೆಯಲ್ಲಿಯ ಪಿಂಡ ಹೇಳುತ್ತಿತ್ತು "ನೀನು ಪಾಪಿ. ತಾಯಿ ಯಲ್ಲ" ಎಂದು.

ಕೊನೆಯಲ್ಲಿ ನನ್ನ ಮನ ಕೂಡ ಗರ್ಜಿಸುತ್ತಿತ್ತು ! ನೀನು ಪಾಪಿ" ಎಂದು.

ನನ್ನ ಮನ......!

ಅಹುದು ನನ್ನ ಮನ ಕೂಡ ಹೇಳುತ್ತಿತ್ತು.

ಪಾಪಿ.......ಪಾಪಿ .. ...ಪಾಪಿ..........ಎಂದು.

ಇಂತಹ ಜಗತ್ತು ತಂದೆ-ತಾಯಿಗಳು ನಾನು ನಂಬಿದವ ನನ್ನನ್ನು ಆಶ್ರಯಿಸಿ ನನ್ನ ಹೊಟ್ಟೆಯಲ್ಲಿ ನನ್ನಿಂದ ಬೆಳೆಯುವ ಪಿಂಡ ಮತ್ತು ನನ್ನ ಮನ ಎಲ್ಲರೂ ನನ್ನನ್ನು 'ಪಾಪಿ' ಎಂದು ಕೂಗುತ್ತಿದ್ದರು.

ಜಗತ್ತೆ ಹೇಳುವ ಪಾಪಿಗೆ ಅವರು ಹೇಳಿದ್ದರು.

"ನಾನು ನಿಮ್ಮ ಜೊತೆಗೆ ವಿವಾಹ ಮಾಡಿಕೊಳ್ಳುವೆ 'ಎಂದು !

ಅವರು ಎಂತಹ ಮಹಾಪುರುಷರು !

'ನಿನ್ನನ್ನು ಲಗ್ನ ಮಾಡಿಕೊಳ್ಳುವೆ' ಎಂದು ಹೇಳಿದ ಒಬ್ಬರಿಂದಾಗಿ ಮನೆ ತಂದೆ-ತಾಯಿ ಎಲ್ಲವನ್ನೂ ಎಲ್ಲರನ್ನೂ ಕಳೆದುಕೊಂಡು ಹೇಸಿಗಿಂತ ಹೇಸಿಯಾಗಿ ಪಾಪದ ಸಜೀವ ಮೂರ್ತಿಯಾಗಿ ಗಾಳಿಗೆ ಹಾರಿದ ತರಗೆಲೆ ಯಂತೆ ಆಳ-ಅಂತವನ್ನರಿಯದೆ ಎಲ್ಲಿಯೋ ಹೊರಟಿದ್ದ ಗೊತ್ತುಗುರಿ ಗಳಿಲ್ಲದೆ.

ಗೊತ್ತುಗುರಿಗಳಿಲ್ಲದೆ, ಆಳ-ಅಂತವನ್ನರಿಯದೆ ಗಾಳಿಗೆ ಹಾರಿದ ತರ ಗೆಲೆಯಂತೆ ಎಲ್ಲಿಯೋ ಹೊರಟಿದ್ದ ಪಾಪದ ಪ್ರತಿಮೂರ್ತಿಗೆ, ತಂದೆ-ತಾಯಿ ಮನೆ-ಮಾರು ಎಲ್ಲವನ್ನೂ ಕಳೆದುಕೊಂಡು ಹೇಸಿಗಿಂತ ಹೇಸಿಯಾದ ಹೇಸಿಗೆ ಅವರು ಹೇಳಿದ್ದರು. "ನಾನು ನಿಮ್ಮ ಜೊತೆಗೆ ವಿವಾಹ ಮಾಡಿ ಕೊಳ್ಳುವೆ" ಎಂದು !

ಇವರು ಹೇಳುವದು ಕನಸಿನಲ್ಲಿ ಅಲ್ಲವಷ್ಟೇ ....?

ಅವರು ನನ್ನ ಜೊತೆಗೆ ವಿವಾಹ ಮಾಡಿಕೊಳ್ಳಬೇಕೆಂಬುದು ನನ್ನ ಇಚ್ಛೆ ನನ್ನ ಅಭಿಲಾಷೆ. ನನ್ನ ಒಂದೇ ಒಂದಾದ ಆಶೆ. ಆದರೂ ಅವರು ಹೇಳು ವದು ಸತ್ಯವೆ ....?

ಅವರ ಯಾವ ಮಾತಿನಲ್ಲಿ ಯಾವುದೇ ವಿಚಾರದಲ್ಲಿ ಅವರ ನಡುವಳಿಕೆ ಯಲ್ಲಿಯ ಸರಳತೆ ಇದಾವುದರಲ್ಲಿಯೂ ನನಗೆ ಸಂಶಯವಿರಲಿಲ್ಲ. ಅಂತಹ ಸಂಶಯ ಬರುವಂತಹ ವರ್ತನೆ ಅವರದಿರಲಿಲ್ಲ. ...

ಅವರು ತಾಯಿಯಾಗಿ ಕಾಯ್ದಿದ್ದರು. ಗೊತ್ತು ಗುರಿಯಿಲ್ಲದೆ ಬೀದಿಯ ಪಾಲಾಗಿ ಮರಣದ ಮುಖದಲ್ಲಿ ಸಾಯುವಾಗ ಹೊರಟ ನನ್ನನ್ನು ಎತ್ತಿ ತಂದಿ ದ್ದರು.....ಅವರಿಗಾಗಿ ... ಅವರು ಹೇಳಿದ ಮಾತಿಗಾಗಿ ನನ್ನಲ್ಲಿ ಸಂಶಯವಿರ ಲಾರದು. ಆದರೂ ಮನುಷ್ಯ ಸ್ವಭಾವಕ್ಕನುಸರಿಸಿ ಯಾವುದೋ ಒಂದು ಮೂಲೆಯಿಂದ ಇಣಿಕಿ ಹಾಕಿದ ಸಂಶಯ ಸಂಧಿ ಸಿಕ್ಕರೆ ಸಾಕು ಭೂತಾಕಾರ ವಾಗುವ ದಾರಿ ಕಾಯುತ್ತಿತ್ತು.

ಆದರೆ ಅವರು ಹೇಳಿದ್ದು ಸತ್ಯ. ಅವರ ಮಾತಿನಲ್ಲಿ ಕೊಂಕು ಎಂದಿಗೂ ಇರಲಾರದು. ಏಕೆಂದರೆ ಅವರು ಎಲ್ಲರಂತಹರಲ್ಲ. ಅವರು ನನ್ನ ಉದ್ಧಾರ ಕ್ಕಾಗಿ ಜನ್ಮ ತಾಳಿದವರು. ಅಹುದು.... ನನ್ನ ಉದ್ಧಾರಕ್ಕಾಗಿ ಮಾತ್ರ.

ಇಲ್ಲದಿದ್ದರೆ ... ಅವರು.... ಯಾರು.... ? ನಾನು ಎಲ್ಲಿಯವಳು ? ನಮ್ಮಿಬ್ಬರ ಸಂಬಂಧವೇನು ....?

ಯಾವ ಸಂಬಂಧವೂ ಇಲ್ಲ. ಮೊದಲು ನೋಡಿ ಪರಿಚಯವಿಲ್ಲ. ಸಾಯಲು ಹೊರಟಿದ್ದೆ. ಸಂಜೀವಿನಿಯಾಗಿ ಉಳಿಸಿದರು. ತಂದೆ-ತಾಯಿ ಗಳೆನ್ನುವವರೆ "ಸಾಯಿ.... ಸತ್ತು ಹೋಗು" ಎಂದು ದೂಡುವಾಗ.

" ನೀನೇನು ಅಂತಹ ಅಪರಾಧವನ್ನು ಮಾಡಿರುವೆ ಸಾಯುವದಕ್ಕೆ....? ನೀನು ಸಾಯಲಾಗದು. ಸಾಯಕೂಡದು..." ಎಂದು ತಮ್ಮ ದಯೆಯ ಮಮತೆಯ ಆವರಣದಲ್ಲಿ ನನ್ನನ್ನು ಉಳಿಸಿದರು. ಬಾಳಿಸಿದರು. ಕೊನೆಗೆ ಮತ್ತೆ ಅವರೆ —

" ನಿಮ್ಮ ಜೊತೆಗೆ ವಿವಾಹ ಮಾಡಿಕೊಳ್ಳುವೆ " ಎಂದು ಹೇಳಿದರು. ಎಂತಹ ದಯೆ...! ಎಂತಹ ಉದಾರತೆ !

ಹಾಳಾದ ನಾನು ಹಾಳಾಗಿ ಹೋಗಬಾರದೆಂದು ಅವರು ಹೇಳಿದುದು "ನಾನು ನಿಮ್ಮ ಜೊತೆಗೆ ವಿವಾಹ ಮಾಡಿಕೊಳ್ಳುವೆ " ಎಂದು.

ನಾನು ಕೂಡ ಇದೇ ದಿನಕ್ಕಾಗಿ ಕಾಯ್ದುದು. ಹೆತ್ತ ಕರುಳಿನ ಕೊಲೆ ಕೂಡ ಮಾಡಿದೆ. ನಾನು ಯಾರ ಜೊತೆಗಾದರೂ ವಿವಾಹ ಮಾಡಿಕೊಳ್ಳಬೇಕೆಂದು.

ಕಾಮಿನಿಯಂತೂ ಹಿಗ್ಗಿದಳು.

"ಸುಮಿತ್ರಾ... ಕುಲಕರ್ಣಿಯವರು ನಿನ್ನನ್ನು ವಿವಾಹವಾಗಲೊಪ್ಪಿದರು! ನಿನ್ನ ಭಾಗ್ಯ ಹಿರಿದು...

"ಸ್ತ್ರೀಗೆ ವಿವಾಹವಾಗದೆ ಬೇರೆ ದಾರಿಯಿಲ್ಲ. ಇದು ನಿಜವಾದರೂ ವಿವಾಹಿತ ಸ್ತ್ರೀ ಗುಲಾಮಳು. ಅವಳಿಗೆ ಯಾವ ಸ್ವಾತಂತ್ರ್ಯವೂ ಇಲ್ಲ. ಅವಳು ಒಬ್ಬ ಗಂಡಸಿನ ಭೋಗಕ್ಕಾಗಿ ನಿರ್ಮಾಣವಾದ ಒಂದು ಕ್ಷುದ್ರ ಜಂತು."

"...ಆದರೂ ವಿವಾಹವಿಲ್ಲದ ಹೆಣ್ಣು ಸ್ತ್ರೀಯಲ್ಲ. ಅವಳು ಜಗದಲ್ಲಿ ಎಂದೆಂದಿಗೂ ಸುರಕ್ಷಿತಳಲ್ಲ. ಅಂತೆಯೇ ಗಂಡುಸೆಂದರೆ- ದ್ವೇಷಿಸುವ ನಾನು ನಿನ್ನ ವಿವಾಹಕ್ಕಾಗಿ ಪ್ರಯತ್ನಿಸಿದ್ದು."

"ಸುಮಿತ್ರಾ.... ಕುಲಕರ್ಣಿಯವರು ಸಜ್ಜನರಲ್ಲ. ಸಾಧುಗಳು. ಅವರನ್ನು ವಿವಾಹವಾಗುವ ನೀನು ವಸಿಷ್ಠನ ಅರುಂಧತಿ....

"ವಸಿಷ್ಠನ ಅರುಂಧತಿಯಾಗಿ ಬಾಳಬೇಕಾಗಿದ್ದ ನೀನು ಒಂದು ಕಾಲದಲ್ಲಿ ಕ್ರೂರ ಗಂಡಸಿನ ಕಪಿಮುಷ್ಟಿಯಲ್ಲಿ ಸಿಕ್ಕು ಜಿಬ್ಬಾಗಿದ್ದೆ .... ಕಂಡವರೆಲ್ಲ ದೂಡುವ ಕೀಳು ಪ್ರಾಣಿಯಾಗಿದ್ದೆ.....

"ಆ ಅಪರಾಧಕ್ಕೆ ಹೊಣೆ ಯಾರು? ಆ ಪಾಪದ ಮೂಲವೆಲ್ಲಿ....?"

ಆದರೆ ಕಣ್ಣಿದ್ದು ಅವನ್ನು ಮುಚ್ಚಿಕೊಂಡು ಅಂಧರಂತೆ ವರ್ತಿಸುವ ಈ ಹುಂಬರು ಅದನ್ನು ನೋಡಬಯಸುವದಿಲ್ಲ. ನೋಡಲಿಚ್ಛಿಸುವದಿಲ್ಲ. ಅವರು ಹೇಳುವದು "ಸುಮಿತ್ರೆ ಪಾಪಿ....ಆದ್ದರಿಂದ ಅವಳು ತಮ್ಮೊಡನೆ ಕೂಡಿಬಾಳಲು ಅಯೋಗ್ಯಳು...." ಎಂದು...."

"ಅವಳು ಪಾಪಿ ಹೇಗೆ....? ಎಂದು ಕೇಳಿದರೆ ಅದಕ್ಕೆ ಉತ್ತರಿಸುವ ಸಾಮರ್ಥ್ಯ ನಿನ್ನನ್ನು ಪಾಪಿ ಎಂದು ಜರಿದ ಹಳಿದ ಕೀಟಕಗಳಲ್ಲಿಲ್ಲ. ಏಕೆಂದರೆ ಅವು ಕ್ಷುದ್ರ ಕೀಟಕಗಳು. ಮನುಷ್ಯರಲ್ಲ...."

" ಮನುಷ್ಯರಲ್ಲಿ ವಿಚಾರಶಕ್ತಿಯಿರುತ್ತದೆ. ಒಳಿತು ಕೆಡಕುಗಳನ್ನು ಅವರು ನಿರ್ಣಯಿಸುವದು ಶುದ್ಧ ಮನದ ವಿಚಾರದಿಂದ...."

" ....ಯಾವ ವಿಚಾರಿಯೂ ಹೇಳುವದು ' ನೀನು ಪಾಪಿಯಲ್ಲ........ ನೀನು ಅಪರಾಧಿಯಲ್ಲ " ಎಂದು .. "

"....ಇನ್ನೊಬ್ಬರ ನೆತ್ತರದಿಂದ ಬಾಳುವದು ಅಪರಾಧ ಇನ್ನೊಬ್ಬರ ಮನನೋಯಿಸುವದು ಅಪರಾಧ ಇನ್ನೊಬ್ಬರ ಅಸ್ತಿತ್ವಕ್ಕೆ ಭಂಗ ತರುವದು ಅಪರಾಧ....ಇನ್ನೊಬ್ಬರಿಗೆ ಕೇಡು ಬಗೆಯುವದು ಅಪರಾಧ...ಇಂಥ ಅಪರಾಧವೇ ಪಾಪ....." "ನಿನ್ನಿಂದ ಇಂತಹ ಯಾವ ಕಾರ್ಯವೂ ಜರುಗಿಲ್ಲ. ಆದ್ದರಿಂದ ನಿರಪರಾಧಿಯೂ ಅಲ್ಲ, ಪಾಪಿಯೂ ಅಲ್ಲ...."

" ಒಲೆಯಲ್ಲಿ ಬೆಂಕಿಗೆ ಆಟದ ವಸ್ತು ಎಂದು ತಿಳಿದು ಅದನ್ನು ಹಿಡಿದು ಕೊಳ್ಳಲು ಧಾವಿಸುವದು ಚಿಕ್ಕಮಗು...ಮಗುವಿಗೆ ಬೇಕಾದುದು ಆಟ. ಅಲ್ಲದೆ ಕೈ ಸುಟ್ಟುಕೊಳ್ಳುವದಲ್ಲ. ಕೈ ಸುಟ್ಟರೆ ಆ ತಪ್ಪು ಬೆಂಕಿಯದು. ಅಲ್ಲದೆ ಮಗುವಿನದಲ್ಲ." "...ಮಗುವಿನಂತಹಳು ನೀನು....ಮಗುವಿನಂತೆ ನೀನೂ ಅಜ್ಞಾನಿ....ಅಜ್ಞಾನದಿಂದಾದ ಕರ್ಮ ಪಾಪವಲ್ಲ........ಅಪರಾಧ ವಲ್ಲ...ಆದರೆ ನನ್ನ ಮಾತನ್ನು ಕೇಳುವವರು ಯಾರು ? ನಾನೂ ನಿನ್ನಂತೆ ಸ್ತ್ರೀ ಅಲ್ಲವೆ ? ಸ್ತ್ರೀಯ ಮಾತಿಗೆ ಬೆಲೆಯುಂಟೆ ಈ ಜಗದಲ್ಲಿ ?

" ಗಂಡು ಹೆಣ್ಣು ಈ ಜಗದ ರಥದ ಎರಡು ಗಾಲಿಗಳೆಂದು ಹೇಳು ವರು. ಒಂದಿಲ್ಲದೆ ಇನ್ನೊಂದು ನಿರುಪಯೋಗಿ ಎಂದೂ ಹೇಳುವರು. ಒಂದೇ ಗಾಲಿಯಿಂದ ರಥ ಮುಂದೆ ಸರಿಯಲಾರದು ಎಂದು ಕೂಡ ಹೇಳು ವರು."

" ಆದರೆ ಸುಳ್ಳು; ಎಲ್ಲವೂ ಸುಳ್ಳು........"
" ಹೆಣ್ಣು ಗಂಡು ರಥದ ಗಾಲಿಗಳಲ್ಲ, ಜಗವು ರಥವೂ ಅಲ್ಲ .."
" ಜಗ ಗಂಡಸಿನ ನಂದನವನ, ವಿಲಾಸ ಭೂಮಿ."
" ಜಗ ಹೆಂಗಸಿನ ರುದ್ರಭೂಮಿ, ಮಸಣ.

" ನಿತ್ಯವೂ ಗಂಡು ಈ ಜಗದಲ್ಲಿ, ತನ್ನ ನಂದನವನದಲ್ಲಿ ನಲಿಯುತ್ತಾನೆ. ನರ್ತಿಸುತ್ತಾನೆ. ವಿಲಾಸದಲ್ಲಿ ಮೈಮರೆಯುತ್ತಾನೆ. ಮತ್ತನಾಗುತ್ತಾನೆ."

" ಅದೇ ಜಗದಲ್ಲಿ ನಿತ್ಯವೂ ಚಿತೆಗಳು ಉರಿಯುತ್ತವೆ. ಮಸಣದಲ್ಲಿ ನಿತ್ಯವೂ ಹೆಣ್ಣಿನ ದೇಹ ಮಣ್ಣಾಗುತ್ತದೆ. ಹೆಣ್ಣಿನ ದೇಹದ ಮಣ್ಣಿನಿಂದಲೇ ಮಸಣ ಮೈತುಂಬಿ ನಿಂತಿದೆ."

" ಇದಕ್ಕೆ ಉದಾಹರಣೆ ನೀನು. ನಾನು......."

"ನಿನ್ನ ನನ್ನಂತಹವ ಜಗದುಂಬಿದ ಹೆಣ್ಣುಗಳು ಸ್ತ್ರೀ ಜಾತಿ."

" ಇದಕ್ಕೆ ಸಾಕ್ಷಿ ನಿನ್ನನ್ನು ಹಾಳು ಮಾಡಿ ಮನೆ ಬಿಡಿಸಿದವ ನನ್ನನ್ನು ಹಾಳು ಮಾಡಿದವ......ಈ ಜಗದ ಸ್ತ್ರೀ ಸಮಾಜವನ್ನೇ ಹಾಳುಮಾಡುವವರು......"

" ಗಂಡಸರು......ಪುರುಷರು......ಪುರುಷ ಜಾತಿ......"

" ಈ ಪುರುಷ ಜಾತಿಯ ಕಾಲ್ಕೆಳಕ್ಕೆ ಸಿಕ್ಕು ನುಚ್ಚು ನೂರಾಗಿ ಹೋಗುತ್ತಿದೆ. ಈ ನಮ್ಮ ಸ್ತ್ರೀ ಸಮಾಜ........"

" ಇದಕ್ಕೆ ಅಂತ........?

" ತಂಗೀ ನಾನು ನಿರಾಶಾವಾದಿ. ಅದಕ್ಕೆ ಹೇಳುವೆ ಇದಕ್ಕೆ ಅಂತ.... ಎಂದು............ ಪ್ರಳಯವಾಗಿ ಜಗತ್ತೆಲ್ಲ ಜಲಮಯವಾಗುವದೂ ಅಂದು... ಎಂದು ಅತ್ಯಾಚಾರದ ಜ್ವಾಲಾಮುಖಿ ತಡೆದು ತಡೆದು ತಡೆದು ಭುಗಿಲ್ಲೆಂದು ಸಿಡಿದೆದ್ದು ಜಗತ್ತೆಲ್ಲವನ್ನೂ ದಹಿಸುವದೋ ಅಂದು...ಎಂದು ಅನ್ಯಾಯದ ಹಾಲಾಹಲ ಬೆಳೆಯಾಗಿ ಬೆಳೆದು ಪ್ರತಿಯೊಬ್ಬನ ಅನ್ನವಾಗುವದೂ ಅಂದು.......ಎಂದು ಆಕಾಶ ಕುಪ್ಪರಿಸಿ ಬಿದ್ದು ಪೃಥ್ವಿಯನ್ನು ಪುಡಿ ಪುಡಿ ಮಾಡುವದೋ ಅಂದು........ಎಂದು....... ಪೃಥ್ವಿ ತಲೆ ಕೆಳಗಾಗಿ ಆಗಸವಾಗುವದೋ ಅಂದು....ಅಂದು...ಆ ದಿನ ಇದಕ್ಕೆ ಈ ಅತ್ಯಾಚಾರಕ್ಕೆ ಈ ಅನ್ಯಾಯಕ್ಕೆ ಅಂತ. ಎಲ್ಲಿಯವರೆಗೆ ಈ ತಾಂಡವ ನೃತ್ಯ, ಖಾಂಡವ ದಹನ ಜಗದ ಬಯಲಂಗಣದಲ್ಲಿ ಆಗಸದ ಹಂದರದ ಕೆಳಕ್ಕೆ ನಡೆಯತಕ್ಕದ್ದೊ ಅದಕ್ಕೆ ಬಲಿ....ನಾನು...ನೀನು....ಇನ್ನುಳಿದ ಸ್ತ್ರೀಯರು...."

" ಗಂಡಸನ್ನು ದ್ವೇಷಿಸುವ ನಾನು ನಿನಗೆ— ನಿನ್ನನ್ನು ವಿವಾಹ ಮಾಡಿ ಕೊಳ್ಳುವೆ ಎಂದು ಹೇಳಿದ ಗಂಡಸಿನೊಡನೆ ವಿವಾಹ ಮಾಡಿಕೋ ಎಂದು ಹೇಳುವದೇಕೆ ಎಂದು ಕೇಳಬಹುದು— "

"ಅಹುದು....ನಾನು ಹಾಗೆ ಹೇಳುವೆ. ನೀನು ಒಪ್ಪಲೇಬೇಕು. ಇಲ್ಲ ದಿದ್ದರೆ ನಿನಗೆ ಅಥವಾ ಸ್ತ್ರೀ ಜಾತಿಗೆ ಮುಕ್ತಿಯೇ ಇಲ್ಲ......."

" ನರಕದಲ್ಲಿ ಹೊರಳಾಡಬೇಕಾಗುವದು ...ಭೀಕರ ನರಕ....ಸುಮಿತ್ರಾ ನೀನು ನರಕದಲ್ಲಿ ಹೊರಳಾಡುವದನ್ನು ನಾನು ನೋಡಲಾರೆ .... ಕುಲಕರ್ಣಿ ಯವರು 'ನಿನ್ನನ್ನು ವಿವಾಹ ಮಾಡಿಕೊಳ್ಳುವೆ' ಎಂದು ಹೇಳಿದ್ದಾರೆ ... ನೀನು ಅವರ ಜೊತೆಗೆ ವಿವಾಹ ಮಾಡಿಕೊಳ್ಳಲೇಬೇಕು...."

" ಸುಮಿತ್ರಾ ನಾನು ಈ ದಿನಕ್ಕಾಗಿಯೇ ಕಾಯ್ದುದು... ಈ ವಿಷಯ ವನ್ನು ಕುಲಕರ್ಣಿಯವರಿಂದ ಒಡೆನುಡಿಸುವದಕ್ಕಾಗಿ ವಿಶ್ವ ಪ್ರಯತ್ನ ಮಾಡಿದ್ದು.... "

"ಸುಮಿತ್ರಾ....ನಿನಗಾದರೂ ಈ ವಿಷಯ ಅಪ್ರಿಯವಲ್ಲ.... ಕುಲಕರ್ಣಿ ಯವರನ್ನು ವಿವಾಹ ಮಾಡಿಕೊಳ್ಳಲು ನೀನೊಬ್ಬಳೇ ಅಲ್ಲ, ಯಾರೂ ಚಿಂತಿ ಸಬೇಕಿಲ್ಲ ......"

" ಅವರಿಗೆ ವಿವಾಹವು ಅವಶ್ಯವೆ ....? ಎಂದು ಪ್ರಶ್ನಿಸುವ ಪೂರ್ವದಲ್ಲಿ ಯಾವಳೊಬ್ಬ ಸ್ತ್ರೀ ಅವರ ಜೊತೆಗೆ ವಿವಾಹ ಮಾಡಿಕೊಳ್ಳಬೇಕಾದುದು

" .. ಸುಮಿತ್ರಾ....ನೀನಲ್ಲದೆ ಇನ್ನಾರೂ ಆ ಸ್ತ್ರೀಯಾಗಲಾರರು ವಿವಾಹ ಮಾಡಿಕೊ....ಸಂಸಾರ ಸಾಗಿಸು....ಈ ಸಂಸಾರದಲ್ಲಿ ಎಲ್ಲವೂ ಇದೆ. ಸುಖ ವಿದೆ... ದುಃಖವಿದೆ.... ಒಂದು ಕಷ್ಟದಿಂದ ಮುಕ್ತರಾಗಿ ಇನ್ನೊಂದು ಕಷ್ಟದಲ್ಲಿ ಕೈ-ಕಾಲು ಕಡಿದುಕೊಂಡು ಬಿದ್ದಿದ್ದರೂ ಮುಕ್ತರಾಗಿ ಬಂದ ಹಿಂದಿನ ಕಷ್ಟ ವನ್ನು ದೂರದಿಂದ ನೋಡಿದಾಗ ದೊರೆಯುವ ಆನಂದವೇ ಸಂಸಾರಿಕರ ಆನಂದ. ಸಂಸಾರದಲ್ಲಿ ದುಃಖವಿದೆ .... ಸುಖವಿದೆ ... ಅರಿತು ಮಾಡಿದ ಯಾವ ಕಾರ್ಯದಿಂದಲೂ ಸುಖವಿದೆ .. ಎನ್ನುವದು ಮರೆಯಬೇಡ ಎಂದು ಕಾಮಿನಿ ಹೇಳುತ್ತಿದ್ದಳು.

ಅವಳು ತೀರ ವಿಚಿತ್ರವಾಗಿ ಹೇಳುತ್ತಿದ್ದಳು. ಆದರೂ ಹೇಳುವದು ಸತ್ಯವನ್ನು.

ಗಂಡಸು ಕ್ರೂರ, ಸ್ವಾರ್ಥಿ, ನಿಜ. ಆದರೂ ಇಂದಿನ ಜಗದಲ್ಲಿ ಅವರಿಂದ ದೂರಾಗಿ ಬಾಳಲು ಸಾಧ್ಯವಿಲ್ಲ. ಸ್ತ್ರೀ ನಿಸರ್ಗಸಿದ್ಧವಾಗಿ ಅಬಲೆ. ನಿಸರ್ಗವೇ ಮೊದಲು ಅವಳ ಮೇಲೆ ಅನ್ಯಾಯ ಮಾಡಿದೆ. ಅವಳು ಯಾವುದಕ್ಕೂ ಅಸಮರ್ಥಳು. ಅಂತೆಯೇ ಸಮರ್ಥರನ್ನು ಆಶ್ರಯಿಸಲೇಬೇಕು. ಆ ಸಮರ್ಥರು ಪುರುಷರಲ್ಲದೇ ಇನ್ನಾರೂ ಅಲ್ಲ. ನ್ಯಾಯ ಅನ್ಯಾಯಗಳನ್ನು ಬದಿಗಿರಿಸಿ ಅವರನ್ನು ಆಶ್ರಯಿಸಲೇಬೇಕು.

ನಾನು ಕೂಡ ಆಶ್ರಯಿಸಲೇಬೇಕಾಗಿದೆ. ಗಂಡಸಿನ ಆಶ್ರಯವೆಂದರೆ ವಿವಾಹ ಮಾಡಿಕೊಂಡು ಅವನ ಜೊತೆಗಿರುವದು... ಸಂಸಾರ ಸಾಗಿಸುವದು

ಸಂಸಾರ ಸಾಗಿಸುವದು....!

ವಿವಾಹ ಮಾಡಕೊಂಡು ಸಂಸಾರ ಸಾಗಿಸುವದು !

ಸ್ತ್ರೀ ವಿವಾಹ ಮಾಡಿಕೊಂಡು ಸಂಸಾರ ಸಾಗಿಸಲೇಬೇಕು. ಇದು ಅಂದಿನಿಂದ ಇಂದಿನವರೆಗೆ ನಡೆದುಬಂದ ಪರಂಪರೆ. ವಿವಾಹವಿಲ್ಲದೆ ಸಂಸಾರವಿಲ್ಲ. ಇದ್ದರೂ ಅದು ಸಂಸಾರವಲ್ಲ.

ಆದರೆ ಸಂಸಾರವೆಂದರೆ ಏನು...?

ವಿವಾಹಿತ ಪತಿಯೊಡನೆ ಕೂಡಿಕೊಂಡು ಮಕ್ಕಳನ್ನು ಹೆರುವದು ಸಂಸಾರವೆ....? ವಿವಾಹವಿಲ್ಲದೆ ಮಕ್ಕಳನ್ನು ಹೆತ್ತರೆ....?

ಅದು ವ್ಯಭಿಚಾರ....ಪಾಪ....

ಆದರೂ ಸಂಸಾರವಲ್ಲವೆ....? ಅದಕ್ಕೆ ಕಾಮಿನಿಯ ಉತ್ತರ—

"ಇಂದಿನ ಸಮಾಜ ಅದನ್ನು ಸಂಸಾರವೆಂದು ಒಪ್ಪುವದಿಲ್ಲ. ನನ್ನ ದೃಷ್ಟಿಯಲ್ಲಿ ಅದೂ ಸಂಸಾರ– ಆದರೆ ನಾನು ಸಮಾಜವಲ್ಲ. ಹಿಂದೆ ದೇವರು ಮಾನವನಾಗಿ ಮನುಷ್ಯರೊಡನಾಡುವ ಕಾಲದಲ್ಲಿ ಇಂತಹ ಘಟನೆಗಳು ನಡೆಯುತ್ತಿದ್ದವು....."

"....ಬಬ್ರುವಾಹನ ಅರ್ಜುನನ ಮಗ....ಮೂರು ಲೋಕದ ಗಂಡನೆನಿಸಿಕೊಂಡವನ ಮಗ. ಭಗವಂತನ ಅವತಾರಿಯಾದ ಕೃಷ್ಣನ ಜೀವನ್ಮಿತ್ರನ

ಮಗ. ಇದನ್ನು ಯಾವನೂ ಅಲ್ಲಗಳೆಯಲಾರ. ಆದರೆ ಚಿತ್ರಾಂಗದೆಯೊಡನೆ ಯಾರು ಅರ್ಜುನನ ವಿವಾಹವನ್ನು ಮಾಡಿದ್ದರು...?"

"ಸುಮಿತ್ರಾ .. ಪುರಾಣಕಾಲದ ದೇವರು ನಮ್ಮ ದೇವರು ಎಂದು ಎಲ್ಲರೂ ಪೂಜಿಸುತ್ತಾರೆ. ಆದರೆ ಅವರ ರೀತಿಯನ್ನು ಅವರ ಆಚರಣೆಯಲ್ಲಿ ತಂದುಕೊಳ್ಳುವದಿಲ್ಲ ಆದರಿಂದ ಗಂಡಸಿನ ರೀತಿಗೆ.... ನೀತಿಗೆ ಸ್ವಾರ್ಥಕ್ಕೆ ಅಡ್ಡಬರುತ್ತದೆ. ತಡೆಯೊಡ್ಡುತ್ತದೆ .." ಎನ್ನುನದು.

ಆದರೆ ಕುಲಕರ್ಣಿಯವರ ವಿಚಾರವೇ ಬೇರೆ—

"ಸಂಸಾರವೆಂದರೆ ವಿವಾಹವೂ ಅಲ್ಲ. ಮಕ್ಕಳನ್ನು ಹೆರುವದೂ ಅಲ್ಲ. ಸಂಸಾರವೆಂದರೆ ಜಗತ್ತು...ಪೃಥ್ವಿ...ಅಲ್ಲ ಏನಿಲ್ಲ...?"

"... ಎಲ್ಲವೂ ಇದೆ....ಅಲ್ಲಿ ಇಲ್ಲದ್ದು ಎಲ್ಲಿಯೂ ಇಲ್ಲ.... ಆದರೆ ನಾವು ಸಂಸಾರವನ್ನು ಸಂಕುಚಿತ ಮಾಡಿ ಆದನ್ನು ಮನೆಯ ನಾಲ್ಕು ಗೋಡೆಗಳ ಮಧ್ಯದಲ್ಲಿ ಬಂಧಿಸಿಡಲು ಯತ್ನಿಸುವೆವು. ಅಂತೆಯೇ ನಮಗೆ ಅದರಲ್ಲಿ ಪಾಪ ಕಂಡು ಬರುತ್ತದೆ.

"...ಸಂಸಾರಿಗೆ ಪಾಪವೆಂದೂ ಕಾಣದು. ಆದರೆ ನಾವು ಸಂಕುಚಿತ ದೃಷ್ಟಿಯಿಂದ ಸಂಸಾರವನ್ನು ಮನೆಯ ಅಂಗಣದಲ್ಲಿ ತಂದುಕೊಂಡರೆ ತಪ್ಪು ಯಾರದು....?"

"....ಇದರ ಅರ್ಥ ಸಂಸಾರದಲ್ಲಿ ಪಾಪವಿಲ್ಲ ಎಂದಲ್ಲ ಪಾಪವಿದೆ.... ಆದರೆ ಸುವಿಚಾರದಿಂದ ಆಚರಿಸಿದ ಯಾವ ಕಾರ್ಯವೂ ಪಾಪಲ್ಲ. ದುರ್ವಿಚಾರದಿಂದ ನಡೆದ ಯಾವ ಕಾರ್ಯವೂ ಪಾಪ....ಆದರಂತೆ ಅವಿಚಾರದಿಂದ ನಡೆದಾಗಲೂ ಪಾಪನಾಗುತ್ತದೆ...."

ಅಹುದು ನಾನು ಅವಿಚಾರದಿಂದ ನಡೆದೆ. ಅಂತೆಯೇ ನನ್ನಿಂದ ಪಾಪವಾಯಿತು.

ನಾನು ಪಾಪಿ....ಅವಿಚಾರದಿಂದ ಪಾಪಮಾಡುದು ನಿಜ....ನನ್ನ ಅವಿಚಾರಕ್ಕೆ ಇನ್ನೊಬ್ಬರ ದುರ್ವಿಚಾರ ಕೂಡಿಕೊಂಡು ಆದರಿಂದ ಮಹಾಪಾತಕವಾಯಿತು... ಆದರೆ— ಅದನ್ನು ಅನುಭವಿಸಿದವಳು ಮಾತ್ರ ನಾನು.......

ಪಾಪದ ಪಾಲುಗಾರ 'ತನಗೇನೂ ಅರಿಯದು' ಎಂದು ಹೊಣೆ ಹಾರಿಸಿ ಕೊಂಡ. ಅವ 'ಅಲ್ಲ' ಎಂದಂತೆ ನನಗೆ ಹೇಳಲು ಸಾಧ್ಯವೆ......? ಆವನ ಪಾಪ ಕೂಡ ನನ್ನಲ್ಲಿ ಸೇರಿ ಸಜೀವವಾಗಿ "ಪಾಪಿ ಇವಳು" ಎಂದು ಜಗತ್ತಿಗೆ ಸಾರುತ್ತಿತ್ತು. ಪಾಪದ ಭೂತ ಪರ್ವತಾಕಾರವಾಗಿ ವಿಕಾರವಾಗಿ ನನ್ನನ್ನು ಹಾಸ್ಯ ಮಾಡುತ್ತಿತ್ತು. ಪೀಡೆ ಕೊಡುತ್ತಿತ್ತು.

ಸಜೀವ ಪಾಪದಿಂದ ಮುಕ್ತಿ .......ಸಾಧ್ಯವೆ ...!

ಪ್ರಾಯಶ್ಚಿತ್ತದಿಂದ ಪಾಪವಿಮೋಚನೆ ಎಂದು ಹೇಳುತ್ತಾರೆ. ಆದರೆ ಎಂತಹ ಕಠೋರ ಪ್ರಾಯಶ್ಚಿತ್ತವೂ ಸ್ತ್ರೀಯನ್ನು ಪಾಪದಿಂದ ಮುಕ್ತಗೊಳಿಸ ಲಾರದು. ಏಕಂದರೆ—

ಪಾಪವೂ ಸ್ತ್ರೀ ಅಂತೆಯೇ ಅದು ಸ್ತ್ರೀಗೆ ಸವತಿಯಾಗಿ ಬಾಳುತ್ತದೆ. ಸವತಿಯಿಂದ ಸ್ತ್ರೀಗೆ ಸುಖದೊರಕುವದೇ....?

ಪಾಪವೂ ಸ್ತ್ರೀ ಅಂತೆಯೇ ಪುರುಷನಲ್ಲಿ ಪೂರ್ಣವಾಗಿ ವಿಲೀನವಾಗು ತ್ತದೆ. ಪತಿವ್ರತೆಯಾಗಿ.

ಸವತಿಯಂತಹ ಪಾಪ ಕ್ಷಣಕ್ಷಣಕ್ಕೂ ನನ್ನ ಹುಳುಕನ್ನು ಹೊರಗಿಡು ತ್ತಿತ್ತು. ನಾನು ಮುಚ್ಚಬಯಸಿದರೂ ಮುಚ್ಚುವದು ಹೇಗೆ? ದೇಹಕ್ಕೆ ಬಟ್ಟೆಯಿಂದ ಮರೆಮಾಡಬಹುದು, ಆದರೆ ಪಾಪವು ದೇಹದಲ್ಲಿ ನೇರಿ ದೇಹ ಧರಿಸಿದಾಗ ಪರ್ವತಾಕಾರವಾದಾಗ ಅದನ್ನು ಮರೆ ಮಾಡಲು ಹೇಗೆ ಸಾಧ್ಯ....?

ಕ್ಷಣಕ್ಷಣಕ್ಕೂ ವಿಂಧ್ಯ ಪರ್ವತದಂತೆ ಆಗಸದೆಡೆಗೆ ಜಿಗಿಯುತ್ತ ಹೊರಟ ಪಾಪದ ಹೊಟ್ಟೆಯನ್ನು ತಡೆಯುವದು ಹೇಗೆ? ಅದನ್ನು ತಡೆಯುವದಕ್ಕೆ ಆಗಸ್ತ್ಯ ಋಷಿಯೇ ಬೇಕಲ್ಲವೆ?

ಆಗಸ್ತ್ಯಋಷಿ...ರಂಗ....ಅಥವಾ ಒಬ್ಬ ಗಂಡಸು. ನನ್ನ ಹೊಟ್ಟೆಯಲ್ಲಿ ಆ ಜೀವ ತನ್ನದು ಎಂದು ಒಪ್ಪಿಕೊಳ್ಳುವ ಒಬ್ಬ ಗಂಡಸು....

ಯಾರಾದರೂ ಒಬ್ಬ ಗಂಡಸು ಆಗಸ್ತ್ಯಋಷಿಯಾಗಿ ಬರಬೇಕಿತ್ತು.

'ಪೃಥ್ವಿಯು ಮೇಲೆ ಸಂಕಟ ಬಂದಾಗೆಲ್ಲ ಆ ನಿವಾರಣೆಗೆ ದೇವರುದರ ಅವತಾರ ತಾಳುತ್ತಾನೆ. ಎಂದು ತಂದೆ ತಿರುತಿರುಗಿ ಕಷ್ಟ ಬಂದಾಗೆಲ್ಲ ತಾಯಿಯೆದುರು ಹೇಳುತ್ತಿದ್ದರು. ತಾಯಿ ಅದನ್ನು ನಂಬುತ್ತಿದ್ದಳು.

ಅದರಿಂದ ಆ ನಂಬಿಗೆಯಿಂದ ಫಲ ಪಡೆಯುತ್ತಿದ್ದಳು.
ಈಗ ನನ್ನ ಮೇಲೆ ಕೂಡ ಸಂಕಟ ಬಂದಿದೆ.
ನಾನೂಕೂಡ ಪೃಥ್ವಿಯಂತೆ ಸ್ತ್ರೀ.

ಪೃಥ್ವಿಯು ಮೇಲೆ ರಾಕ್ಷಸರು ಅತ್ಯಾಚಾರ ಮಾಡುವಂತೆ ನನ್ನ ಮೇಲೆ ಕೂಡ ಅತ್ಯಾಚಾರ ಮಾಡಿದ್ದಾರೆ.

ಪೃಥ್ವಿಗೆ ಬೇಕಾಗಲಿ ಬೇಡವಾಗಲಿ ತಡೆದುಕೊಳ್ಳಲೇಬೇಕು.
ನನಗೂ ಬೇಕಾಗಲಿ ಬೇಡವಾಗಲಿ ತಡೆದುಕೊಳ್ಳಲೇಬೇಕಾಗಿದೆ.

ಪೃಥ್ವಿಯು ಸಂಕಟ ಅನಿವಾರ್ಯವಾದಾಗ ದೇವನು ಸಂಕಟ ನಿವಾರಣೆಗಾಗಿ, ಪೃಥ್ವಿಯು ಉದ್ಧಾರಕ್ಕಾಗಿ ಅವತಾರ ತಾಳುವನಂತೆ! ಹಾಗೆ ಅವನೇ ಹೇಳಿದ್ದಾನಂತೆ!

ನನ್ನ ಮೇಲಿನ ಸಂಕಟ ಕೂಡ ಅನಿವಾರ್ಯವಾಗಿದೆ. ನನ್ನದೂ ಉದ್ಧಾರವಾಗಬೇಕಾಗಿದೆ ಅದಕ್ಕಾಗಿ ಅವತಾರ ತಾಳಲೇಬೇಕು.

ದೇವನ ಅವತಾರದಿಂದ ನನ್ನ ಉದ್ಧಾರ, ಸಂಕಟ ನಿವಾರಣೆ.
ನನ್ನ ಉದ್ಧಾರ .... ನನ್ನ ಸಂಕಟ ನಿವಾರಣೆ.......

"ನಿನ್ನ ಉದ್ಧಾರ ಮಾಡುವ ಶಕ್ತಿ ನನ್ನಲ್ಲಿಲ್ಲ. ಏಕೆಂದರೆ ನಾನೂ ನಿನ್ನಂತೆ ಸ್ತ್ರೀ. ಆದರೆ ನಿನ್ನ ಸಂಕಟ ನಿವಾರಣೆ ಮಾತ್ರ ಮಾಡುವೆನು. ಏಕೆಂದರೆ— ನಾನು ನರ್ಸ". ಎಂದು ಕಾಮಿನಿ ನನ್ನ ಸಂಕಟ ನಿವಾರಣೆಗೆ ಬಂದಳು.

ಸಂಕಟ ನಿವಾರಣೆ .... !
ಅದು ಸಂಕಟ ನಿವಾರಣೆಯಲ್ಲ. ಕೊಲೆ.
ಕೊಲೆ... ! ಅಹುದು ಪಾಪದ ಕೊಲೆ.

ಪಾಪ ಪುಣ್ಯಗಳ ವಿಚಾರ ಮಾಡುವವರು. ಚಿತ್ರಗುಪ್ತರು. ತಾಯಿ ಯಲ್ಲ.

ತಾಯಿಗೆ ಪಾಪ ಪುಣ್ಯಗಳ ವಿಚಾರವಿಲ್ಲ ಆ ವಿಚಾರಗಳು ಅವಳನ್ನು ಸೋಂಕವು. ಹಾಗೆ ವಿಚಾರ ಮಾಡುವವಳು ತಾಯಿಯಲ್ಲ.

ಅವಳು ಎಂದೆಂದಿಗೂ ತಾಯಿಯಾಗಲಾರಳು.

ತಾಯಿ !

ಬೆಳೆಸುವ. ಬಾಳಿಸುವ, ಕಾಯುವ, ಕಾಪಾಡುವ ಶಕ್ತಿಯ ಹೆಸರು ತಾಯಿ

ಅಲ್ಲದೆ ಕೊಲ್ಲಿಸುವವಳಲ್ಲ

ಆದರೆ ಅದು ಹೊಟ್ಟೆಯಲ್ಲಿ ಅಡಗಿರುವದು ಪಾಪ....

ಪಾಪ! .... ಅದು ಎಂತಹ ಪಾಪ ? ಮಕ್ಕಳಿಗೆ ಜನ್ಮ ಕೊಡುವದು ಪಾಪವೆ ? ಮಕ್ಕಳನ್ನು ಹೆರುವದು ಪಾಪವೆ ? ಮಕ್ಕಳ ತಾಯಿಯಾಗು ವದು ಪಾಪವೆ ?

ಪಾಪವೂ ಆಹುದು. ಪುಣ್ಯವೂ ಆಹುದು.

ಒಂದು ನಾಣ್ಯಕ್ಕೆ ಬದಿ ಎರಡು ಒಂದು ಸಂಗತಿಗೆ ವಿಚಾರ ಎರಡು. ಒಬ್ಬ ಮನುಷ್ಯನಿಗೆ ಕಣ್ಣು ಎರಡು ಒಬ್ಬ ಮನುಷ್ಯನಿಗೆ ಕಿವಿ ಎರಡು ಆದರೆ ಒಬ್ಬ ಮನುಷ್ಯನಿಗೆ ಆತ್ಮ ಒಂದು. ಬದಿ ಎರಡಾದರೂ ನಾಣ್ಯ ಒಂದು. ವಿಚಾರ ಎರಡಾದರೂ ಸಂಗತಿ ಒಂದು. ಕಣ್ಣು ಎರಡಾದರೂ ನೋಡುವದು ಒಂದನ್ನು. ಕಿವಿ ಎರಡಾದರೂ ಕೇಳುವದು ಒಂದನ್ನು.

ಇದೆಲ್ಲವೂ ವೇದಾಂತ ವೇದಾಂತಕ್ಕೂ ಪ್ರತ್ಯಕ್ಷಕ್ಕೂ ಅಂತರ ಅನಂತ. ವೇದಾಂತವೇ ಪ್ರತ್ಯಕ್ಷವಾದರೆ ಸ್ವರ್ಗ ನರಕದ ನಿರ್ಮಾಣವಾಗುವದು.

ಜನ್ಮ ಕೊಟ್ಟು ಬೆಳೆಸುವದು ಪುಣ್ಯದ ಕೆಲಸವೆಂದು ಪಾಪದ ಸಜೀವ ಮೂರ್ತಿಯನ್ನು ಕಂಕುಳಲ್ಲಿಟ್ಟುಕೊಂಡು ತಿರಗು. ಆಗ್ಗೆ...?

ಆಗ್ಗೆ ಜನಕೇಳುವದು ಈ ಮಗುವಿನ ತಂದೆ ಯಾರು ? ಎಂದು.

ಹೇಳುವದಕ್ಕೆ ಉತ್ತರವಿಲ್ಲ ಏಕೆಂದರೆ ಮಗುವಿನ ತಂದೆ ಮಗುವಿನ ತಾಯಿಯ ಗಂಡನಲ್ಲ. ಗಂಡನಿಲ್ಲದೆ ಹೆಂಡತಿಯಿಲ್ಲ.

ಹೆಂಡತಿಯಲ್ಲದವಳಿಗೆ ಹೆರುವ ಶಕ್ತಿಯಿದ್ದರೂ ಹೆರುವ ಅಧಿಕಾರವಿಲ್ಲ.

ಹಾಗೆ ಅವಳು ಆಚರಿಸಿದರೆ ಅದು ಪಾಪ.

ಅದಕ್ಕೆ ಇದು ಪಾಪ. ಆ ಪಾಪವೇ ನಿನ್ನ ಸಂಕಟ. ಅದರ ನಿವಾರಣೆ...ಅದರ ಕೊಲೆ ಪಾಪದ ಕೊಲೆ.

ಪಾಪದ ಕೊಲೆ........ಸಂಕಟ ನಿವಾರಣೆ.

ಅದಕ್ಕೇ ಕಾಮಿನಿ ಹೇಳುತ್ತಾಳೆ—

" ನಿನ್ನ ಸಂಕಟ ನಿವಾರಣೆ ಮಾಡುವೆ". ಎಂದು.

"ಅಹುದು ಸುಮಿತ್ರಾ........ನೀನು ಇದರ ನಿವಾರಣೆಗೆ ಸಿದ್ಧಳಾಗಲೇ ಬೇಕು. ಆಗಲೇ ನಿನ್ನ ವಿವಾಹ ಸಾಧ್ಯ. ಹೆಂಗಸನ್ನು ವಿವಾಹ ಮಾಡಿ ಕೊಳ್ಳಲು ಗಂಡಸು ಸಿದ್ಧನಾಗುವದು ಸಹಜ....ಆದರೆ...ಆದರೆ ಸುಮಿತ್ರಾ ನೀನು ಹೆಂಗುಸಲ್ಲ. ಸ್ತ್ರೀಯಲ್ಲ. ನಿನ್ನ ಸ್ತ್ರೀತ್ವ ಹಾಳಾಗಿದೆ. ಸ್ತ್ರೀತ್ವ ಹಾಳಾದ ಸ್ತ್ರೀಯನ್ನು ಬಯಸುವವರು ಸಾವಿರಾರದರೂ ವಿವಾಹಕ್ಕೆ ಸಿದ್ಧ ರಾಗುವರು ಯಾರೂ ಇಲ್ಲ...ಏಕೆ ? ಸ್ತ್ರೀಯ ಸರ್ವಗುಣಗಳು ನಿನ್ನಲ್ಲಿರ ಬಹುದು. ಸ್ತ್ರೀಯ ಸರ್ವ ಅವಯವಗಳೂ ನಿನ್ನಲ್ಲಿವೆ. ಆದರೂ ನೀನು ವಿವಾಹವಾಗಬಯಸುವವರ 'ಕಣ್ಣುಗಳಲ್ಲಿ ನೀನು ವಿವಾಹಕ್ಕೆ ಅಯೋ ಗ್ಯಳು. ಜಗತ್ತಿನ ಯಾವ ವಿಷವನ್ನೂ ಅರಗಿಸಿಕೊಳ್ಳುವ ಶಕ್ತಿ ಸ್ತ್ರೀಯನ್ನುಳ್ಳ ಯಾವ ಪ್ರಾಣಿಯಲ್ಲಿಯೂ ಇರುವಂತೆ ನಿನ್ನಲ್ಲಿಯೂ ಇರುವದಾದರೂ ಕೂಡ ನೀನು ಅಯೋಗ್ಯಳು. ನಿನ್ನ ಪ್ರಯೋಜನ ಎಲ್ಲರಿಗೂ ಇದ್ದರೂ ತಮ್ಮ ಪತ್ನಿ ಎಂಬ ಪದಕ್ಕೆ ನೀನು ಅಯೋಗ್ಯಳು ಎಂದೇ ಅವರ ಹುಚ್ಚು ಕಲ್ಪನೆ.......ಸುಮಿತ್ರಾ ಸಾವಿರ ಮಾತಿಗೂ ಅರ್ಥ ಒಂದು ಸತ್ಯದಂತೆ ಪರಮಾತ್ಮನಂತೆ...ನಿನ್ನ ವೈವಾಹಿಕ ಜೀವನಕ್ಕೆ ಮುಖ್ಯವಾಗಿ ಅಡ್ಡವಾಗಿ ರುವ ವಸ್ತು ನಿನ್ನ ಬೆಳೆದ ಹೊಟ್ಟೆ. ಆ ಬೆಳೆದ ಹೊಟ್ಟೆಯ ಹಿಂದೆ ಹೇಡಿ ಯಂತೆ ಅಡಗಿರುವ ಆ ಪಾಪಿಯ ಪಾಪ... .. ಇನ್ನೊಬ್ಬರ ಪಾಪದ ಪರಿ ಣಾಮಕ್ಕೆ ನೀನೇಕೆ ಶಿಕ್ಷೆ ಅನುಭವಿಸುವಿ ? ಇಂದು ಯಾರಿದ್ದರೂ ನಿನಗೆ

ಭೋಧಿಸುವದು ಇದನ್ನೇ ಏಕೆಂದರೆ ಲಗ್ನವಿಲ್ಲದೆ ಹೆರುವದು ಅಧರ್ಮ;
ಪಾಪ. ಅಂತೆಯೇ ಪಾಂಡವರ ತಾಯಿ ಕುಂತಿ ಕೂಡ ಕರ್ಣನನ್ನು
ಹೊಳೆಗೆ ಬೀಸಾಕಿದಳು. ಆದರೆ ಅವಳ ದುರ್ದೈವ ಕರ್ಣ ಬದುಕಿಕೊಂಡು
ಅವಳ ಹೆಸರನ್ನು ಕಲಂಕಿತಮಾಡಿದ. ತಾಯಿಗೆ ಮಗು ಮಾಡಿದ ಉಪ
ಕಾರ ಅದು. ಈ ಜಗದಲ್ಲಿ ಗಂಡಸು—ತಂದೆ ಮಗ ಪತಿ—ಅವರು
ಯಾರೇ ಇರಲಿ ಅವರಿಂದ ಸ್ತ್ರೀಗೆ ಯಾವ ಉಪಕಾರವು ಆಗದು.
ಹೀಗೆಂದು ನಾವು ಪುರುಷರಿಂದ ದೂರಿರಲು ಸಾಧ್ಯವೆ? ಇಲ್ಲ ಯಾವುದೋ
ಒಂದು ವ್ಯಕ್ತಿಗೆ ಯಾವುದೋ ಒಂದು ಕಾಲದಲ್ಲಿ ಯಾವುದೊಂದು ಕಾರಣ
ದಿಂದ ಸಾಧ್ಯವಾದರೂ ಅದುವೆ ಸಿದ್ಧವಲ್ಲ ಅದೊಂದು ಅಪವಾದ.
ನೀನು ಯಾರೊಬ್ಬರ ಪತ್ನಿಯಾಗಲೇಬೇಕು. ಆದರೆ ನಿನ್ನ ಪತಿ ಇನ್ನಾ
ರದೋ ಒಂದು ಮಗುವಿಗೆ ತನ್ನ ಮಗುವೆನ್ನುವದು ಹೇಗೆ ಸಾಧ್ಯ...?
ಅದು ಅಷ್ಟು ಅಸ್ವಾಭಾವಿಕವಲ್ಲ. ಯಾವುದೋ ಒಂದು ಪರದೇಶಿ ಮಗುವನ್ನು
ತಂದು ಪುತ್ರ ಪ್ರೇಮದಿಂದ ಬೆಳೆಸಬಹುದು. ಆದರೆ ತನ್ನ ಪತ್ನಿಯಲ್ಲಿಯೇ
ಹುಟ್ಟಿದ ಇನ್ನಾರದೋ ಮಗುವಿಗೆ ತನ್ನ ಮಗನೆನ್ನಲು ಮನ ಅದೆಂದಿಗೂ
ಒಪ್ಪದು ಅಷ್ಟೇ ಅಲ್ಲ ಮಗು ಕಂಡಾಗೆಲ್ಲ ಮಗುವಿನ ತಂದೆಯ ವಿಚಾರ,
ಮನದಲ್ಲಿ ಕಂಡೂ ಕಾಣದೆಯೂ ಮಾಡಿ ಮನಸ್ಸನ್ನು ಕಲುಷಿತ ಮಾಡು
ತ್ತದೆ. ಅದರಿಂದ ಜೀವನದಲ್ಲಿ ಸಂಸಾರದಲ್ಲಿ ವಿಷಮತೆ ಹುಟ್ಟುತ್ತದೆ.
ಬಾಳಿನ ಗಾಡಿ ಬುಡಮೇಲಾಗುವ ವೇಳೆ ಕೂಡ ಉತ್ಪನ್ನವಾಗುತ್ತದೆ....
....ಯಾರಿಗೂ ತಿಳಿಯದಂತೆ ಬೆಳೆಯುವ ಪಿಂಡವನ್ನು ಹೊಟ್ಟೆಯಲ್ಲಿಯೇ
ಹೊಡೆದು ಹಾಕುವ ದಿವಸಗಳು ಮುಗಿದಿವೆ. ನಿನಗೆ....ನಿನಗೆ ಹೇರಿಗೆಯಾ
ಗಲೇ ಬೇಕು....ನೀನು ಯಾವುದನ್ನು ಮನಸ್ಸಿನಲ್ಲಿ ಹಿಡಿಯದೆ ಎಂದಿನಂತೆ
ಇರು....ಉಳಿದ ಕೆಲಸವೆಲ್ಲ ನನಗೊಪ್ಪಿದ್ದು." ಎಂದು ಕಾಮಿನಿ ಹೇಳುತ್ತಾಳೆ.

ಅವಳು ಹೇಳುವದೂ ನಿಜ.

ತಂದೆಯೇ ತನ್ನ ಮಗುವಿಗೆ ತನ್ನದಲ್ಲ ಎನ್ನುವಾಗ ಉಳಿದವರಾದರೂ
ಹೇಗೆ ಒಪ್ಪುವರು...?

ಯಾರದೋ ಮಗುವಿನ ತಾಯಿಯಾದವಳ ಜೊತೆಗೆ ವಿವಾಹ ಮಾಡಿ
ಕೊಳ್ಳುವವರಾದರೂ ಯಾರು...? ಹಾಳಾದ ಹೆಣ್ಣಿನೊಡನೆ ವಿವಾಹ ಮಾಡಿ

ಕೊಂಡು ಸಂಸಾರ ಸಾಗಿಸಲು ಸಿದ್ಧರಾಗುವವರಾದರೂ ಯಾರು.......? ಯಾರು...? ಹಾಳಾದ ಹೆಣ್ಣನ್ನು ಮನೆಗೆ ತಂದ ಕುಲಕರ್ಣಿಯವರೇ...? ....ರಂಗನ ಪಾಪದ ಉರುಲು ಕುಲಕರ್ಣಿಯವರಿಗೇಕೆ...? ರಂಗ ಎಲ್ಲಿಯು ... ವ....?.......ಕುಲಕರ್ಣಿಯವರು ಯಾರು....?

ಕುಲಕರ್ಣಿ— ರಂಗ....

ಇಬ್ಬರೂ ಪುರುಷರು. ಇಬ್ಬರಿಗೂ ನಾನು ಬೇಕು. ಒಬ್ಬರು ನನ್ನನ್ನು ಹಾಳು ಮಾಡಿದರು. ಇನ್ನೊಬ್ಬರು ನನ್ನನ್ನು ಹಾಳಾಗದಂತೆ ಕಾಯಲೆತ್ನಿಸು ವರು. ಒಬ್ಬರು ಕೊಲೆ ಮಾಡಲೆತ್ನಿಸಿದರು ಇನ್ನೊಬ್ಬರು ಆ ಕೊಲೆಯಿಂದ ಉಳಿಸಲೆತ್ನಿಸಿದರು.

ಅಲ್ಲ, ಉಳಿಸಿದರು.

ಅಂದು ಕುಲಕರ್ಣಿ ನನಗೆ ಸಿಕ್ಕಿರದಿದ್ದರೆ ...?

ಇಂದು ನಾನೆಲ್ಲಿ ಇರುತ್ತಿದ್ದೆ ?

ಎಲ್ಲವೂ ಯೋಗಾ ಯೋಗ ? ಎಲ್ಲವೂ ದೈವದ ಆಟ. ಎಲ್ಲವೂ ದೇವನ ಲೀಲೆ. ದೇವನ ಲೀಲೆ ?

ಇದೆಂತಹ ಲೀಲೆ ? ಇದುವೂ ಅವನ ಲೀಲೆಯು ! ಆಟವೆ ?

ಬೆಕ್ಕಿಗೆ ಆಟ. ಇಲಿಗೆ ಪ್ರಾಣಸಂಕಟ.

ಯಾವುದು ದೇವನಿಗೆ ಆಟವೊ ಅದುವೇ ನನ್ನ ಕೊರಳಿಗೆ ಉರುಲು. ದೇವ...ಇಂತಹ ಲೀಲೆ ಏಕೆ ಮಾಡುವನು ? ಕರುಣಾನಿಧಿ ಎನ್ನುವ ಆ ಪರ ಮಾತ್ಮ ಇನ್ನೊಬ್ಬರಿಗೆ ಉರುಲಾಗುವ ಆಟವನ್ನು ಏಕೆ ಆಡುವ ?

ನಾವು ಮನುಷ್ಯರು ಹುಚ್ಚರು. ಅಜ್ಞಾನಿಗಳು....ಅಲ್ಲ .. ಅಲ್ಲ...

ನಾವು ಹುಚ್ಚರೂ ಅಲ್ಲ ಅಜ್ಞಾನಿಗಳೂ ಅಲ್ಲ. ನಾವು ಮಾಡಿದ ಅಪ ರಾಧವನ್ನು ಯಾರೊಬ್ಬರ ಕೊರಳಿಗೆ ಸುತ್ತಿ ನಾವು ನಿರಪರಾಧಿಗಳು ಒಳ್ಳೆಯ ವರು ಎನ್ನಿಸಿಕೊಳ್ಳಲೆತ್ನಿಸುವ ಭಂಡರು...

ಕುಲಕರ್ಣಿ ಕೂಡ ಹೀಗೆಯೇ ಹೇಳುತ್ತಿದ್ದರು—

" ನೋಡಿರಿ. ಭಗವಂತ ಹೇಳುತ್ತಾನೆ ತಾನೇ ಸರ್ವ. ತನ್ನಿಂದಲೇ ಜಗತ್ತು ಚಲಿಸುವದು ಎಂದು. ಹಾಗಾದರೆ ಈ ಸಮಸ್ತವೂ ಅವನ ಆಜ್ಞೆಯಿಂದಲೇ ನಡೆಯುವದೆ? ಮನುಷ್ಯರಾದ ನಾವು ಒಬ್ಬೊಬ್ಬರನ್ನು ವಂಚಿಸುವದೇಕೆ? ಒಂದೇ ಮನೆಯಲ್ಲಿ ಎಲ್ಲದರಲ್ಲಿಯೂ ಪಾಲುಗಾರರಾಗುವ ನಾವು ಸ್ವಾರ್ಥಿಗಳಾಗಿ ದುಃಖವನ್ನು, ಕಷ್ಟವನ್ನು ಮತ್ತೊಬ್ಬನ ಪಾಲಿಗೆ ನೂಕಿ ಅವನ ಸುಖವನ್ನು ನಾವು ಕಿತ್ತುಕೊಳ್ಳಲೆತ್ನಿಸುವದೇಕೆ? ಈ ಜಗತ್ತಿನಲ್ಲಿ ಅನಂತ ಅನ್ಯಾಯಗಳು ನಡೆದಿರುವದಾದರೂ ಏಕೆ? ದೇವರೇ ಎಲ್ಲವನ್ನೂ ಮಾಡುವದಾದರೆ ಈ ಅನಾಹುತವನ್ನು ಅವನು ಪ್ರೇರಿಸುವದೇತಕ್ಕೆ?.... ಆದರೆ ಆ ಭಗವಂತನು ಯಾವುದನ್ನೂ ಮಾಡಲಾರ. ಅವನು ಸರ್ವಶಕ್ತನಾದರೂ ಅವನು ತನ್ನನ್ನು ತಾನೇ ಯಾವ ಆಚಾರದಲ್ಲಿ ಬಂಧಿಸಿಕೊಳ್ಳುವದೂ ಇಲ್ಲ. ಅವನು ನಮಗೆಲ್ಲ ಜನ್ಮ ಕೊಡುತ್ತಾನೆ ಬುದ್ಧಿಶಕ್ತಿ, ವಿಚಾರಶಕ್ತಿ ಕೊಡುತ್ತಾನೆ ಮತ್ತು ಜಗದ ಬಯಲಲ್ಲಿ ಎರಡು ದಾರಿಗಳನ್ನು ನಮಗೆ ತೆರೆದಿಡುತ್ತಾನೆ. ಒಂದನ್ನು ಅನುಸರಿಸಿದರೆ ನಾವು ಸಜ್ಜನರಾಗುವೆವು. ಇನ್ನೊಂದರಿಂದ ನಾವು ದುರ್ಜನರಾಗುವೆವು ಸಜ್ಜನರಾಗಲಿ, ದುರ್ಜನರಾಗಲಿ ಭಗವಂತನಿಂದ ನಿರ್ಮಾಣವಾದವರಲ್ಲ ನಿರ್ಮಾಣವಾದ ನಂತರ ಹುಟ್ಟಿ ಬಂದ, ಬೆಳೆದುಬಂದ, ಪ್ರವೃತ್ತಿಯದು....ನಾವು ಮನುಷ್ಯರು. ಅವಿವೇಕಿಗಳಾಗಿ ಕೆಲವೊಂದು ಸಲ ಅಪರಾಧ ಮಾಡುವೆವು. ಆದಕ್ಕೆ ಸರಿಯಾದ ಫಲ ಸಿಕ್ಕಾಗ ನಾವು ದುಃಖಿಗಳಾಗಿ ಕಷ್ಟಿಗಳಾಗಿ ಕಂಡವರನ್ನು ಶಾಪಿಸುವದುಂಟು. ಮನುಷ್ಯರನ್ನು ಶಾಪಿಸಿದರೆ ಅದಕ್ಕೆ ಪ್ರತೀಕಾರವಾಗುವದು. ಪ್ರತೀಕಾರ ಮಾಡದೆ ಶಾಪಿಸಿಕೊಳ್ಳುವ ದೇವನೊಬ್ಬನೆ. ಅಂತೆಯೇ ಎಲ್ಲ ದೋಷವನ್ನೂ ಅವನ ಮೇಲೆ ಹೊರಿಸಿ ನಾವು ಹೊಣೆಗಾರಿಕೆಯನ್ನು ಹಾರಿಸಿಕೊಳ್ಳಲೆತ್ನಿಸುವೆವು.... ಸುಮಿತ್ರಾ....ಅಪರಾಧವಾದುದು ನನ್ನಿಂದ. ಈ ಅಪರಾಧದ ಹೊಣೆ ನನ್ನದು ಎಂದು ನಾವು ಪ್ರಾಮಾಣಿಕತೆಯಿಂದ ಒಪ್ಪಬೇಕು. ಅಂದರೆ ನಮ್ಮ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ಹೃದಯ ಶುದ್ಧವಾಗುವದು....ಆದರೆ ನಾವು ಸಾಮಾನ್ಯ ಮನುಷ್ಯರು ನಮ್ಮ ಪಾಪವನ್ನು ಪರಮಾತ್ಮನ ಮೇಲೆ ಹೊರಿಸಲೆತ್ನಿಸುವೆವು ಅಂತೆಯೇ ಪಾಪ ನಮ್ಮನ್ನು ಬಿಡದೆ ಅಂಟಿಕೊಳ್ಳುವದು, ನಾವು ಮಾಡಿದ ಪಾಪದ ಫಲವಾಗಿ ನಮ್ಮ ಮೇಲೆ ಬಂದ ಸಂಕಟದಿಂದ ಕಷ್ಟದಿಂದ ಜಿಬ್ಬಾಗಿ

ಅದರ ದೋಷವನ್ನು ಪರಮಾತ್ಮನ ಮೇಲೆ ಹೊರಿಸುವದು ಯೋಗ್ಯವೆ...? ನ್ಯಾಯುವೆ? ಅಲ್ಲ. ಎಂದಿಗೂ ಅಲ್ಲ....ಈ ಪಾಪದ ತಾಂಡವತೆ ಪರಮಾತ್ಮನ ಮಾಯೆಯಲ್ಲಿ ವ್ಯಕ್ತಿಯ ಕಾರ್ಯ. ವ್ಯಕ್ತಿಯ ಕಾರ್ಯವೇ ಪಾಪದ ಮೂಲ...."ಎಂದು.

ಕುಲಕರ್ಣಿಯವರು ಹೇಳುವದು ನಿಜ.

ವ್ಯಕ್ತಿಯ ಕಾರ್ಯವೇ ಪಾಪದ ಮೂಲ.

ನಾನಿಲ್ಲದಿದ್ದರೆ ಪಾಪವಿರುತ್ತಿರಲಿಲ್ಲ. ನನ್ನ-ಮನಸ್ಸು ಚಂಚಲವಾಗಿರ ದಿದ್ದರೆ ಯಾವ ಪಾಪವೂ ಆಗುತ್ತಿರಲಿಲ್ಲ.

ಆ ಪಾಪಕ್ಕೆ ಪ್ರಾಯಶ್ಚಿತ್—ನನ್ನ ಮರಣ.

ನನ್ನ ಮರಣದಿಂದಲೇ ನನಗೆ ಮುಕ್ತಿ ಎಂದು ಮನೆಯಿಂದ—ನನ್ನ ತಂದೆಯ ಮನೆಯಿಂದ—ಹೊರಬಿದ್ದೆ ಆ ರಾತ್ರಿ.

ಆ ರಾತ್ರಿ....

ಒಬ್ಬರನ್ನೊಬ್ಬರು ಎಂದೆಂದಿಗೂ ಬಿಡದಂತೆ ಅಂಟಿಕೊಂಡು ಬಾಳುವ ಈ ಜಗದ ಎಲ್ಲರೂ ಎಲ್ಲ ಸಂಬಂಧವನ್ನು ಕಡಿದೊಗೆದು ಮುಕ್ತರಾಗಿ ಎಲ್ಲ ವನ್ನೂ ಮರೆತು ಎಲ್ಲರನ್ನು ಮರೆತು ನಿದ್ರಿಸುತ್ತಿದ್ದರು.

ನಾನು....!

ನಾನು ಯಾರೂ ಆಗಿರಲಿಲ್ಲ. ನನಗೆ ಯಾರ ಸಂಬಂಧವೂ ಇರಲಿಲ್ಲ. ನನ್ನ ಸಂಬಂಧವೆಲ್ಲ ಹಗಲಿನಲ್ಲಿಯೇ ಕಡಿದುಹೋಗಿತ್ತು. ಬೆಳಕಿನಲ್ಲಿಯೇ ಬಯಲಾಗಿತ್ತು. ಬೆಳಕು ನನ್ನ ಪಾಲಿಗೆ ಕಾರ್ಗತ್ತಲೆಯಾಗಿತ್ತು. ನನ್ನದೇ ಆದ ನನ್ನಂತಹದೇ ಆದ ಕಾರ್ಗತ್ತಲೆ ನನ್ನನ್ನು ಕೈಮಾಡಿ ಕರೆಯುತ್ತಿತ್ತು. ಆವಾಹನ ಮಾಡುತ್ತಿತ್ತು. ನನ್ನಲ್ಲಿ ನೀನೂ ಮಾಯವಾಗ 'ಬಾ' ಎಂದು. ನನ್ನಲ್ಲಿ ಲೀನಳಾಗ 'ಬಾ' ಎಂದು.

ಆಹುದು. ಅದಲ್ಲದೆ ಬೇರೆ ಯಾವ ದಾರಿಯೂ ನನ್ನೆದುರು ಕಾಣುತ್ತಿರ ಲಿಲ್ಲ... ನನ್ನೆದುರು ನಿಚ್ಚಳವಾಗಿ ಕಾಣುತ್ತಿದ್ದುದು ಅದೇ ಕಾರ್ಗತ್ತಲೆ.

ತಂದೆಯ ಮನೆಯಲ್ಲಿ ನಾನು ಬಾಳುವದು, ಉಳಿಯುವದು ಸಾಧ್ಯ ವಿರಲಿಲ್ಲ. ಅಲ್ಲಿ ನನ್ನ ಅಸ್ತಿತ್ವ ಮುಂದುವರಿಸುವದು ಇನ್ನಾವುದೂ ಅನಾ ಹುತಕ್ಕೆ ಆಮಂತ್ರಣ ಕೊಡುವದಾಗಿತ್ತು.

ಅವಿವಾಹಿತ ಕನ್ಯೆಗೆ ತಂದೆಯ ಮನೆಯನ್ನುಳಿದರೆ ಅಸ್ತಿತ್ವ ಎಲ್ಲಿ? ಆವಳು ಹೋಗುವದಾದರೂ ಎಲ್ಲಿಗೆ? ಹೆತ್ತಮನೆಯೇ ಹೊರಕ್ಕೆ ನೂಕುವಾಗ ಕೈಮಾಡಿ ಸ್ವಾಗತಿಸುವ ಮನೆಯಾವುದು? ದೇವನೇ ದೂಡಿದಾಗ ಮುಂದಕ್ಕೆ ಕರೆಯುವವರಾರು?

ಯಾರೂ ಇಲ್ಲ. ಎಲ್ಲಿಯೂ ಇಲ್ಲ.

ತೆರೆದ ಮಾರ್ಗ ಒಂದೇ ಒಂದು....ಇಲ್ಲದಾಗುವದು ..ಯಾರಿಗೂ ಇಲ್ಲ ದಾಗುವದು. ಎಲ್ಲಿಯೂ ಇಲ್ಲದಾಗುವದು ....

ಶೂನ್ಯದಲ್ಲಿ ಮಾಯವಾಗುವದು. ಕಾರ್ಗತ್ತಲೆಯಲ್ಲಿ ಕತ್ತಲೆಯಾಗು ವದು. ಸತ್ತು ಇಲ್ಲದಾಗುವದು.

ಕಾರ್ಗತ್ತಲೆ.... ಸಾವು....

ನಾನೂ ಕಾರ್ಗತ್ತಲೆಯಲ್ಲಿ ಹೊರಟಿದ್ದೆ. ಸಾಯುವದಕ್ಕೆ– ಜಗದ ಬಂಧನದಂತಿದ್ದ ಮನೆಯ ನಾಲ್ಕು ಭವ್ಯ ಗೋಡೆಗಳ ಮಧ್ಯದಲ್ಲಿರುವ ಚಿಕ್ಕ ಬಾಗಿಲು ತೆರೆದು.

ಮನೆಯ ಹೊರಗೆ ಬಯಲು. ಯಾರೂ ಇಲ್ಲದ ಬಯಲು. ಯಾರ ಸುಳಿವೂ ಇಲ್ಲ. ಯಾರೂ ನನ್ನನ್ನು ನೋಡುವವರಿಲ್ಲ. ಯಾರೂ ನನ್ನನ್ನು ಕೇಳುವವರಿಲ್ಲ. ನಾನೇ ನಾನು.

ಜಗತ್ತಿನಲ್ಲಿ ನಾನೊಬ್ಬಳೇ ಇದ್ದೆ. ಜಗತ್ತಿನ ಕತ್ತಲೆಯಲ್ಲಿ ನಾನೊ ಬ್ಬಳೇ ಇದ್ದೆ– ಇನ್ನೂ ನಾನು ಮನುಷ್ಯಳೇ ಇದ್ದೆ. ಮನುಷ್ಯತ್ವದ ಮೇರೆ ಮೀರಲು ಹೊರಟಿದ್ದೆ. ಮನುಷ್ಯತೆಯ ಬಂಧನವನ್ನು ಹರಿದೊಗೆಯಲು ಹೊರಟಿದ್ದೆ. ಮನುಷ್ಯತ್ವದ ಕುರುಹಾದ ದೇಹವನ್ನು ತ್ಯಜಿಸಲು ಹೊರಟಿದ್ದೆ.

ಆದರೂ ಇನ್ನೂ ಮನುಷ್ಯಳೇ ಇದ್ದೆ.

ಅಂತೆಯೇ ಇನ್ನೂ ಆ ಎದುರಿನ ಮನೆ ನನ್ನನ್ನು ಸೆಳೆಯುತ್ತಿತ್ತು.

ಮುಚ್ಚಿದ ಎದುರಿನ ಮನೆಯ ಬಾಗಿಲು ತೆರೆಯಬಹುದು ಎನ್ನುವ ಆಶೆ ನನ್ನ ಕಂಗಳನ್ನು ಬಾಗಿಲುವರೆಗೆ ಎಳೆದೊಯ್ದಿತ್ತು. ತೆರೆದ ಬಾಗಿಲಿನಿಂದ

ರಂಗ ಬರುವ ಎನ್ನುವ ಹುಚ್ಚು ಆಶೆ ನನ್ನ ಹೃದಯವನ್ನು ಆ ಮನೆಯತ್ತ ಎಳೆಯುತ್ತಿತ್ತು.

ಆಶೆ, ಆ ಆಶೆ ಭೋರ್ಗರೆದು ಕೊಚ್ಚಿಕೊಂಡು ಹರಿದು ಆಕಾಶದಿಂದ ಕುಪ್ಪರಿಸಿ ಬೀಳುವ ಜಲಪಾತದಲ್ಲಿ ಸಿಕ್ಕು ಅಸ್ತಿತ್ವವಿಲ್ಲದಂತೆ ಮಾಯವಾಗಿತ್ತು ಆದರೂ ಆಶೆ...ಜೀವವಿಲ್ಲದಿದ್ದರೂ ಉಳಿದ ದೇಹದಂತೆ.... ಶವವಾದ ಆಶೆ.... ಜಾಣ ನಿರಾಶೆ....

ಆಶೆ.... ನಿರಾಶೆ

ಆಶೆ–ನಿರಾಶೆಗಳ ಉಯ್ಯಾಲೆಯಲ್ಲಿದ್ದ ನಾನು ನಿರಾಶೆಯ ಕಡೆಗೆ ಸಂಪೂರ್ಣವಾಗಿ ಒಲಿದಿದ್ದೆ. ಇಲ್ಲಿಂದ ಹೋದರೆ ' ನನ್ನ ಮುಕ್ತಿ ' ಎನ್ನುವ ನಿರಾಶೆಯಲ್ಲಿಯ ಆಶೆಯಲ್ಲಿ ನಾನಿದ್ದೆ. ಆದರೂ...........ಎದುರಿನ ಮನೆಯ ಮುಚ್ಚಿದ ಬಾಗಿಲನ್ನು ನೋಡುತ್ತಿದ್ದೆ! ಹುಚ್ಚು ಆಶೆ!

" ನಡು ಹಗಲಲ್ಲಿ ಅಮವಾಸ್ಯೆಯ ಮಧ್ಯರಾತ್ರಿಯಾಗಿದ್ದರೂ ಮಧ್ಯ ರಾತ್ರಿಯಲ್ಲಿ ನಾನು ಹಗಲಿನ ಬೆಳಕನ್ನು ಕಾಣಬಯಸುತ್ತಿದ್ದೆ..."

ರಂಗ ಹೇಳಿದ್ದ—

" ನನಗೇನೂ ಗೊತ್ತಿಲ್ಲ....ನಾನಾವುದನ್ನೂ ಅರಿಯೆನು ... ಯಾರದೋ ಪಾಪವನ್ನು ನನ್ನ ತಲೆಯ ಮೇಲೇಕೆ ಹೊರಿಸ ಬಯಸುವಿರಿ..." ಎಂದು

ಗಂಡಸು ಎಷ್ಟು ಸುಲಭವಾಗಿ ತನ್ನ ಹೊಣೆಗಾರಿಕೆ ಹಾರಿಸಿಕೊಳ್ಳಬಲ್ಲ!

'ತನಗೇನೂ ಗೊತ್ತಿಲ್ಲ...!' ಯಾವುದು ಗೊತ್ತಿರದಿದ್ದುದು ?
ನಾನೆ ? ನನ್ನ ಹೊಟ್ಟೆಯಲ್ಲಿಯ ಆತನ ಪಿಂಡವೆ ?
ಕೇಳುವವರಾರು ? ಆತ ಗಂಡು.
ಗಂಡು ಜಗದ ಗಂಡನೂ ಅಹುದು.

ನಾನು ದೇವನೆಂದು ನಂಬಿದವನೇ ರಾಕ್ಷಸನಾದಾಗ ನನಗೆ ಆಧಾರ ಯಾವದು ? ನಾನು ಯಾರಿಗೆ ಮೊರೆ ಹೋಗಲಿ ?

ಮೊರೆ ಹೊಕ್ಕ ದ್ರೌಪದಿಗೆ ಸಾವಿರ ಸೀರೆಗಳನ್ನು ಕೃಷ್ಣ ಕೊಟ್ಟನಂತೆ ! ನನಗೆ ಸಾವಿರಸೀರೆಗಳು ಬೇಕಿರಲಿಲ್ಲ. ವರುಷಕ್ಕೆರಡು ಸೀರೆ ಕೊಡುವ ಒಬ್ಬ ಪತಿಯಾದರೆ ಸಾಕಿತ್ತು. ಆದರೆ....?

ಆದರೆ ..ನಾನು ದ್ರೌಪದಿಯಾಗಿರಲಿಲ್ಲ. ಆ ಕೃಷ್ಣನ ತಂಗಿಯಾಗಿರ ಲಿಲ್ಲ. ಕೃಷ್ಣನ ತಂಗಿಯಾಗುವ ಯೋಗ್ಯತೆ ನನ್ನಲ್ಲಿದ್ದರೆ ನನ್ನನ್ನು ವಿವಾಹ ಮಾಡಿಕೊಳ್ಳಲು ಅತ್ಯಂತ ಕಠಿಣ ಮತ್ಸ್ಯಯಂತ್ರವನ್ನು ಭೇದಿಸಿದ ಅರ್ಜುನ ನನ್ನ ಬಾಗಿಲಿಗೆ ಬರುತ್ತಿದ್ದ. ಆದರೆ....

ಆದರೆ... ನಾನು ನಿರ್ಮಲೆಯಾಗಿದ್ದೆ.

ಅಶಕ್ತ ತಾಯಿಯ ಹೊಟ್ಟೆಯಲ್ಲಿ ತಲೆತಿರುಕ ತಂದೆಯಿಂದ ಜನಿಸಿದ ನಿರ್ಮಲೆ ನಾನಾಗಿದ್ದೆ. ಅಲ್ಲದೆ ವರಪ್ರಸಾದದಿಂದ ಅಗ್ನಿಯಲ್ಲಿ ಜನಿಸಿದ ಅಗ್ನಿ ಕನ್ಯೆ ನಾನಾಗಿರಲಿಲ್ಲ. ಅಂತೆಯೇ ಅರ್ಜುನ ಬರಲಿಲ್ಲ ಕೃಷ್ಣನು ಒಲಿಯ ಲಿಲ್ಲ.

ಆದರೆ ಅರ್ಜುನನ ಅಣ್ಣನ ತಂದೆ— ಯಮರಾಜ ಮಾತ್ರ ಕೈ ಮಾಡಿ ಕರೆಯುತ್ತಿದ್ದ.

ಎಲ್ಲರೂ ದೂಡಿದಾಗ ಕರೆದವರ ಕೈಯಲ್ಲಿ ಬಾಳಬೇಕಲ್ಲವೇ ?

ಅಂತೆಯೇ ಕರೆದ ಮೃತ್ಯುವಿನ ಹತ್ತಿರ ನಾನಾಗಿಯೇ ಹೊರಟೆದ್ದೆ. ಎಲ್ಲರೂ ಹೋಗುವದಕ್ಕೆ ಹೆದರುವ ಮೃತ್ಯುವಿನ ಉಡಿಯಲ್ಲಿ ಮಲಗಲು ಹೊರಟೆದ್ದೆ,ಎಲ್ಲರ ಹೆದರಿಕೆಯಿಂದ.

ಮುಚ್ಚಿದ ಬಾಗಿಲು ತೆರೆಯಲಿಲ್ಲ. ಬಾಗಿಲು ತೆರೆದು ರಂಗ ಬರಲಿಲ್ಲ.

ರಂಗ....!

ಒಂದು ಕಾಲದಲ್ಲಿ ....

ಛೆ.... ಎಲ್ಲವೂ ಕನಸು.

ಕನಸಿಗಿಂತ ಮಧುರ ಅಮೃತಕ್ಕಿಂತ ಮಧುರ....

ಆದರೆ ಅದು ಅಮೃತವಲ್ಲ, ವಿಷ. ಅಂದು ಅದರ ಅರಿವಿರಲಿಲ್ಲ.

ಅಮರಳಾಗುವುದಕ್ಕೆ ಅಮೃತವೆಂದು ಕುಡಿದೆ. ಅಮೃತವೆಂದು ಕುಡಿ ದುದು ವಿಷವಾಗಿತ್ತು

ವಿಷ ಕುಡಿದರೆ....? ವಿಷ ಹೊಟ್ಟೆಯಲ್ಲಿ ಹೋದರೆ....?

ವಿಷ ಕುಡಿದು ಜೀವ ಕಳೆದುಕೊಂಡ ನಾನು ಜೀವವಿಲ್ಲದ ದೇಹವನ್ನು ಬೀಸಾಡುವದಕ್ಕೆ ಹೊಂಟೆ ಮನೆಬಿಟ್ಟು ಆ ರಾತ್ರಿ.

ದೇಹ ಬೀಸಾಡಲು ಹೊರಟೆ. ಆದರೆ ದೇಹ ದೂರಾಗಲಿಲ್ಲ.

ದೇಹ ದೂರಾಗಲಿಲ್ಲ. ಅಂತೆಯೇ ದೇಹಕ್ಕೆ ಅಂಟಿಕೊಂಡ ಪಾಪ ದೂರಾಗಲಿಲ್ಲ.

ಧಾವಿಸುವ ರೇಲಿನ ಕೆಳಕ್ಕೆ ದೇಹವನ್ನು ಬೀಸಾಕಿ ನುಚ್ಚುನೂರು ಮಾಡಬೇಕೆಂದು ಮಾಡಿದ ಬಯಕೆ ಪೂರ್ಣವಾಗಲಿಲ್ಲ. ರೇಲಿನ ಗಾಲಿಗಳ ಕೆಳಕ್ಕೆ ಬೀಸಾಕಬೇಕಾದ ದೇಹ ಬಿಳಿ ಬಟ್ಟೆ ಧರಿಸಿದವನ ಅಬ್ಬರಕ್ಕೆ ಹೆದರಿ ರೇಲಿನ ಡಬ್ಬಿಯೊಳಗೆ ಸೇರಿತು.

"ಎದುರಿಗೆ ಗಾಡಿ ಬರುತ್ತಿರುವದು ಕೂಡ ಕಣ್ಣಿಗೆ ಕಾಣಿಸದೆ ? ಡಬ್ಬಿಯೊಳಗೆ 'ಯುರಿನಾಲ್ಸ'ಗಳಿವೆ...."ಈ ಜನಕ್ಕೆ........ಇನ್ನೂ ತಿಳುವಳಿಕೆ ಬಂದಿಲ್ಲ...." ಎಂದ ಆತ.

ವಿಧಿಯ ಆಟ ಹೇಳಲುಬಾರದು. ನಮ್ಮ ವಿಚಾರ ಒಂದು ವಿಧಿಯ ಆಟ ಮತ್ತೊಂದು.

ಗಾಡಿಯ ಕೆಳಕ್ಕೆ ಬೀಳಬೇಕೆಂದವಳು ಗಾಡಿಯಲ್ಲಿ ಕುಳಿತುಕೊಂಡೆ.
ಗಾಡಿ ಧಾವಿಸುತ್ತಿತ್ತು. ನಾನೂ ಧಾವಿಸುತ್ತಿದ್ದೆ.
ಧಾವಿಸುವ, ಆದರೂ ನಿರ್ಜೀವ ಗಾಡಿಗೆ ಗೊತ್ತು ಅದರ ಗುರಿ
ಧಾವಿಸುವ ಸಜೀವ ನನಗೆ ಅರಿವಿರಲಿಲ್ಲ ನನ್ನ ಗೊತ್ತು ಗುರಿ.

ಆ ಗಾಡಿಯನ್ನು ನಡೆಯಿಸುವವನೊಬ್ಬನಿರುವ. ಅದಕ್ಕೆಲ್ಲಿಯೂ ಅಪಘಾತವಾಗದಂತ ದಾರಿಯಲ್ಲಿ ಎಲ್ಲಿಯೂ ಕೆಟ್ಟು ಬೀಳದಂತೆ ಅದನ್ನು ಸಹಜವಾಗಿ ನಡೆಯಿಸಿಕೊಂಡು ಹೋಗುವ ಆತ. ಅಂತೆಯೇ ನಿರ್ಜೀವ ರೇಲು ಸಜೀವವಾಗಿ ಸಂಭ್ರಮದಿಂದ ಗಾಳಿ ವೇಗದಿಂದ ಭಾರದ ಪರಿವಿಲ್ಲದೆ ಧಾವಿಸುವದು.

ಆದರೆ ನಾನು...?

ನಾನು ಸಜೀವವಾಗಿರುವೆ. ಆದರೆ ಗೊತ್ತುಗುರಿಗಳಿಲ್ಲ. ನನ್ನ ಮನಕ್ಕೆ ಬಂದಂತೆ ಆಚರಿಸಲು ಕೂಡ ನನ್ನಿಂದ ಸಾಧ್ಯವಿಲ್ಲ. ನನ್ನನ್ನು ಮುಂದುವರಿಸಿಕೊಂಡು ಹೋಗಲು ಯಾರೂ ಇಲ್ಲ. ಎಲ್ಲಿಯೂ ಅಪಘಾತವಾಗದಂತೆ ನೋಡಿಕೊಳ್ಳಲು ಯಾರೂ ಇಲ್ಲ. ಎಲ್ಲಿಯೂ ಕೆಟ್ಟು ನಿಂತುಕೊಳ್ಳದಂತೆ ನೋಡಿಕೊಳ್ಳಲು ಯಾರೂ ಇಲ್ಲ.

ನನಗೆ ಯಾರೂ ಇಲ್ಲ.... ಯಾರೂ ಇಲ್ಲ... ನಾನು ಒಬ್ಬಳೇ ಒಬ್ಬಳು. ಧಾವಿಸುವ ಗಾಡಿ ಧಾವಿಸುವ ಜನ ಜಂಗುಳಿಯಿಂದ ತುಂಬಿದೆ. ಆದರೆ... ಎಲ್ಲರೂ ತಮಗಾಗಿ ಧಾವಿಸುತ್ತಿದ್ದಾರೆ. ತಮಗಾಗಿ ಹೋಗುತ್ತಿದ್ದಾರೆ.

ನನಗಾಗಿ ಯಾರೂ ಇಲ್ಲ ಯಾರೂ... ಇಲ್ಲ.

ನನಗಾಗಿ ಯಾರೂ ಇಲ್ಲದ ನಾನು ಹೋಗುವದಾದರೂ ಎಲ್ಲಿಗೆ ? ಗೊತ್ತು ಗುರಿಯಿಲ್ಲದ ನನ್ನ ಓಡುವದಕ್ಕೆ ಕಡೆ ಎಲ್ಲಿ ? ಯಾರಾದರೂ ಬಂದು ನನ್ನನ್ನು ತಡೆಯಬಹುದೆ ? ಕರೆಯಬಹುದೆ ?

ನನ್ನನ್ನು ಕರೆಯಬಹುದೆ ?.... ಕರೆಯಬಹುದೆ....!

ಯಾರು ? ಯಾರು !

ಯಾರಾದರೂ ಇದ್ದರೆ ನಾನು ಧಾವಿಸುತ್ತಿದ್ದೆನಾದರೂ ಏಕೆ? ಎಲ್ಲರೂ ಕೂಡಿ ನನ್ನನ್ನು ಓಡಿಸಿದರು. ಬೆನ್ನಟ್ಟಿ ಓಡಿಸಿದರು... ನಾನೆಂದಿಗೂ ತಿರುಗಿ ಬಾರದಂತೆ ಹಿಂದೆ ತಡೆಹಾಕಿ ಓಡಿಸಿದರು. ಅಬಲೆಯಾದ ನನಗೆ ಎಲ್ಲಿಯೂ ಯಾರ ಆಶ್ರಯವೂ ದೊರೆಯದಂತೆ ಮಾಡಿ ಓಡಿಸಿದರು. ನನ್ನ ಭವಿತವ್ಯದ ವಿಚಾರ ಯಾರೂ ನೋಡಲಿಲ್ಲ, ಯಾರೂ ಮಾಡಲಿಲ್ಲ.

ಸ್ತ್ರೀ ಅಬಲೆ. ಅವಳಿಗೆ ಭವಿತವ್ಯವನ್ನು ಕಲ್ಪಿಸಿಕೊಡುವದು ಕರ್ತವ್ಯವಿದ್ದರೂ ಕೂಡ ಆ ವಿಚಾರ ಮಾಡಲಿಲ್ಲ.

ಎಲ್ಲರಲ್ಲಿಯೂ ಒಂದೇ ವಿಚಾರ.

ನಾನು ಮರೆಯಾಗಬೇಕು. ಇಲ್ಲದಾಗಬೇಕು.

ಆದರೆ ಎಲ್ಲಿ ಮರೆಯಾಗಬೇಕು... ? ಎಲ್ಲಿ ಇಲ್ಲದಾಗಬೇಕು ?

ಇದರ ವಿಚಾರ ಮಾಡುವವರು ಅವರಾಗಿದ್ದರೆ 'ಮರೆಯಾಗಲಿ' ಎಂದು ಯಾರೂ ಹೇಳುತ್ತಿರಲಿಲ್ಲ.

ತಂದೆ-ತಾಯಿಗಳಿಗೆ ನಾನು ಮರೆಯಾಗುವದು ಬೇಕಿದ್ದಿತು.

ಏಕೆಂದರೆ ನನ್ನಿಂದ ಅವರ ಮಾನಭಂಗ.

ರಂಗನಿಗೆ ನಾನು ಮರೆಯಾಗುವದು ಬೇಕಿದ್ದಿತು.

ಏಕೆಂದರೆ ನಾನೊಂದು ಅವನಿಗೆ ಭಾರ. ಅಹುದು ಭಾರ ! ನಾನು ಇನ್ನುಳಿದ ಎಲ್ಲರಿಗೂ ಮರೆಯಾಗುವದು ಬೇಕಿದ್ದಿತು. ಏಕೆಂದರೆ ನಾನವರ ದೃಷ್ಟಿಯಲ್ಲಿ ಪಾಪಿ...

ಪಾಪಿ....!

ಅಹುದು ನಾನು ಪಾಪಿ !

ಆದರೆ ಧಾವಿಸುವ ಗಾಡಿಯ ಗಾಲಿಗಳು ಯಾವ, ಯಾರ ಪಾಪ ಪುಣ್ಯ ಗಳ ವಿಚಾರವಿಲ್ಲದೆ ಕಾಲಚಕ್ರದಂತೆ ಸುತ್ತುತ್ತಿದ್ದವು.

ಗಾಡಿಯು ಮುಂದುವರೆಯುತ್ತಿತ್ತು. ಓಡುತ್ತಿತ್ತು ... ನಿಲ್ಲುತ್ತಿತ್ತು. ಆದರ ಅಖಂಡ ಕ್ರಮ ತಡೆಯದೆಯೇ ಅವ್ಯಾಹತವಾಗಿ ನಡೆದಿತ್ತು.

ಗಾಡಿ ತಡೆದಾಗ ಜನ ಹೋಗುತ್ತಿದ್ದರು. ಬರುತ್ತಿದ್ದರು.

ಹೋಗುವವರ ಕಡೆಗೆ ನನ್ನ ಲಕ್ಷವಿರಲಿಲ್ಲ.

ಬರುವವರನ್ನು ಆಶೆಯಿಂದ ನಿಟ್ಟಿಸುತ್ತಿದ್ದೆ. ಹೆದರಿಕೆಯಿಂದ ನೋಡು ತ್ತಿದ್ದೆ.

ಬರುವವರಲ್ಲಿ ರಂಗ....ಬಂದರೆ....?

ಬರುವವರಲ್ಲಿ ನನ್ನ ಪರಿಚಯದವರಾರಾದರೂ ಇದ್ದರೆ...?

ಆಶೆ– ಹೆದರಿಕೆ–

ಒಂದಕ್ಕೊಂದು ಸಂಬಂಧವಿಲ್ಲದ ಎರಡು ಶಬ್ದಗಳು.

ಬರಿ ಶಬ್ದಗಳು. ನಿರುಪಯೋಗಿ ಶಬ್ದಗಳು.

ಆಶೆ...

ಅದೂ ಒಂದು ಶಬ್ದ.

ಯಾರಿಗಾಗಿ ಆಶೆ....? ದೊರಕುವ ಸಂಭವ ಕೊಂಚವಾದರೂ ಇದ್ದ ರಲ್ಲವೆ ಅದಕ್ಕಾಗಿ ಆಶೆ ಮಾಡುವದು ?

"ನನಗೇನೂ ಗೊತ್ತಿಲ್ಲ. ನಾನಾವುದನ್ನೂ ಅರಿಯೆನು....ಯಾರದೋ ಪಾಪವನ್ನು ನನ್ನ ಮೇಲೇಕೆ ಹೊರಿಸಬಯಸುವಿರಿ ?" ಎಂದು ಹೇಳಿದವನಿ ಗಾಗಿ ಆಶೆ ಮಾಡುವದು ಹುಚ್ಚುತನ. ಅವನಲ್ಲಿ ನಿಜವಾಗಿ ನನಗಾಗಿ ಪ್ರೀತಿ ಯಿರುವದಾದರೆ ಹೀಗೆ ಹೇಳಬಹುದಿತ್ತೆ ? ಅಥವಾ ಮನುಷ್ಯತ್ವದ ಲವಲೇಶ ವಾದರೂ ಆ ಮನುಷ್ಯನೆಂದೆನ್ನಿಸಿಕೊಂಡು ಬಾಳುವ ದೇಹದಲ್ಲಿ ಅದೆಲ್ಲಿ ಯಾದರೂ ಇದ್ದಿದ್ದರೆ ಈ ರೀತಿಯಾಗಿ ಆ ದೇಹದ ಒಂದು ಭಾಗವಾದ ಮುಖ ದಿಂದ ಅಂತಹ ವಾಕ್ಯಗಳು ಹೊರಬೀಳಬಹುದಿತ್ತೆ ?

ಯಾರದೋ ಪಾಪವಂತೆ !

ಆಹುದು ಯಾರದೋ ಪಾಪ, ಅವನೂ ಒಬ್ಬ........'ಯಾರೊ' ಇದ್ದಿರ ಬಹುದು. ಇಂತಹ ಯಾರೋ ಒಬ್ಬರಿಗಾಗಿ, ಮನುಷ್ಯತ್ವದ ಕೊಂಚ ಅಂಶವೂ ಅಡಗಿರದ ಅಡಗಿಸಿಕೊಂಡಿರದ ಆ ದೇಹಕ್ಕಾಗಿ ಆ ದೇಹಧಾರಿ ಪ್ರಾಣಿಗಾಗಿ ಆಶೆ ಪಡುವದು ಹುಚ್ಚುತನ.

ಅವನಿಗಾಗಿ ಆಶೆ......!

ಆಶೆ ಒಂದು ಶಬ್ದ...ನಿರುಪಯೋಗಿ ಶಬ್ದ.

ಆಶೆ...! ಆಶೆ....!!

ಹೆದರಿಕೆ !

ಯಾರಿಗಾಗಿ ಹೆದರಿಕೆ ? ಯಾರ ಹೆದರಿಕೆ ? ಯಾವುದಕ್ಕೆ ಹೆದರಿಕೆ ?

ತಾನೇ ಮಾಡಿದ ಪಾಪ 'ತನ್ನದಲ್ಲ' ಎಂದು ಅಸತ್ಯ ಹೇಳಿ ಸಮಾಜ ದಲ್ಲಿ, ಜನರಲ್ಲಿ, ಮನೆಯಲ್ಲಿ ತಲೆ ಎತ್ತಿಕೊಂಡು ತಿರುಗುವದಕ್ಕೆ ಹೆದರದ ಹೇಸಿ ಜನರನ್ನು ಮುಂದಕ್ಕೆ ಕರೆಯುವವರೆಗೆ ನಾನು ಹೆದರಬೇಕೆ ? ಅವರ ಹೆದರಿಕೆಯಿಂದ ನನಗೆ ಆಗುವದಾದರೂ ಏನು ? ಮನೆ ತ್ಯಜಿಸಿ ಮಸಣದಲ್ಲಿ ಬಿದ್ದ ಎಲುಬಿನ ಹಂದರ ಹೆದರುವದಾರಿಗೆ ! ಅದಕ್ಕೆ ಯಾರ ಹೆದರಿಕೆ ? ಅದಕ್ಕೆ ಎಲ್ಲರೂ ಹೆದರಬೇಕು........ ಹೆದರಿ ದೂರೋಡಬೇಕು. ಚಳಿ, ಗಾಳಿ, ಮಳೆ ಬಿಸಿಲು ಅಖಂಡವಾಗಿ ಅದಕ್ಕೆ ಪ್ರಹಾರ ಮಾಡಿದರೂ

ಯಾವುದೂ ಘಟನೆ ನಡೆದಿಲ್ಲ ಎಂದು ಬಿದ್ದುಕೊಂಡಿರುವ ಅದಕ್ಕೆ ಯಾರೇನು ಮಾಡುವರು ?

ನಾನೂ ಮಸಣದಲ್ಲಿ ಬೀಸಾಕಿದ ಶವ

ಶವವನ್ನು ಹೆದರಿಸುವವರಿಲ್ಲ. ಹೆದರುವವರೇ ಎಲ್ಲರೂ.

ಅಂತೆಯೇ ಹೆದರಿಕೆ ಒಂದು ಶಬ್ದ. ನನಗೆ ಅದೊಂದು ನಿರುಪಯೋಗ ಶಬ್ದ.

ನಾನು ಹೆದರುವದು ಯಾರಿಗೆ ?

ನನ್ನ ಕಲ್ಯಾಣವಾಗಬೇಕು ಎನ್ನುವ ಸದ್ಭಾವನೆ ಇದ್ದವರಿಗೆ ನಾನು ಹೆದರಬೇಕು

ಅಂತಹ ಸಧ್ಭಾವನೆಯನ್ನು ನನಗಾಗಿ ತಾಳಿದವರು ಯಾರು ? ಎಲ್ಲರಲ್ಲಿ ನಾನು ಮಣ್ಣುವಾಲಾಗಬೇಕು. ಎನ್ನುವ ಭಾವನೆ ಮೊಳಕೆಯೊಡೆದು ಮರವಾಗಿದೆ.

ತಂದೆ ತಾಯಿ ಗುರು ಹಿರಿಯರು... ಎಲ್ಲರೂ "ಕಲ್ಯಾಣವಾಗಲಿ" ಎಂದು ಹರಸುವರು. ಅಂತೆಯೇ ಅವರಿಗಾಗಿ ನಮ್ಮಲ್ಲಿ ಪೂಜ್ಯಭಾವನೆ. ನಾವು ಅಪರಾಧಿಗಳಾದರೆ ಹೆದರಿಕೆ.

'ಕಲ್ಯಾಣವಾಗಲಿ' ಎನ್ನುವವರೇ ಯಾರೂ ಇಲ್ಲದ ಈ ಜಗದಲ್ಲಿ ಅಪರಾಧ ಮಾಡಿದ ನಾನು ಹೆದರುವದು ಯಾರಿಗೆ....?

ಹೆದರಿಕೆಯ ವಿಚಾರ ಎಲ್ಲ ಹೆದರಿಕೆಗಳನ್ನು ಕಿತ್ತೆಸೆದು ತ್ವೇಷದಿಂದ ಮುನ್ನುಗ್ಗಬೇಕೆನ್ನುತ್ತಿರವಾಗಲೇ ಹೆದರಿಕೆಯಭೂತ ಕಣ್ಣೆದುರು ಪ್ರತ್ಯಕ್ಷವಾಗಿ ನಿಂತಿತು.

ಅಂದು... ಆತ ರೇಲ್ವೆ ಟಿಕೀಟ ಕಲೆಕ್ಟರ

ಕೊಡಲು ನನ್ನಲ್ಲಿ ಟಿಕೀಟಇರಲಿಲ್ಲ. ಟಿಕೀಟ ಇಲ್ಲದಕ್ಕಾಗಿ ದಂಡ ತೆರಲು ಹಣವೂ ಇದ್ದಿರಲಿಲ್ಲ.

ಸುತ್ತಲಿನ ಜನ ಕಣ್ಣು ತೆರೆದು ನನ್ನನ್ನೇ ನೋಡುತ್ತಿತ್ತು.

ಸಾಯುವದಕ್ಕೆ ಹೆದರದೆ ಹೊರಟ ಹೆಣ್ಣು ಬದುಕಿನ ರಾಕ್ಷಸನ ದವಡೆಯಲ್ಲಿ ಸಿಕ್ಕು ಜಿಬ್ಬಾಗುತ್ತಿತ್ತು.

ನನ್ನನ್ನು ನೋಡುವವರೆಲ್ಲರ ಕಡೆಗೂ ನಾನು ನೋಡಿದೆ. ನನ್ನ ಹತ್ತಿರ ಕುಳಿತ ವ್ಯಕ್ತಿಯ ಕಡೆಗೂ ನೋಡಿದೆ. ನೋಡುವದಕ್ಕೆ ಎಲ್ಲರೂ ಮುಗಿದ ರೆಂದೇ ನಾನು ಕಣ್ಣುಮುಚ್ಚಿದೆ.

ಆದಲ್ಲದೆ ಇನ್ನೇನೂ ಮಾಡಲು ಸಾಧ್ಯವಿರಲಿಲ್ಲ. ಈಸಲು ಬಾರದ ವ್ಯಕ್ತಿ ತುಂಬಿದ ಸಮುದ್ರದಲ್ಲಿ ಕೈ ಹೊಡೆದು ಹೊಡೆದು ಕೈ ಮೇಲಕ್ಕೇಳಲು ಶಕ್ತಿ ಇಲ್ಲದಾಗ ಮಾಡುವನಾದರೂ ಏನು ? ನಿರಾಶೆಯಲ್ಲಿಯ ಆಶೆ ಎಂದು ದೈವವನ್ನು ನಂಬಿ ಸ್ವಸ್ಥನಾಗುವನು.

ಬದುಕಿದರೆ ಬಾಳು, ಸತ್ತರೆ ಮುಕ್ತಿ.

ಆದರೆ ಬದುಕಿದರೆ ಬಾಳೂ ನನಗಿರಲಿಲ್ಲ. ಸತ್ತರೆ ಮುಕ್ತಿ ದೊರಕದ ಪಾಪಿ ನಾನು ಅಂತೆಯೇ ಬದುಕಿ ಸಾಯುವದು.

ಆದು ಘೋರ ಪಂಥ. ಆದರೂ ಅನಿವಾರ್ಯ.

ಮುಚ್ಚಿದ ಕಣ್ಣು ತೆರೆಯದಂತೆ ಮುಚ್ಚಿದರೆ ಸುಖ. ಎನ್ನುವ ವಿಚಾರ ತೀರ ಸಂಕಟದಲ್ಲಿದ್ದ ವ್ಯಕ್ತಿಗೆ ಬರುವದು ಸ್ವಾಭಾವಿಕ.

ಅಂತಹ ವಿಚಾರ ಮೊದಲಿದಿಂದಲೂ ನನ್ನಲ್ಲಿತ್ತು. ಬೆಳೆದು ಬಂದಿತ್ತು. ಆದೇ ವಿಚಾರದಿಂದಲೇ ನಾನು ನಾಲ್ಕು ಗೋಡೆಗಳನ್ನು ಧಿಕ್ಕರಿಸಿ ಬಯಲಿಗೆ ಬಂದಿದ್ದೆ. ಆದರೆ ಬಯಲಾದ ಬದುಕು ಮತ್ತೆ ನನ್ನನ್ನು ಎಲ್ಲಿಯೂ ಓಡದಂತೆ ಬಂಧಿಸಿ ಗಾಡಿಯಲ್ಲಿ ತುರುಕಿತ್ತು.

ಅಲ್ಲಿಯೇ ನನ್ನ ಬದುಕಿನ ಕೊಲೆ ನಡೆದಿತ್ತು. ಸತ್ತುಹೋದ ಬದುಕಿನ ಶವವನ್ನು ಛಿದ್ರ ಛಿದ್ರವಾಗಿ ಮಾಡುವ ಕಾರ್ಯ ನಡೆದಿತ್ತು. ಅಖಂಡವಾಗಿ ಅವ್ಯಾಹತವಾಗಿ.



— ೩ —

ನಾನು ಕೊನೆಗೆ ತಲುಪಿದ ನಗರ ಪುಣೆಯಾಗಿತ್ತು. ನಾನು ಬಯಸಿ ಬಂದ ನಗರ ಪುಣೆಯಾಗಿರಲಿಲ್ಲ ಆದರೆ ವಿಧಿ ಎಳೆದು ತಂದುದಾಗಿತ್ತು. ಗಾಡಿ

ಯಲ್ಲಿ ನನ್ನನ್ನು ಟಿಕೀಟ ಕಲೆಕ್ಟರನ ತಾವಡಿಯಿಂದ ಬಿಡಿಸಿದ ಮಹಾನುಭಾವರ ಹೆಸರೇ ಕುಲಕರ್ಣಿ.

ಕುಲಕರ್ಣಿ......

ಅವರು ಸಜ್ಜನರು ಸಭ್ಯರು ಅವರು ಹೇಳಿದರು.

" ನೋಡಿರಿ ನಿಮ್ಮ ಇತಿಹಾಸ ನನಗೆ ಗೊತ್ತಿಲ್ಲ. ಅದನ್ನು ಸೂಕ್ಷ್ಮ ವಾಗಿ ತಿಳಿದುಕೊಳ್ಳುವ ವಿಚಾರವೂ ಇಲ್ಲ. ಇಚ್ಛೆಯೂ ಇಲ್ಲ. ಆದರೆ ವಿಚಿತ್ರ ಪರಿಸ್ಥಿತಿಯ ಒತ್ತಡದಲ್ಲಿ ಸಿಲುಕಿದ ವ್ಯಕ್ತಿ ದಾರಿಗಾಣದೆ ಏನಾದರೂ ಮಾಡಲು ಯತ್ನಿಸುತ್ತಾನೆ. ಅದು ವ್ಯಕ್ತಿಯ ಅಪರಾಧವಲ್ಲ ನಾನು ಯಾವುದಕ್ಕೂ ನಿಮ್ಮನ್ನು ದೂಷಿಸುವದಿಲ್ಲ. ಆ ಅಧಿಕಾರವೂ ನನಗಿಲ್ಲ. ಒಂದು ಕಷ್ಟಕಾಲ ದಲ್ಲಿ ನನ್ನ ಪರಿಚಯ ನಿಮಗಾಗಿದೆ. ' ನಿಮಗೆ ಸಹಾಯ ಮಾಡಿರುವೆ ' ಎಂದು ನಾನು ಹೇಳಿಕೊಳ್ಳಬಯಸುವದಿಲ್ಲ. ಏಕೆಂದರೆ ನನ್ನದು ಕರ್ತವ್ಯ; ಸಹಾಯವಲ್ಲ.........ನಿಮಗೆ ಇನ್ನೆಲ್ಲಿಯಾದರೂ .... ಯಾರಾದರೂ ಇದ್ದರೆ ಅವರಲ್ಲಿಗೆ ನಿಮ್ಮನ್ನು ತಲುಪಿಸಿ ಬರುವೆ.... ಆದರೆ ನೀವಾಗಿ ಹೋಗುವೆ ಎಂದರೆ ಇಲ್ಲಿಯೇ ಈ ನಿಲ್ದಾಣದಲ್ಲಿಯೇ ನಿಮ್ಮನ್ನು ಬಿಟ್ಟು ಕೊಟ್ಟು .... ನಾನು ಹೋಗಲಾರೆ .... ನಾನು ನಿಮಗೆ ಯಾರೂ ಅಲ್ಲ.... ಅದು ನಿಜ ಆದರೆ... ಈ ಕ್ಷಣದಲ್ಲಿ ನಾನೇ ನಿಮ್ಮ ರಕ್ಷಕ. ಅದೂ ಸತ್ಯ.... ನೀವು ಹಿಂದೆ ನಡೆದು ಹೋದ ಘಟನೆಗಾಗಿ ವಿಷಾದಿಸಬೇಡಿರಿ. ಆದರೆ ಮುಂದೆ ಮಾಡ ಬೇಕಾದುದೇನು ಎನ್ನುವದನ್ನು ವಿಚಾರಿಸಿರಿ... ನಡೆದಾಗ ನಾವು ಎಡುವಿದ ಕಲ್ಲಿನ ವಿಷಯವನ್ನು ಚಿಂತಿಸದೆ ಎಡುವಿದ ನೋವನ್ನು ಕಳೆದುಕೊಳ್ಳಲು ವಿಚಾರಿಸಬೇಕು.... ನಿಮ್ಮ ಮನದಲ್ಲಿ ಹಲವಾರು ಭಾವನೆಗಳ ತುಮುಲ ತಿಕ್ಕಾಟದಿಂದ ನೀವು ಈಗಾಗಲೇ ಜರ್ಜರಿತರಾಗಿರುವಿರಿ....ನಾನು ತುಂಬಾ ಮಾತನಾಡಿ ನಿಮಗೆ ತೊಂದರೆ ಕೊಡಬಯಸುವದಿಲ್ಲ .... ನಡೆಯಿರಿ ... ನನ್ನ ಜೊತೆಗೆ.... ನನ್ನ ಸದಸದ್ವಿವೇಕ ಬುದ್ಧಿ ಜಾಗೃತವಾಗಿರುವವರೆಗೆ ನಿಮಗೆ ನನ್ನಿಂದ ಯಾವ ಭಯವೂ ಇಲ್ಲ....

ನನಗೆ ಮಾತನಾಡುವದಕ್ಕೆ ಅದೇನೂ ಇರಲಿಲ್ಲ. ಕೇಳುವದೊಂದೇ ನನಗಿದ್ದ ಕರ್ಮ... ಅವರು ಹೇಳಿದಂತೆ ಆಚರಿಸುವದೇ ನನಗುಳಿದ ದಾರಿ. ಅವರು ಹೇಳಿದಂತೆ ನಡೆಯದೆ ಇದ್ದರೆ.... ?

ದಾರಿಗೂಡಿ ನಡೆಯಬೇಕು.

ಯಾವ ದಾರಿಗೂಡಿ...?

ಗೊತ್ತಿಲ್ಲದ ದಾರಿ. ಗುರುತಿರದ ದಾರಿ.

ಗುರಿತಿರದ ದಾರಿಯಿಂದ ಹೋಗುವದೆಲ್ಲಿಗೆ ?

ಎಲ್ಲಿ ಹೋದರೇನು ? ಎಲ್ಲಿ ತಲುಪಿದರೇನು ?

ಎಲ್ಲಿ ತಲುಪಿದರೇನು ಎನ್ನುವದೇ ವಿಚಾರವಾಗಿದ್ದರೆ ಕರೆದವರ ಜೊತೆಗೆ ಹೋದರೆ ತಪ್ಪು ಏನು ?

ಕರೆಯುವವರು ಒಬ್ಬ ಗಂಡಸು.

ಕರೆಯುವದು ತಮ್ಮ ಜೊತೆಗೆ.

ಕರೆಯುವ ಉದ್ದೇಶವೇನು ?

ಅವರು ಕರೆಯುವದು ನಾನು ಸ್ತ್ರಿ ಎಂದು. ನಿರಾಶ್ರಿತ ಸ್ತ್ರೀ ಎಂದು. ನಿರಾಶ್ರಿತ ಸ್ತ್ರೀ ಎಂದು. ನಿರಾಧಾರ-ಸ್ತ್ರೀ ಎಂದು.

ನಾನು ಮನೆ ಮಾರು ಬಿಟ್ಟು ಬಂದಿರುವೆನೆಂಬುದನ್ನು ಅವರು ಅರಿತಿರುವರು.

ಅಹುದು. ಅರಿತೇ ನನ್ನನ್ನು ಕರಿಯುತ್ತಿದ್ದಾರೆ.

ಏಕೆ ಹೋಗಬಾರದು ?

ಏಕೆ ಹೋಗಬೇಕು ?

ಹೋದಲ್ಲಿ ಅವರಿಂದ ಏನಾದರೂ ಅನುಚಿತ ಘಟಿಸಿದಲ್ಲಿ ? ಯಾರಿಗೆ ಗೊತ್ತು– ಯಾರ ಯಾರ ಹೃದಯದಲ್ಲಿ ಎಂತೆಂತಹ ಭಾವನೆಗಳು ಅಡಗಿ ಕುಳಿತರುವವೆಂದು ?

ಕರೆಯುವವ ಗಂಡಸು. ತರುಣ

ನಾನು ಸ್ತ್ರೀ. ತರುಣಿ. ನಿರಾಧಾರಿ

ನಿರಾಧಾರಿ ಸ್ತ್ರೀ ತಾನಾಗಿ ಕೈಗೆ ಸಿಕ್ಕುತ್ತಿರುವಾಗ ಅದನ್ನು ಬೀಸಾಕಿ ದೂರೋಡುವ–ಗಂಡಸು ಯಾರು ? ಅಂತಹ ಸಾಧು ವೃತ್ತಿ ಯಾರಲ್ಲಿ ? ಅಂತಹ ಸನ್ಯಾಸಿ ವೃತ್ತಿ ಸಾಮಾನ್ಯ ಗಂಡಿಸಿಗೆ ಸಾಧ್ಯವೆ ?

ಹೊಗೆಂದು ಹೋಗದಿದ್ದರೆ....?

ಮತ್ತೆ ಹೋಗುವದಾದರೂ ಎಲ್ಲಿಗೆ ?

ಈ ತುಂಬಿದ ಜಗದಲ್ಲಿ ನನ್ನನ್ನು ಕರೆಯುವವರಾದರೂ ಯಾರಿರು ವರು ? ಅವರು–ಹೇಳುತ್ತಾರೆ. 'ನಾನು ನಿಮ್ಮನ್ನು ಇಲ್ಲಿಯೇ ನಿಲ್ದಾಣದಲ್ಲಿ ಬಿಟ್ಟು ಹೋಗಲಾರೆ' ಎಂದು. ನನ್ನ ಮೇಲೆ ಅವರಿಗೆ ಒತ್ತಾಯವೆ ? "ನಿಮ್ಮ ಮೇಲೆ ನನಗೆ ಅಧಿಕಾರವಿಲ್ಲ" ಎಂದು ಹೇಳುತ್ತಾರೆ. ಅಧಿಕಾರವಿಲ್ಲದ ನನ್ನ ಮೇಲೆ ನಿಮ್ಮನ್ನು ಬಿಟ್ಟು ಹೋಗಲಾರೆ' ಎನ್ನುವ ಒತ್ತಾಯವೇಕೆ ?

ಅವರನ್ನು ಧಿಕ್ಕರಿಸಿ ಹೊರಟು ಬಿಡಲಾ ?

ಒಂದಲ್ಲ ಹಲವು ಗಾಡಿಗಳು ಹದಿನೆಂಟು ರೂಲುಗಳ ಮೇಲೆ ನಾನು-ನೀನು ಎಂದು ಸ್ಪರ್ಧೆ ನಡೆಸಿವೆ. ಒಂದಿಲ್ಲ ಒಂದು ನನ್ನನ್ನು ಈ ಜೀವನದಿಂದ ಮುಕ್ತಮಾಡಬಹುದು.

ಈ ಜೀವನದಿಂದ... ?

ಅಹುದು. ಈ ಜೀವನದಿಂದ...ನನ್ನನ್ನು ಕರೆಯುವವರಿಗೆ ನನ್ನ ಜೀವನದ ಪರಿಚಯುವಿಲ್ಲ.

ಆವರು ನನ್ನನ್ನು ನೋಡಿದ್ದಾರೆ. ಬೆಳೆದ ಹೆಣ್ಣನ್ನು ಕಂಡಿದ್ದಾರೆ. ಕಂಡ ಹೆಣ್ಣಿನ ರೂಪ ಆವರನ್ನು ಆಕರ್ಷಿಸಿರಬಹುದು. ಅಂತೆಯೇ ಅವರು ನನ್ನನ್ನು ಕರೆಯುತ್ತಿರಬಹುದು....ಕರೆಯುತ್ತಿರುವರು.

ಅವರು ಕರೆಯುತ್ತಿದ್ದಾರೆ....ಕರೆಯುತ್ತಿದ್ದಾರೆ.

" ನಡೆಯಿರಿ....ಹೋಗುವಾ...."

ಕರೆದವನ ಹಿಂದೆ ಹೋಗುವ ಸಾಕಿದ ನಾಯಿಯಂತೆ ನನ್ನ ಅವಸ್ಥೆ ಖಾಗಿರದೆ ಬಲಿಗಾಗಿ ಎಳೆದುಕೊಂಡು ಹೋಗುವ ಕುರಿಯ ಮರಿಯಂತಿತ್ತು.

ಕುರಿಯ ಮರಿ....

ಕುರಿಮರಿಗೆ ಕೂಗಲು ಬಾಯಿ ಸ್ವತಂತ್ರವಿರುತ್ತದೆ.

ನಾನು ಮನುಷ್ಯಳು, ಸ್ತ್ರೀ; ನನಗೆ ಆ ಸ್ವಾತಂತ್ರ್ಯವೂ ಇಲ್ಲ.

ಅವರು ಕರೆಯುತ್ತಾರೆ.
ನಾನು ಹೋಗಬೇಕು.
ಅವರು ಕರೆದರು
ನಾನು ಅವರನ್ನು ಹಿಂಬಾಲಿಸಿದೆ.
ಆದರೆ ಏಕೆ ?
ಏಕೆ ನಾನು ಅವರ ಜೊತೆಗೆ ಹೋಗಬೇಕು ?

ಇನ್ನೆಲ್ಲಿಯೂ ಹೋಗುವದಕ್ಕೆ ಇಲ್ಲ ಎಂದು ಅವರ ಜೊತೆಗೆ ಹೋಗಬೇಕು.

ಇನ್ನಾರೂ ಕರೆಯುವವರು ಇಲ್ಲ ಎಂದು ಕರೆದವರನ್ನು ಹಿಂಬಾಲಿಸಬೇಕು. ದೂಡುವವರಿಂದಲೇ ತುಂಬಿದ ಜಗದಲ್ಲಿ ಕರೆಯುವವರೊಬ್ಬರಾದರೂ ಇರುವರೆಂದು ಕರೆದವರಿಗೆ ಮಾನಕೊಡಬೇಕು.

ಆದರೆ ಅವರು ಕರೆಯುವರೇಕೆ ! ಕರೆದರೇಕೆ ? ನನ್ನನ್ನು ಜೊತೆಗೆ-ಕರೆದುಕೊಂಡು ಹೊರಟದ್ದು ಏಕೆ ? ಏಕೆ ?

ಅವರಿಗೆ ನನ್ನ ಮೇಲೆ ಕರುಣೆಯೆ ? ನನಗಾಗಿ ಅವರಲ್ಲಿ ಕನಿಕರವೆ....?

ಸ್ತ್ರೀಮೇಲೆ ಕನಿಕರ ತೋರಿಸುವ ಪುರುಷರು ಈ ಜಗದಲ್ಲಿರುವರೆ ? ಸ್ತ್ರೀಗಾಗಿ ಪುರುಷರ ಹೃದಯದಲ್ಲಿ ಕರುಣೆಯ ಸೆಲೆಯೊಡೆಯುವದೆ ?

ರಂಗ ಪುರುಷ.
ನನ್ನ ತಂದೆ ಪುರುಷ.
ಒಬ್ಬ ನನ್ನನ್ನು ಹತ್ತಿರ ಕರೆದ.
ಇನ್ನೊಬ್ಬ ಜೀವನ ಕೊಟ್ಟಿದ್ದ.

ಆದರೆ ಇಬ್ಬರೂ ದೂಡಿದರು. ನನ್ನ ಅಪರಾಧವಿಲ್ಲದಿದ್ದರೂ ನನ್ನನ್ನು ದೂಡಿದರು. ತಮ್ಮ ತಪ್ಪಿಗಾಗಿ ನನ್ನನ್ನು ದೂಡಿದರು.

ತಂದೆ ನನ್ನ ವಿವಾಹ ಶೀಘ್ರವಾಗಿ ಮಾಡಿದ್ದರೆ...?
ರಂಗ ನನ್ನ ಜೊತೆಗೆ ವಿವಾಹ ಮಾಡಿಕೊಂಡಿದ್ದರೆ !

ಇಂದು ದಾರಿಯಲ್ಲಿ ಕರೆದ ಕಂಡ ಗಂಡಸಿನೊಡನೆ ನಾನು ಹೋಗಬೇಕಾಗಿರಲಿಲ್ಲ. ಅಲ್ಲದೆ ಯಾರಿಗೂ ನನ್ನನ್ನು ಕರೆಯುವ ಧೈರ್ಯವೂ ಆಗುತ್ತಿರಲಿಲ್ಲ.

ನಿರಾಧಾರ ಸ್ತ್ರೀ ದಾರಿಯಲ್ಲಿ ಬಿದ್ದ ಕಲ್ಲು .... ಯಾರೂ ತುಳಿಯಬಹುದು. ಯಾರಿಗೂ ಕನಿಕರವಿರಲಿಲ್ಲ. ಯಾರಲ್ಲಿಯೂ ಕರುಣೆಯಿಲ್ಲ ಯಾರೂ ಎತ್ತಿ ಬೀಸಾಕಬಹುದು.

ಯಾರಿಗೂ ಅದರ ಬೆಲೆಯಿಲ್ಲ.

ಬೆಲೆಯಿಲ್ಲದ ಜೀವ... ನಿರಾಧಾರ ಸ್ತ್ರೀ.

ಬೆಲೆಯಿಲ್ಲದ ಜೀವ, ಬೆಳೆದುಕೊಂಡು ಬೀದಿಯಲ್ಲಿ ಕಂಡವರ ಹಿಂದಿನಿಂದ ಸಾಗಬೇಕು. ಅವರು ಹೇಳಿದಲ್ಲಿ ಹೋಗಬೇಕು. ಅವರು ತೋರಿದ ಮನೆಯೇ ನಿವಾಸಸ್ಥಾನ.

ಅವರು ನನಗೆ ಹೇಳಿದರು—

"ಇದುವೇ ನಿಮ್ಮ ನಿವಾಸಸ್ಥಾನ. ನಾನು ಕೂಡ ಇಲ್ಲಿಯೇ ಇರುವೆ" ಎಂದು.

ಈ ಚಿಕ್ಕ ಕೋಣೆಯಲ್ಲಿ ನಾನು ಇರಬೇಕು. ನನ್ನ ಜೊತೆಗೆ ಅವರೂ ಇರುವರು. ಓರ್ವ ತರುಣಿಯ ಜೊತೆಗೆ ಒಂದೇ ಮನೆಯಲ್ಲಿ ಒಬ್ಬ ತರುಣ ಇರುವನು !

ಅದರ ಅರ್ಥವೇನು ?

ಅವರು ಕರೆದುಕೊಂಡು ಬಂದುದು ನನ್ನ ಜೊತೆಗೆ ಇರುವದಕ್ಕಾಗಿಯೆ.

ಈ ಜಗತ್ತಿನಲ್ಲಿ ಯಾವುದಕ್ಕೂ ಬೆಲೆ ಕೊಡಬೇಕು ಯಾರು ಯಾರಿಗೆ ಪುಕ್ಕಟೆಯಾಗಿ ಆಶ್ರಯ ಕೊಡುತ್ತಾರೆ. ಆಶ್ರಯ ಕೊಡಬೇಕಾದವರೇ ದೂಡುತ್ತಿರುವಾಗ ಯಾರೋ ಒಬ್ಬರು ಆಶ್ರಯ ಕೊಡುವದರ ಅರ್ಥವೇನು ?

ಅವರು ಆಶ್ರಯ ಕೊಟ್ಟಿದ್ದಾರೆ.

ನಾನು ಅವರ ಋಣ ತೀರಿಸಬೇಕು.

ನಾನು ಅದಕ್ಕೆ ಸಿದ್ಧಳಾಗದಿದ್ದರೆ....?

ಗಂಡಸು ಅಸುವಿನ ರಾಕ್ಷಸ. ಅವನೊಡನೆ ಹೋರಾಡಿ ಗೆಲ್ಲುವದು. ಗೆದ್ದು ಬಾಳುವದು ಸ್ತ್ರೀಗೆ ಅಸಾಧ್ಯ.

ಸ್ತ್ರೀ ಬಾಳಬೇಕಾದರೆ ಗಂಡಸಿನ ದಾಸಿಯಾಗಬೇಕು. ಗುಲಾಮಳಾಗ ಬೇಕು. ಭೋಗದ ವಸ್ತುವಾಗಬೇಕು.

ಇಲ್ಲದಿದ್ದರೆ........?

ಇಲ್ಲದಿದ್ದರೆ.... ಬೇರೆ ದಾರಿಯೇ ಇಲ್ಲ ಬೇರೆ ದಾರಿಯೇ ಇಲ್ಲ.

ಆದರೆ ರಂಗ ಹೇಳುತ್ತಿದ್ದ....

" ಸ್ತ್ರೀ ಸ್ವತಂತ್ರಳು ಅವಳಿಗೂ ಸ್ವತಂತ್ರಳಾಗಿ ಬಾಳುವ ಅಧಿಕಾರ ವಿದೆ. ಇಂದು ನಮ್ಮ ಸಮಾಜ ಸ್ತ್ರೀಯಳನ್ನು ಬಂಧಿಸಿದೆ, ಅವಳನ್ನು ಗುಲಾ ಮಳನ್ನು ಮಾಡಿದೆ. ಭೋಗದ ಹೆಣ್ಣು ಎಂದು ತಿಳಿದಿದೆ....ಆದರೆ ನಿಮ್ಮಾ... ನಾನು ಈ ಎಲ್ಲ ಬಂಧನವನ್ನು ಮುರಿದು ಹಾಕಿದೆ. ಈ ಜಗದಲ್ಲಿ ನೀನೂ ನನ್ನಷ್ಟೇ ಸ್ವತಂತ್ರಳು. ನನಗಿರುವಷ್ಟೇ ಅಧಿಕಾರ ನಿನಗಿರತಕ್ಕದ್ದು. ಸ್ವತಂತ್ರ ವಾಗಿ ನಾವು ಮನೆ ಹೂಡಿದ ನಂತರ.... .. "

ರಂಗನ ಮಾತು " ಸ್ವತಂತ್ರವಾಗಿ ಮನೆ ಹೂಡಿದ ನಂತರ.... .. "

ಎಲ್ಲಿದೆ ಮನೆ ?

ಇದ್ದ ಮನೆ ಕೂಡ ಇಲ್ಲದಾಯಿತು.

ಇಂದು ಯಾರದೋ ಮನೆಯಲ್ಲಿ ಬಂದಿರುವೆ.

" ಇದು ಬೇರೆಯವರ ಮನೆ ಎಂದು ತಿಳಿದುಕೊಳ್ಳಬೇಡಿರಿ " ಎಂದು ಕುಲಕರ್ಣಿಯವರು ಹೇಳುತ್ತಾರೆ

' ಬೇರೆಯವರ ಮನೆಯಲ್ಲ'.... ?

ಹಾಗಾದರೆ ಯಾರ ಮನೆ ?

ನನ್ನ ಮನೆಯೇ ?

ಯಾರೋ ಅಪರಿಚಿತ ಗಂಡಸಿನ ಜೊತೆಗೆ ಬಂದ ನನ್ನ ಮನೆಯೇ ? ಅಥವಾ ' ಮನೆಯನ್ನು ನನ್ನದು ಮಾಡಿಕೋ ' ಎಂದು ಅವನ ಮಾತಿನ

ಅರ್ಥವೇ? ಅವನ ಮನೆಯನ್ನು ನನ್ನದೆಂದು ತಿಳಿದು ಕೊಳ್ಳಬೇಕು. ಆ ಮೇಲೆ—

ಅವನನ್ನು ....... ?

ಅವನನ್ನು ನನ್ನವನೆಂದು ತಿಳಿದುಕೊಳ್ಳಬೇಕು. ...... ?

ಇದು ಅವನ ಮಾತಿನ ಅರ್ಥವೇ ?

ಅಥವಾ ಭ್ರಾಂತಿಯಾದ ನನ್ನ ಮನದ ವಿಚಾರವೇ ?

ಬೆಂಕಿಗೆ ಬೆಂಕಿ ಎಂದು ಹೇಳುವದು ಭ್ರಾಂತಿ ಮನದ ಲಕ್ಷಣವೇ ? ಹಾಗೆ ಭ್ರಾಂತಿಯಂದು ತಿಳಿದು ಬೆಂಕಿಯನ್ನು ಅಂಗೈಯಲ್ಲಿ ಧರಿಸುವದು ಯೋಗ್ಯವೇ ?

ಬೆಂಕಿ ........... !

ಕಾಮಿನಿ ಹೇಳುತ್ತಾಳೆ— " ಬೆಂಕಿ....ಗಂಡಸು ಬೆಂಕಿ......." ಎಂದು ಅಹುದು ಗಂಡಸು ಬೆಂಕಿ.

"ಬೆಂಕಿಯನ್ನು ಉಡಿಯಲ್ಲಿ ಕಟ್ಟಿಕೊಂಡು ನಿದ್ರಿಸಲು ಸಾಧ್ಯವೇ ? ಸ್ತ್ರೀ ತನ್ನ ಸ್ವಭಾವ ಸಹಜದಿಂದ ವಿಶ್ವಾಸ ತಾಳಿ ಹಾಗೆ ಆಚರಿಸಿದಲ್ಲಿ ಅವಳ ಆವಸ್ಥೆ ಏನಾಗಬಹುದು ?..."

" ಈಗ್ಗೆ ನಿನ್ನ ಪರಿಸ್ಥಿತಿ ಏನಾಗಿದೆ ? ನನ್ನ ಪರಿಸ್ಥಿತಿ ಏನಾಗಿದೆ?...."

"....ಉಡಿಯಲ್ಲಿಯ ಬೆಂಕಿಯಿಂದ ನಿನ್ನ ಬಟ್ಟೆಯಲ್ಲ ಭಸ್ಮವಾಗಿದೆ. ದೇಹ ಹೆಣ್ಣಿನ ದೇಹದ ಆತ್ಮವಾದ ಮಾನ ಮಣ್ಣಾಗಿದೆ. ದೀಪಕ್ಕೆ ಹಣ್ಣು ಎಂದು ಹಾಯ್ದು ಪತಂಗವಾಗಿದೆ. ನನ್ನ ಅವಸ್ಥೆ........"

" ಪತಂಗ ದೀಪಕ್ಕೆ ಹಣ್ಣು ಎಂದು, ಪ್ರಿಯಕರ ಎಂದು ತಬ್ಬಿ ಕೊಳ್ಳಲು ಹೋಗುವದಿಲ್ಲ; ಹಾಗೆಂದು ಹೇಳುವವರ ಕಲ್ಪನೆ ತಪ್ಪು...."

" ಎಂದೂ ಯಾವ ಕಾಲದಲ್ಲಿಯೋ ಪತಂಗ ಸ್ತ್ರೀಯಾಗಿರಬಹುದು.

ಅಂದು ಅದು ದೀಪದಿಂದಲೇ ತನ್ನ ಉದ್ಧಾರ. ತನಗೆ ಸುಖ ಎಂದು ನಂಬಿ ದೀಪಕ್ಕೆ ಆಕರ್ಷಿತವಾಗಿ ಹತ್ತಿರ ಸುಳಿದಿದೆ. ಹೆಣ್ಣು ಗಂಡಿನ ಹತ್ತಿರ ಸುಳಿದಂತೆ.

" ಕೊನೆಗೆ...."

" ಕೊನೆಗೆ ಅದು ದೀಪದ ಮೋಸಗಾರಿಕೆಯಿಂದ ತಳಮಳಿಸುತ್ತ ತಳ ಮಳಿಸುತ್ತ ಮನೆ ಮಾರು ತಂದೆ ತಾಯಿ ಬಂಧು ಬಳಗ ಎಲ್ಲವನ್ನೂ ಕಳೆದು ಕೊಂಡು ಜೀವ ಕಳೆದುಕೊಂಡಿದೆ...."

".... ಆ ಆತ್ಮಾರ್ಪಣೆ ತ್ಯಾಗವಲ್ಲ. ಪ್ರೀತಿಗಾಗಿ ಮಾಡಿದ ಬಲಿದಾನ ವಲ್ಲ....ಮೋಸದ ಕೊಲೆ... ಕಗ್ಗೊಲೆ..."

" ಬಲಿದಾನ ಮಾಡುವವರಿಗಿಂತ ಮಾಡಿಸಿಕೊಳ್ಳುವ ವ್ಯಕ್ತಿಯಲ್ಲಿ ಶಕ್ತಿ ಯಿರಬೇಕು. ಆತ್ಮಾರ್ಪಣೆ ಮಾಡಿಸಿಕೊಳ್ಳುವ ವ್ಯಕ್ತಿ ವಸ್ತುವಾಗಿರದೆ ಪರ ಮಾತ್ಮನಾಗಿರಬೇಕು.... "

" .... ದೀಪದಲ್ಲಿ ಆ ಶಕ್ತಿಯಿಲ್ಲ..."

"....ದೀಪದಂತಹ ಪುರುಷರಲ್ಲಿ ಆ ಶಕ್ತಿಯಿಲ್ಲ. ಏಕೆಂದರೆ ಅವರು ಪರಮಾತ್ಮರಲ್ಲ..."

" ಪರಮಾತ್ಮನಲ್ಲಿ ಶಕ್ತಿಯಿರುತ್ತದೆ. ಆತ್ಮಾರ್ಪಣೆಗೆ ಸಿದ್ಧರಾದ ಭಕ್ತರ ಶಕ್ತಿಯನ್ನು ಅರಿತು ಆಶೀರ್ವದಿಸುತ್ತಾನೆ. ತನಗಾಗಿ ತನ್ನನ್ನೇ ಅರ್ಪಿಸಿ ಬಂದ ಭಕ್ತನಿಗೆ ತನ್ನನ್ನು ಕೊಟ್ಟುಬಿಡುತ್ತಾನೆ.

".... ಇಂತಹ ಶಕ್ತಿ ಆ ದೀಪದಲ್ಲಿದೆಯೇ ?.... "

".... ದೀಪದಂತಹ ವ್ಯಕ್ತಿಗಳಲ್ಲಿ ಆ ಶಕ್ತಿಯಿದೆಯೇ ? ...."

".... ಸ್ವಂತಕ್ಕೆ ಬಾಳಲು ಕೂಡ ಶಕ್ತಿಯಿಲ್ಲದ ದೀಪ. ದೀಪದಂತಹ ವ್ಯಕ್ತಿ."

".... ದೀಪಕ್ಕೆ ಸ್ವಯಂ ಪ್ರಕಾಶವಿದೆಯೆ ? ಎಣ್ಣೆಯಿಲ್ಲದೆ ದೀಪ ಬೆಳಕು ಕೊಡುವದೆ ? ಬೀಸುವ ಗಾಳಿಯಿಂದ ತನ್ನನ್ನು ರಕ್ಷಿಸಿಕೊಳ್ಳಲು ಸಾಧ್ಯವೆ ?

".... ಯಾರೋ ಮಹಾನುಭಾವರು ಕಟ್ಟಿದ ಮನೆಯಲ್ಲಿ ಇನ್ನಾರೊ ಪುಣ್ಯವಂತರು ಎಣ್ಣೆ ಹಾಕ್ಕಿದ್ದರಿಂದ ಮತ್ತೊಬ್ಬರು ಕಡ್ಡಿಕೊರೆದು ಹಚ್ಚಿದ್ದ ರಿಂದ ಅದು ಉರಿಯುತ್ತದೆ. ಬೆಳಕು ಕೊಡುತ್ತದೆ......"

"....ಎಲ್ಲರ ಕೃಪಾಪ್ರಸಾದದಿಂದ ಬೆಳಗುವ ದೀಪಕ್ಕೆ ಅಹಂಭಾವವೆಷ್ಟು ಕ್ರೂರತನವೆಷ್ಟು !...."

"....ಪಾಪ ! ತನ್ನನ್ನು ಆಕರ್ಷಿಸಿ ಬಂಧ ಪತಂಗದ ಕೊಲೆ ಮಾಡಿತು ಮಾಡಿದ ಕೊಲೆಗಾಗಿ ಪಶ್ಚಾತ್ತಾಪಕೂಡ ಪಟ್ಟುಕೊಳ್ಳದೆ ಮತ್ತೆ ಕ್ರೂರ ರಾಕ್ಷಸನ ವಿಷಪೂರಿತ ಶ್ವಾಸೋಚ್ಛ್ವಾಸದಂತೆ ಹೊಗೆ ಕಾರುತ್ತ ನಿಂತಿದೆ ! ಮತ್ತೆ ಯಾವುದಾದರೂ ಪತಂಗ ಬರುತ್ತಿದೆಯೆ ಎಂದು ಅದರ ಕೊಲೆಗಾಗಿ ತನ್ನ ಶಸ್ತ್ರವನ್ನು ಹರಿತ ಮಾಡಿಕೊಳ್ಳುತ್ತಿದೆ. ಎದುರು ತನ್ನ ಕಡೆಗೆ ಬರುವ ಪತಂಗ ತನ್ನನ್ನು ಆಕರ್ಷಿಸಿಯೇ ಬಂದಿದೆ ಎಂದು ಕೇಕೆ ಹಾಕುತ್ತಿದೆ.

" .. ಆದರೆ ಆ ದೀಪಕ್ಕೆ ಗೊತ್ತಿಲ್ಲ ಪತಂಗ ಬರುವದು ಆಕರ್ಷಿಸಿ ಅಲ್ಲ. ತನ್ನವರ ಮರಣದ ಕೊಲೆಯ ಸೇಡು ತೀರಿಸಿಕೊಳ್ಳಲು ಎಂದು........"

"....ಪತಂಗ ದ್ವೇಷದಿಂದ ಬಂದು ದೀಪವನ್ನಪ್ಪಳಿಸುತ್ತದೆ. ಅದನ್ನು ಆರಿಸಬೇಕೆಂದು. ಹೀಗೆಯೇ ಉರಿಯುತ್ತಿದ್ದರೆ ಅಖಂಡ ಜೀವಗಳನ್ನು ಕೊಲೆ ಮಾಡುವದೆಂದು ಆದರ ಕೊಲೆಮಾಡಲು ತ್ಯಾಗಿ, ಬಲಿದಾನಿ, ಪತಂಗಗಳು ಬರುತ್ತವೆ, ಭರದಿಂದ........"

"....ಆದರೆ ದೀಪದ ಶಕ್ತಿ ಭೀಮಶಕ್ತಿ. ಗಂಡು ಶಕ್ತಿ........"

"....ಗಂಡುಶಕ್ತಿ ! ಭೀಮ ಶಕ್ತಿ...!

"....ಪತಂಗ....ಪತಂಗದಂತಹ ಸ್ತ್ರೀ ಆ ಭೀಮ ಶಕ್ತಿಯನ್ನುನಾಶ ಪಡಿಸಲಾರದು....ಗಂಡುಶಕ್ತಿಯನ್ನು ಗಂಡಸಿನ ಶಕ್ತಿಯನ್ನು ನಾಶಪಡಿಸಲಾಗದೆ ?...."

"...ಹಾಗಾದರೆ ಈ ಅವ್ಯಾಹತ ಅನಾಹುತಕ್ಕೆ ಅಂತವೆಲ್ಲಿ? ಈ ಅಖಂಡ ರಕ್ತಪಾತಕ್ಕೆ ಕೊನೆ ಎಂದು ? ಈ ಗಂಡಸಿನ ರಕ್ತಪಿಪಾಸಿಗೆ ತಣಿವು ಎಂದು ? " ಕಾಮಿನಿ ಆಗಸದ ಕಡೆಗೆ ಮುಖ ಮಾಡಿ ಪ್ರಶ್ನೆ ಕೇಳುತ್ತಾಳೆ. "

ಆದರೆ ಅದಕ್ಕೆ ಉತ್ತರಿಸುವವರು ಯಾರು ?

ಯಾರೋ ಒಬ್ಬರ ಮನೆಯಲ್ಲಿ ಅನ್ನಕ್ಕೆ ಬಿದ್ದುಕೊಂಡಿರುವ ನನ್ನಂತಹ ಸ್ತ್ರೀಯಿಂದ ಅದಕ್ಕೆ ಉತ್ತರ ಅಸಾಧ್ಯ.

ಉತ್ತರ ಕೊಡಲು ಸಾಧ್ಯವಿದ್ದರೆ ನಾನು ಬೆಂಕಿಯನ್ನು ಮಡಿಲಲ್ಲಿ ಇಟ್ಟುಕೊಂಡು ಇರುತ್ತಿದ್ದರೆ ?

ಬೆಂಕಿ......

ಆಹುದು ಗಂಡಸು ಬೆಂಕಿಯಲ್ಲದೆ ಮತ್ತೇನು ?

ಇಂದು ಕುಲಕರ್ಣಿಯವರು ಬೂದಿ ಮುಚ್ಚಿದ ಕೆಂಡವಾಗಿರಬಹುದು, ಆದರೆ ಕೊಂಚ ಗಾಳಿಯ ತುಸು ಸೌದೆಯ ನೆರವು ದೊರೆತರೆ ಸಾಕು ಉಳಿದೇಳುವದಕ್ಕೆ ವೇಳೆಯಾಗಲಾರದು.

ಸ್ತ್ರೀ ಗಾಳಿಯೂ ಅಹುದು. ಸವುದೆಯೂ ಆಹುದು.

ಅವರು ಕುಲಕರ್ಣಿ ಬೂದಿ ಮುಚ್ಚಿದ ಕೆಂಡವೂ ಅಹುದು. ನಾನು ಗಾಳಿ–ಸವದೆಯೂ ನಿಜ.

ಈ ಮಿಲನದಿಂದ ಜ್ವಾಲೆ ಪ್ರಜ್ವಲಿಸದೇ ಇರಬಹುದೇ ?

ಹಿಂದಕ್ಕೆ ಜ್ವಾಲೆ ಪ್ರಜ್ವಲಿಸಿದ್ದುದು ಈ ಮಿಲನದಿಂದಲೇ ಅಲ್ಲವೆ ? ಅಂದು ನನ್ನ ರಂಗನ ಮಿಲನವಾಗಿರದಿದ್ದರೆ ಚಿಕ್ಕ ಕೆಂಡ ಹೊಗೆಯಾಗಿ ಬೆಂಕಿಯಾಗಿ ಜ್ವಾಲೆಯಾಗಿ ಉರಿದೇಳುತ್ತಿರಲಿಲ್ಲ. ಉಸಿದು ಉರಿದು ನನ್ನನ್ನು ಭಸ್ಮಮಾಡುತ್ತಿರಲಿಲ್ಲ.

ಸೌದೆ ಭಸ್ಮವಾಯಿತು. ಅದು ಜಗತ್ತಿನ ದೃಷ್ಟಿಯಲ್ಲಿ ವಿಶೇಷವೇನೂ ಅಲ್ಲ. ಸೌದೆಯನ್ನು ಭಸ್ಮಮಾಡುವ ಬೆಂಕಿಗೆ ಅಂತವಿಲ್ಲವೆ ?

ಇಲ್ಲ. ಒಂದಿಲ್ಲೊಂದು ದಿನ ಅದೂ ಬೂದಿಯಾಗುವದು.

ಅಲ್ಲ....ಅಲ್ಲ....ಬೂದಿಯಾಗುವದು ಸೌದೆ. ಅಲ್ಲದೆ ಬೆಂಕಿಯಲ್ಲ. ಬೆಂಕಿ ಅನಂತ ಕಾಲದಿಂದ ಬಂದಿದೆ. ಅನಂತ ಕಾಲದವರೆಗೆ ಉಳಿಯುವದು. ಅದಕ್ಕೆ ಸೌದೆಯ ಬಲಿ ತಡೆಯಿಲ್ಲದೆ ಒದಗಿಸಲೇಬೇಕು.

ಸ್ತ್ರೀ ಪುರುಷನಿಗೆ ಬಲಿಯಾಗಲೇಬೇಕು-

ಹಾಗಿದ್ದರೆ ನಾನು ಕುಲಕರ್ಣಿಯವರಿಗೆ ಬಲಿಯಾಗಬೇಕೆ? ಬಲಿಗೆ ಕೊಡುವ ಪೂರ್ವದಲ್ಲಿ ಕುರಿಗೆ ತಿನ್ನಿಸುವಂತೆ ಇನ್ನು ಕುಲಕರ್ಣಿಯವರು ತಿನ್ನಿಸುತ್ತಿರುವರೆ ?

" ನೀವು ಹಾಗೆಲ್ಲ ಯಾವದನ್ನೂ ತಿಳಿದುಕೊಳ್ಳಬೇಡಿರಿ " ಎಂದು ಕುಲ ಕರ್ಣಿಯವರು ನಾನು ಕೇಳದಿದ್ದರೂ ನನ್ನ ಮನದ ಪ್ರಶ್ನೆಗೆ ಉತ್ತರದಂತೆ ಹೇಳುತ್ತಾರೆ.

" ಸುಮಿತ್ರಾ... ....ನಿಮ್ಮ ಹೆಸರು ನಿರ್ಮಲಾ. ನೀವು ಎಂದೆಂದಿಗೂ ನಿರ್ಮಲೆಯೇ. ಗಂಗಾಜಲದಲ್ಲಿ ಅಖಂಡವಾಗಿ ಕೊಳಚೆ ಬಂದು ಕೂಡು ತ್ತದೆ. ಕೊಳಚೆಯ ಉದ್ದೇಶ ಅದೇನೋ ಇರಬಹುದು. ಆದರೆ ಗಂಗಾ ಮಾತೆ ಕರುಣೆಯಿಂದ ಎಲ್ಲವನ್ನೂ ತನ್ನ ಹೃದಯದಲ್ಲಿ ಹಿಡಿದುಕೊಂಡು ತನ್ನನ್ನೇ ಮಾಡಿಕೊಳ್ಳುತ್ತಾಳೆ. ಆದಕ್ಕೇ ಗಂಗೆಗೆ ಜಗತ್ತಿನ ನೀರಿನ ತಾಯಿ. ಉದ್ಧಾರಕರ್ತೆ ಎಂದು ಹೇಳುವರು. ಅಂತಹ ಗಂಗೆಯ ಮಗಳು ಸ್ತ್ರೀ. ಎಲ್ಲಿಂದಲೋ ಹರಿದು ಬಂದ ಕೊಳಚೆ ಅವಳಲ್ಲಿ ನೇರಿರಬಹುದು. ಆದರೆ ಕೊಳಚೆಯೇ ಸ್ತ್ರೀಯಾಗಲಾರಳೆಂಬ ಭರವಸೆ, ವಿಶ್ವಾಸ ನನಗಿದೆ. ನನ್ನಲ್ಲಿದೆ. ನಿಮಗೆ ಸುಮಿತ್ರಾ ಎಂದು ಕರೆದುದರಲ್ಲಿ ಅದಾವ ಕೆಡಕು ಭಾವನೆಯು ಇಲ್ಲ. ಆದರೆ ಸ್ವಾರ್ಥ ಭಾವನೆಯಿದೆ. ಸ್ವಾರ್ಥ ಮನುಷ್ಯನ ಜೀವನಕ್ಕೆ ಅಂಟಿರದಿದ್ದರೂ ದೇಹಕ್ಕೆ ಅಂಟಿಕೊಂಡಿದೆ. ನೀವು ನನ್ನ ಸುಮಿತ್ರ ರಾಗಿ ಬಾಳಬೇಕೆಂಬುದೇ ಆ ಸ್ವಾರ್ಥ. ಈ ಜಗದಲ್ಲಿ ಅಚಲ ಸ್ನೇಹವೆಂದೋ ಚಿರಕಾಲ ಬಾಳಬಲ್ಲದು. ಬಾಳುವದು ಎನ್ನುವ ಅಚಲ ವಿಶ್ವಾಸ ನನಗೆ ಸ್ನೇಹಕ್ಕೆ ರೂಪ ಹಲವು ಪರಮಾತ್ಮನಂತೆ ಆದರೆ ಪರ ಮಾತ್ಮನಂತೆ ಸ್ನೇಹವೂ ಒಂದು....ಒಂದು ಎನ್ನುವದೋ ಪರಮಾತ್ಮ........ ನೀವು ನನ್ನ ಸ್ವಾರ್ಥವನ್ನು ಕಡೆಗೆಳೆಸಲಾರಿರಿ. ಎಂದು ನಂಬಿರುವೆ. ಕಡೆ ಗೆಳೆಸಬೇಡಿರಿ. ಎಂದು ಬೇಡಿಕೊಳ್ಳುವೆ......ನಿಮ್ಮನ್ನು ಇಲ್ಲಿರಿಸಿಕೊಂಡದ್ದು ಏಕೆ ಎನ್ನುವ ವಿಚಾರ ನನ್ನಲ್ಲಿರುವಾಗ್ಗೆ ನಿಮ್ಮಲ್ಲಿ ಅಂತಹ ವಿಚಾರ ಇಲ್ಲ ಎಂದು ಹೇಳುವದಾದರೂ ಹೇಗೆ ?............ ಆದರೂ ಒಂದು ಮಾತು ಮಾತ್ರ ನಿಜ........ನನ್ನಿಂದ ನಿಮಗೆಂದಿಗೂ ಕೆಡಕಾಗದು...ಈ ಮಾತನ್ನು ನಂಬಿ ನೀವು... ಸ್ಪಷ್ಟವಾಗಿದ್ದುಕೊಳ್ಳಿರಿ........ .. "

ಎಂದು ಹೇಳುತ್ತಾರೆ .

ಆದರೆ ನನ್ನಿಂದ ಸ್ವಸ್ಥವಾಗಿದ್ದುಕೊಳ್ಳಲಿಕ್ಕೆ ಹೇಗೆ ಸಾಧ್ಯ ?

ದಿನಗಳು ಒಂದೊಂದಾಗಿ ಉರುಳುತ್ತಲಿವೆ. ಆದರೆ ಉರುಳುವ ದಿನಗಳು ಉರಳಿಯೇ ಹೋದರೆ ಆದರಿಂದ ಆದಾವ ಹಾನಿಯೂ ಆಗದು.

ಆದರೆ ಒಂದೊಂದು ದಿನವೂ ನನ್ನನ್ನು ಜನರ ಕಣ್ಣಿನಲ್ಲಿ ತುಂಬು ವಂತೆ ಮಾಡುತ್ತವೆ. ಬೆಳೆಯುವ ವಯದ ಜೊತೆಗೆ ಹೊಟ್ಟೆಯಲ್ಲಿ ಪಿಂಡಕ್ಕೂ ದಿನಗಳು ಹೆಚ್ಚಾಗುತ್ತಿದ್ದವು. ಇದಕ್ಕೆ ತಡೆ ಹಾಕುವದು ಹೇಗೆ ?

ಇದು ಕುಲಕರ್ಣಿಯವರಿಗೆ ತಿಳಿಯದೆ ? ಹಾಗೆ ಹೇಳಲು ಹೇಗೆ ಸಾಧ್ಯ ? ಕಣ್ಣಿದ್ದ ಯಾವನಿಗೂ ಕಂಡುಬರುವದು ಅದು. ಕುಲಕರ್ಣಿ ಯವರು ನಿತ್ಯವೂ ನನ್ನ ಜೊತೆಗೆ ಇರುತ್ತಾರೆ. ಒಂದೇ ಮನೆಯಲ್ಲಿ, ಒಂದೇ ಕೋಣೆಯಲ್ಲಿ ವಾಸ ಮಾಡುವಾಗ ಅದು ತಿಳಿಯದೆ ಇದ್ದೀತೆ ?

ಹೊಟ್ಟೆಯಲ್ಲಿಯ ವಿಚಾರ ಹೊಟ್ಟೆಯಲ್ಲಿ ಉಳಿದಿರದೆ ಕಂಡವರ ಕಣ್ಣು ಸೇರುತ್ತಿತ್ತು. ಹಾಗೆ ಕುಲಕರ್ಣಿಯವರ ಕಣ್ಣು ಸೇರಿದ್ದರೂ ಅವರು ನನ್ನನ್ನು ಇನ್ನೂ ತಮ್ಮ ಮನೆಯಲ್ಲಿಟ್ಟುಕೊಂಡಿದ್ದರು.

ಏಕೆ ?

ಪಾಪ ಮಾಡಿ ಮನೆಯಿಂದೋಡಿ ಬಂದ ಹೆಣ್ಣು ನಾನು ಎಂಬುದನ್ನು ಅವರು ಅರಿತಿರುವರು ಆದರೂ ಅವರು ನನಗೆ ಕೊಟ್ಟ ಆಶ್ರಯವನ್ನು ಕಸಿದುಕೊಂಡಿಲ್ಲ.

ಏಕೆ ?

ಏಕೆ ಅವರು ಈ ರೀತಿಯಾಗಿ ನನ್ನನ್ನು ಕಾಣುವರು ? ಯಾವ ಆಶೆ ಯಿಂದ ಅವರು ನನ್ನಲ್ಲಿ ಮಮತೆ ತೋರುವರು ? ಯಾವ ಬಂಧನ ಅವರನ್ನು ನನ್ನ ವಿಚಾರದಲ್ಲಿ ಬಂಧಿಸಿದೆ ? ಎಂದೂ ನೋಡದ, ಆದಾವ ತರದ ಸಂಬಂಧವೂ ಇರದ ಯಾರೊ ಒಬ್ಬರು ಓರ್ವ ಪತಿತೆಗಾಗಿ ಆದರ ತೋರಿಸು ವದೇಕೆ ?

ಮಾಡಿದ ಪಾಪಕ್ಕೆ ತಂದೆ ತಾಯಿಗಳು ಕೂಡ ದೂರಿದರು, ದೂಡಿದರು.

ಆದರೆ ಇವರು ಹತ್ತಿರ ಕರೆದರು !

ತಂದೆ ತಾಯಿಗಳಿಗೆ ಮಗಳು ಎಂಬ ಕರುಣೆ ಇರುವದು.

ಆದರೆ ಇವರಿಗೆ ?

" ನನಗೆ ಯಾವುದೂ ತಿಳಿದಿಲ್ಲ. ಅನೇಕ ಸಲ ನನ್ನನ್ನು ನಾನೇ ಕೇಳಿ ಕೊಳ್ಳುವೆ. ಯಾವ ಕಾರಣದಿಂದ ನಾನು ನಿಮ್ಮನ್ನು ಇಲ್ಲಿ ಇಟ್ಟುಕೊಂಡಿರುವೆ ಎಂದು... ಸುಮಿತ್ರಾ ಅದಕ್ಕೆ ನೇರವಾಗಿ ಉತ್ತರ ನನಗೂ ದೊರೆತಿಲ್ಲ. ನಿಮಗಾಗಿ ನನ್ನಲ್ಲಿ ದಯೆ "

" ನಿಮಗಾಗಿ ನನ್ನಲ್ಲಿ ಕರುಣೆಯೋ . " ?

" ದಯೆ— ಕರುಣೆ ಇವೂ ಭಾವನೆಗಳು ಆದರೆ ಆ ಭಾವನೆಗಳು ನಿಮಗಾಗಿ ನನ್ನಲ್ಲಿ ಉದಯಿಸಿದವಾದರೂ ಏಕೆ ? ಏಕೆ ? "

" ಸುಮಿತ್ರಾ.... ಈ ಜಗ ತೀರ ವಿಚಿತ್ರವಾಗಿದೆ. ಎಲ್ಲಿಯೋ ಯಾರೋ ಯಾರನ್ನೊ ಆವರಿಸುತ್ತಾರೆ ಕೂಡುತ್ತಾರೆ. ಬಾಳುತ್ತಾರೆ...ಜಗ ಮುಂದು ವರಿಯುತ್ತದೆ ಏಕೆ ?

" ಈ ಪ್ರಶ್ನೆಗೆ ನೇರವಾದ ಸ್ಪಷ್ಟವಾದ ಉತ್ತರ ಕೊಡುವದು ಕಷ್ಟ. ಇಂತಹ ಎಲ್ಲ ಪ್ರಶ್ನೆಗಳಿಗೆ ಒಂದು ಉತ್ತರ ಕೊಡಬಹುದಾದರೆ 'ಜನ್ಮಾಂತರಗಳ ಸಂಬಂಧ' ಎಂದು ಹೇಳಬಹುದು. ಜನ್ಮಾಂತರಗಳನ್ನು ನಂಬುವದು ಹೇಗೆ ಎನ್ನುವ ಪ್ರಶ್ನೆ ವಿಚಾರದಲ್ಲಿ ಹುಟ್ಟುತ್ತದೆ ಹಾಗೆ ನಂಬದಿದ್ದರೆ ಇದಕ್ಕೆ ಉತ್ತರವೇನು ? ಜನ್ಮ ಕೊಟ್ಟ ತಾಯಿ ಮಕ್ಕಳನ್ನು ಬೆಳೆಸುತ್ತಾಳೆ. ಅಣ್ಣ-ತಮ್ಮಂದಿರು ಕೂಡಿ ಬಾಳುತ್ತಾರೆ. ಕುತ್ತಿಗೆಗೂ ಕೈಹಾಕುತ್ತಾರೆ. ಗಂಡ-ಹೆಂಡತಿ ಸಮರಸವಾಗಿ ಬಾಳುತ್ತಾರೆ ಅನೈಸರ್ಗಿಕವಾಗಿಯೂ ಜೀವನ ಸಾಗಿಸುತ್ತಾರೆ...ಏಕೆ ? "

"...ಏಕೆ ? ..."

"ಇದಕ್ಕೆ ವಿಚಾರ ಜೀವಿಯ ಉತ್ತರವೇನು ? ಯಾವುದೊಂದು ತತ್ವಕ್ಕೆ ಬಂಧಿತರಾದ ವಿಚಾರಜೀವಿಗಳು ಏನೊಂದು ಕಾರಣವನ್ನು ಹೇಳಬಹುದು. ಆ ಕಾರಣ ತಮ್ಮ ಸಮಾಧಾನಕ್ಕಾಗಿ, ಅಲ್ಲದೆ ಸಮಸ್ಯೆಯ ನಿವಾರಣೆಗಾಗಿ ಅಲ್ಲ."

"...ಅದಕ್ಕೆ ನಾನು ಹೇಳುವದು. ಅ ಥ ವಾ ತಿಳಿದುಕೊಂಡದ್ದು 'ಜನ್ಮಾಂತರಗಳ ಸಂಬಂಧ' ಎಂದು..."

"....ಜನ್ಮಾಂತರಗಳ ಸಂಬಂಧವೇ ನಮ್ಮನ್ನು ಒಂದುಗೂಡಿಸಿದೆ ಎಂದು ನಾನು ಹೇಳಿದರೆ ನಿಮ್ಮ ಆಭ್ಯಂತರವಿಲ್ಲವಷ್ಟೆ ? "

ಎಂದು ಕುಲಕರ್ಣಿಯವರು ಕೇಳುತ್ತಾರೆ.

ಹಾಗೆ ಅವರು ಹೇಳಿದಾಗ ಕೇಳಿದಾಗ ನನ್ನ ದುಃಖದ ಸಾಂತ್ವನವಾಗುತ್ತಿದೆ. ಆದರೆ ಅದು ಕ್ಷಣಿಕ, ಮತ್ತೆಮರುಗಳಿಗೆಯಲ್ಲಿ ಹಿಂದಿನಜೀವನದ ಎದುರು ಭೂತಾಕಾರ ತಳೆದು ಅಘೋರವಾಗಿ ಅಸಹ್ಯಯಾಗಿ ತಾಂಡವವಾಡುತ್ತಿದೆ

ಹಿಂದಿನ ಜೀವನವನ್ನು ಮರೆಯಲು ನಾನು ಪ್ರಯತ್ನಪಡುತ್ತಿದ್ದೆ. ಆದರೆ ಮರೆಯುವದು ನನ್ನ ಶಕ್ತಿಗೆ ಮೀರಿದ ಮಾತಾಗಿತ್ತು.

ಎಲ್ಲಿಯೋ ಬಿಟ್ಟು ಬಂದ ಯಾರದೊ ಮನೆಯ ವಿಚಾರದಿಂದ ಪ್ರಯೋಜನವಿರಲಿಲ್ಲ.

ಮಾಡಿಕೊಂಡ ಪತ್ನಿ ನಾನಾಗಿರದ್ದರಿಂದ ಪಾತಿವ್ರತ್ಯದ ವಿಚಾರವೂ ನನ್ನ ತಲೆ ಕೆಡಿಸುತ್ತಿರಲಿಲ್ಲ.

ತಲೆ ಕೆಡಿಸುವ ವಿಷಯ, ಹೊಟ್ಟೆಯಲ್ಲಿ ಬೆಳೆಯುವ ಪಿಂಡದ ವಿಚಾರ. ಮುಂದೆ ಅದರ ಭವಿತವ್ಯವೇನು? ನನ್ನ ಭವಿತವ್ಯವೇನು? ಹೀಗೆಯೇ ನಾನು ಸ್ವಸ್ಥಳಾಗಿ ಕುಳಿತರೆ ಇಂದು ಹೊಟ್ಟೆಯಲ್ಲಿ ಅಡಗಿದ ಪಾಪಕ್ಕೆ ಕೈಕಾಲೊಡೆದು ಜೀವ ತುಂಬಿ ಬಾಯಿ ಬಿಚ್ಚುವದು....

ನಾನು ಕರ್ಣನ ತಾಯಿಯಾಗುವೆ. ಕುಂತಿಯಾಗುವೆ.
ಆದರೆ ಪಾಂಡುವಿನ ಪತ್ನಿಯಾಗಬಹುದೆ...?

ನಾನು ಕುಂತಿಯಾಗಬಯಸಿದರೂ ಪಂಡುರಾಜನಾಗುವವರಾರು ?

" ವಿವಾಹದ ನಂತರ ಕೂಡ ಕುಂತೀದೇವಿ ದೇವತೆಗಳಿಂದ ಮಕ್ಕಳನ್ನು ಪಡೆದಳು !

ಅದು ಅಂದಿನ ಆ ಕಾಲದ ವಿಶೇಷ. ಅಂದಿನ ಆಚಾರ ಅದು.

ಅಂದಿನ ದೇವ ದೇವತೆಗಳಲ್ಲಿ ವಿಶ್ವಾಸವಿಟ್ಟು ಪೂಜಿಸುವ ಜನ ಅಂದಿನಂತಹದೇ ಆಚಾರ ತಪ್ಪಿ ಇಂದಾದರೂ ಕೂಡ ಕತ್ತಿಗೆ ನೇಣು ಹಾಕುತ್ತಾರೆ.

ಏಕೆ ?

' ಸ್ತ್ರೀ ಅಜ್ಞಾನಿ. ಅವಳು ಸುಲಭವಾಗಿ ಮೋಸ ಹೋಗುವಳು ' ಮೋಸ ಹೋಗುವದು ಪಾಪವಲ್ಲ. ಮೋಸಗೊಳಿಸುವದು ಪಾಪ ' ಎಂದು ಕುಲಕರ್ಣಿಯವರು ಹೇಳುತ್ತಾರೆ.

ಆದರೆ ಮೋಸಗೊಳಿಸಿದ ಅಪರಾಧಿಯನ್ನು ಬಿಟ್ಟು ಮೋಸಹೋದ ನಿರಪರಾಧಿಯನ್ನು ಜನರು ದಂಡಿಸುವದೇಕೆ ? ಯಾರೂ ಈ ವಿಷಯವನ್ನು ಕುರಿತು ವಿಚಾರ ಮಾಡುವದಿಲ್ಲವೆ ?

ಕಾಮಿನಿ ಹೇಳುವಂತೆ ಜನಕ್ಕೆ ಬುದ್ಧಿ ಇಲ್ಲದ್ದು ನಿಜ. ಜನರು ಬುದ್ಧಿವಂತರಾದರೆ ಈ ರೀತಿ ಅನ್ಯಾಯಗಳು ನಡೆಯುತ್ತಿರಲಿಲ್ಲ.

ಜಗತ್ತು ಹುಟ್ಟಿದಂದಿನಿಂದಲೇ ಪಾಪ ಪುಣ್ಯಗಳು ಜನ್ಮ ತಾಳಿದವು. ಪಾಪ ಪುಣ್ಯಗಳ ಜನ್ಮವೇ ಜನರು ಅಪರಾಧ ಮಾಡುತ್ತಿದ್ದರೆಂಬುದನ್ನು ಸ್ಪಷ್ಟಪಡಿಸುತ್ತದೆ

ಅಂದಿನಿಂದ ಇಂದಿನ ವರೆಗೆ ಅಪರಾಧ ಅಖಂಡವಾಗಿ ನಡೆಯುತ್ತಲೇ ಬಂದಿದೆ. ಅಪರಾಧದ ಪರಂಪರೆ ಅನಂತವಾಗಿ ಬೆಳೆದು ಇಂದು ಅಪರಾಧವೇ ನಿರಪರಾಧವಾಗಿ ಪರಿಣಮಿಸಿದೆ. ಪಾಪವು ಪುಣ್ಯವಾಗಿದೆ. ಪುಣ್ಯವು ಪಾಪವಾಗಿದೆ.

ಪಾಪ....ಪುಣ್ಯ....

" ಪಾಪ ಪುಣ್ಯದ ವಿಚಾರವೇ ಹುಚ್ಚುತನ " ಎಂಬುದು ಕಾಮಿನಿಯ ವಿಚಾರ. ಅವಳು ಹೇಳುತ್ತಾಳೆ—

" ಸುಮಿತ್ರಾ ಪಾಪ ಪುಣ್ಯದ ವಿಚಾರ ಹುಚ್ಚತನವಲ್ಲದೆ ಇನ್ನೇನು. ಅಜ್ಞಾನಿಗಳನ್ನು ಹೆದರಿಸಿ ಅಂಕಿತದಲ್ಲಿಟ್ಟುಕೊಳ್ಳಲು ನಿರ್ಮಿಸಿದ ಅಸ್ತ್ರಗಳು ಪಾಪ-ಪುಣ್ಯ—"

"...ಒಳ್ಳೆ ಕೆಲಸದಿಂದ ಪುಣ್ಯ ಬರುತ್ತದೆ. ಎಂದು ಹೇಳುತ್ತಾರೆ. ಒಳ್ಳೆಯ ಕೆಲಸ ಎಂದರೆ ಯಾವುದು.– "

"....ಹಸಿದಾಗ ಕಳವು ಮಾಡುವದು ಒಳ್ಳೆಯದೆ ? ಅಥವಾ ಕೆಟ್ಟದ್ದೆ ?

"....ಒಳ್ಳೆಯದು' ಎಂದರೆ ಕಾಯಿದೆ ಅದಕ್ಕೆ ದಂಡನೆ ವಿಧಿಸುವದು. ಏಕೆ ? ಹಸಿದು ಹಸಿದು ಹಸುವಿನಿಂದ ಒದ್ದಾಡಿ ಸಾಯಬೇಕೆ ?...."

"...ಬಡತನದಲ್ಲಿ ಜನ್ಮ ತಾಳಿದ್ದು ಜನ್ಮತಾಳಿದ ವ್ಯಕ್ತಿಯ ಪಾಪವಲ್ಲ. ಜನ್ಮ ಕೊಟ್ಟವನ ಅಪರಾಧ. ಜನ್ಮ ಕೊಟ್ಟ ಮಕ್ಕಳಿಗೆ ಅನ್ನ ಕೊಡುವ,

ಅನ್ನ ದೊರಕಿಸಿಕೊಳ್ಳುವ ಶಕ್ತಿ ಕೊಡಲು ಅಶಕ್ತನಾದರೆ ವ್ಯಕ್ತಿಗೆ ಮಕ್ಕಳಿಗೆ ಜನ್ಮ ಕೊಡುವ ಅಧಿಕಾರ ಹೇಗೆ ಪ್ರಾಪ್ತವಾಗುವದು ? ತನ್ನ ದೈಹಿಕ ತೃಪ್ತಿಗಾಗಿ ವ್ಯಕ್ತಿ ಮಕ್ಕಳಿಗೆ ಜನ್ಮ ಕೊಡುತ್ತಾನೆ. ಜನ್ಮ ತಾಳಿದ ಶಿಶುಗಳು ಜಗದಲ್ಲಿ ಬೆಳೆಯುತ್ತವೆ. ಬೆಳೆಯುವ ದೇಹಕ್ಕೆ ಅನ್ನ ಬೇಕು. ಅನ್ನದ ಕೊರತೆಯಾದಾಗ ಆತನಲ್ಲಿ ವಿಚಾರ ಶಕ್ತಿ ಅಳಿದು ಹೋಗುತ್ತದೆ, ಅಂತಹ ಅವಸ್ಥೆಯಲ್ಲಿ ಆತ ಏನಾದರೂ ಅನುಚಿತ ಅಥವಾ ಕಳವು ಮಾಡುತ್ತಾನೆ.

"...ಕಳುವು ಮಾಡಿದ್ದಕ್ಕೆ ಆ ವ್ಯಕ್ತಿಗೆ ದಂಡನೆಯಾಗುತ್ತದೆ! ..."

"....ಆದರೆ ಕಳುವಿನ ಮೂಲವನ್ನು ಹುಡುಕ ಹೊರಟರೆ ಅವನ ಹಿಂದಿನ ಸಾವಿರ ತಲೆಗಳು ಶಿಕ್ಷೆಗೆ ಗುರಿಯಾಗಬೇಕಾಗುತ್ತವೆ. ಆದರೆ ಮೂಲವನ್ನು ಹುಡುಕುವ ಬುದ್ಧಿ ಜನರಲ್ಲಿ ಇಲ್ಲ. ಜನಕ್ಕೆ ಬುದ್ಧಿಯಿಲ್ಲ...."

"....' ದೇಹ ದಂಡನೆ ಪಾಪ ' ಎಂದು ದೇವರು ಹೇಳ ತ್ತಾನೆ ' ಧರ್ಮವೂ ಹೇಳುತ್ತದೆ. ಪುರಾಣವೂ ನಾರುತ್ತದೆ ...."

"....ಆದರೆ ದೇಹ ದಂಡಿಸದಿದ್ದರೆ ಶಿಕ್ಷೆಗೆ ಗುರಿಯಾಗಬೇಕು. ದೇಹ ದಂಡಿಸಿದರೆ ಪಾಪನನ್ನಪ್ಪಿಕೊಳ್ಳಬೇಕು.... ಹೇಳು....ಸುಮಿತ್ರಾ....ಹೇಳು... ಏನಾದರೂ ಶಿಕ್ಷೆ ತಪ್ಪಿದ್ದಲ್ಲ ಆದ್ದರಿಂದ ಏಕೆ ನೀವು ನಮಗೆ ತೃಪ್ತಿಯಾಗುವ ರೀತಿಯಲ್ಲಿ ನಡೆದುಕೊಳ್ಳಬಾರದು .... ? ಎಂದು ಕೇಳುವ ಪ್ರಶ್ನೆಗೆ ಉತ್ತರ ವೇನು...?...."

....ನೀನು ಮಾಡಿದ ಅಪರಾಧವಾದರೂ ಏನು ? ಆಕಾಶದಿಂದ ಉದುರಿದ ನಕ್ಷತ್ರ ನೇರವಾಗಿ ನಿನ್ನ ಹೊಟ್ಟೆಯೊಳಕ್ಕೆ ಸೇರಿತೇ, ಅಥವಾ ಯಾವದೊಂದು ಮಂತ್ರಜಪದಿಂದ ನಿನ್ನ ಹೊಟ್ಟೆ ಹಿರಿದಾಯಿತೇ ?...."

"...ಆದರೆ ಆದರಿಂದ ನಿನಗೆ ಬಂದ ಅವಸ್ಥೆ ಏನು ?...."

ಹಸಿವು ಎಲ್ಲರಿಗೂ ಇರುತ್ತದೆ ಹಸಿವು ಇಲ್ಲದಿದ್ದರೆ ಈ ಜಗತ್ತಿನ ಜನ್ಮವಾಗುತ್ತಿರಲಿಲ್ಲ ಹಸಿವೆಯಾದಾಗ ಯಾರು ಮಣೆಯ ಮೇಲೆ ಕುಳಿತು ಸುಗ್ರಾಸ ಭೋಜನ ಮಾಡುತ್ತಾರೆ ಯಾರು ಹೊಟೆಲಲ್ಲಿ ಹೊಟ್ಟೆ ತುಂಬಿಕೊಳ್ಳುತ್ತಾರೆ, ಇನ್ನಾರೋ ತಿಪ್ಪೆಯಲ್ಲಿ ಎಸೆದ ಅನ್ನದಿಂದ ದೇಹ ಉಳಿಸಿಕೊಳ್ಳುತ್ತಾರೆ"

" ಆದರೆ ಎಲ್ಲದರ ಅರ್ಥ ಉದ್ದೇಶ ಹಸಿವೆ ಹಿಂಗಿಸಿಕೊಳ್ಳುವದು....''

"....ಹಸಿದ ಹೊಟ್ಟೆಗೆ ಅನ್ನ ಹಾಕುವದು ಪಾಪವೆ? ಅಪರಾಧವೇ?..."

"....ಕೆಲವರಿಗೆ ಅದು ಪಾಪ. ಕೆಲವರಿಗೆ ಅದು ಏನೂಅಲ್ಲ. ಕೆಲವರಿಗೆ ಅಪರಾಧ ಉಳಿದವರಿಗೆ ನೀರು ಕುಡಿದಂತೆ! .."

ಸ್ತ್ರೀಯ ವಿಚಾರದಲ್ಲಿ ಅದು ಪಾಪ. ಅಪರಾಧ...."

"...ಗಂಡಸಿನ ವಿಚಾರದಲ್ಲಿ...ಅವನ ವಿಚಾರವಾದರೂ ಏಕೆ? ಅವನು ಕಮಲ ಪತ್ರವಿದ್ದಂತೆ. ಅದರ ಮೇಲೆ ಎಷ್ಟು ನೀರು ಬಿದ್ದರೂ ಉರುಳಿ ಹೋಗುವದು. ಎಂತಹ ಪಾಪವೂ ಅವನನ್ನು ತಟ್ಟುವದಿಲ್ಲ ಅವನು ಪಾಪದ ಪ್ರೂಫ್ ಎಂದು ಬ್ರಹ್ಮ ನಿರ್ಮಿಸಿದ್ದಾನೆ...."

"...ಏಕೆಂದರೆ ಬ್ರಹ್ಮನಿಗೂ ಸ್ವಜಾತಿಯ ಅಭಿಮಾನ...."

"....ಪರಾಶರ ಋಷಿಗೆ ಹೊಳೆದಾಟುವಾಗ್ಗೆ ಸಂತಾನೋತ್ಪತ್ತಿಯು ಇಚ್ಛೆಯಾಯಿತು. ಅಂಬಿಗನ ಮಗಳಿಂದ ಪರಾಶರ ಋಷಿಯ ಮಗನಾಗಿ ಮಹರ್ಷಿ ವ್ಯಾಸ ಜನ್ಮ ತಾಳಿದ. ಇಂದು ಭಾರತದ ಮನೆಮನೆಗಳಲ್ಲಿ ಅವನು ಹೇಳಿದ್ದನ್ನು ದೇವವಾಣಿ ಎಂದು ತಲೆಯ ಮೇಲಿಟ್ಟುಕೊಂಡು ಕುಣಿಯುತ್ತಾರೆ ಅವನ ಜನ್ಮದ ವಿಚಾರ ಬಂದಾಗ್ಗೆ ಅದು ಬ್ರಹ್ಮ ಸಂಕಲ್ಪ ಎಂದು ಹೇಳುತ್ತಾರೆ. ಋಷಿಯ ಮೂಲವನ್ನು ನೋಡಕೂಡದು ಎಂದು ಕಟ್ಟಾಜ್ಞೆ ವಿಧಿಸುತ್ತಾರೆ. ನಿನ್ನ ಹೊಟ್ಟೆಯಲ್ಲಿಯ ಪಿಂಡವೂ ಬ್ರಹ್ಮ ಸಂಕಲ್ಪ ಎಂದು ಹೇಳಲು ಇವರಿಗೆ ಬಾಯಿ ಬಾರದೇ? ಅಂತಹ ವಾಕ್ಯವನ್ನು ಹೇಳಿದರೆ ಇವರ ನಾಲಿಗೆ ಸೀಳಿ ಹೋಗುವದೇ? ನಿನ್ನ ಹೊಟ್ಟೆಯಲ್ಲಿಯ ಪಿಂಡವೂ ನಾಳೆ ವ್ಯಾಸ ಮಹರ್ಷಿಯಾಗಲಿಕ್ಕಿಲ್ಲವೆಂದು ಹೇಳುವ ಧೈರ್ಯ ಯಾರಲ್ಲಿದೆ? ಆದರೆ...?"

".... ಆದರೆ...ನಿನ್ನದು ಪಾಪ. ನಿನ್ನಂತಹ ನನ್ನಂತಹರದು ಪಾಪ..."

" ಆದಕ್ಕೇ ನಾನು ಹೇಳುವೆ. ಪಾಪ ಪುಣ್ಯದ ವಿಚಾರವೇ ಹುಚ್ಚುತನ. ನೀನು ಪಾಪ ಪುಣ್ಯದ ವಿಚಾರವನ್ನು ತ್ಯಜಿಸು...."

" ....ಬದುಕಿ ಬಾಳುವದೇ ಪುಣ್ಯ. ಸಾಯುವದೇ ಪಾಪ ...."

" ...ನೀನು ಪುಣ್ಯ ಗಳಿಸಬೇಕಾದರೆ ಬದುಕು. ಬದುಕಿದವರ್ರೇ ಪುಣ್ಯವಂತರು... ನಾನು ನನಗೆ ತಿಳಿದಿದ್ದರೂ ಅನೇಕರಿಗೆ ಕೇಳಿದೆ ಇನ್ನು ಹೆರಿಗೆಯಾಗದೇ ಬೇರೆ ಮಾರ್ಗವಿಲ್ಲ ಎಂದು ಎಲ್ಲರ ಅಭಿಪ್ರಾಯ. ....ಬಾಳ ಬೇಕಾದರೆ ಹೆರಿಗೆಯಾಗುವವರೆಗೆ ನೀನು ತಾಳಲೇಬೇಕು.... ನಾನು ಕುಲ ಕರ್ಣಿಯವರಿಗೂ ಹೇಳಿರುವೆ." ನಿನ್ನ ಹೆರಿಗೆಯಾಗಲೇಬೇಕು. ಅದಲ್ಲದೆ ಬೇರೆ ಮಾರ್ಗವಿಲ್ಲ ... ಎಂದು ಕಾಮಿನಿ ಹೇಳುವಳು,

ಹೆರಿಗೆ....!

ನನ್ನ ಹೆರಿಗೆ...!
ಹೆರಿಗೆ ಎಂದರೆ ಒಂದು ಹೊಸ ಜೀವಕ್ಕೆ ಜನ್ಮ ಕೊಡುವದು !

ಆ ಬರಲಿರುವ ಹೊಸ ಜೀವ ಯಾರದು ?

ನನ್ನದೇ .... ?
ಅಹುದು ... ಅಲ್ಲ.

ನನ್ನ ಹೊಟ್ಟೆಯಲ್ಲಿ ಜನ್ಮ ತಾಳುವ ಮಗು ನನ್ನದಲ್ಲದೆ ಇನ್ನಾರದು ?
ನಿಜ.

ಮಗುವಿನ ಜನ್ಮಕ್ಕೆ ತಾಯಿಯೇ ಮುಖ್ಯಳು. ಅದು ನಿರ್ಜೀವ ಮಾಂಸದ ಮುದ್ದೆಯಾಗಿದ್ದಾಗಲೂ ಹೊತ್ತು ಬೆಳೆಸುವಳು. ನಂತರ ಹೆತ್ತು ಆ ಮಾಂಸದ ಮುದ್ದೆಯಲ್ಲಿ ಜೀವ ತುಂಬುವಳು ತಾಯಿ. ಅಂತಹ ತಾಯಿ ನಾನು. ಅಂದಮೇಲೆ ಮಗು ನನ್ನದು. ಅಹುದು.

ಮಗು ನನ್ನದು.

ಆದರೆ ಮಗು ನನ್ನದಲ್ಲ. ಅದೂ ನಿಜ.

ಅದು ನನ್ನದು ಹೇಗಾಗುವದು ? ಈಗ್ಗೆ ನಾನು ತಾಯಿಯ ಮಗಳೆ ? ಭೂಮಿಯಲ್ಲಿ ಬೆಳೆದ ಕಾಳು ಭೂಮಿಯುವೇ ? ಅಥವಾ ಆ ಭೂಮಿಯಲ್ಲಿ ಕಾಳು ಬಿತ್ತಿದ ಭೂಮಿಯ ಒಡೆಯನವೆ ? ಕಾಳು ಬಿತ್ತುವ ಒಡೆಯನಿಲ್ಲ ದಿದ್ದರೆ ಭೂಮಿಯು ಬಂಜರವಾಗುವದು ಪಡ ಬೀಳುವದು... ಭೂಮಿ ಫಲ ಕೊಡುವ ಜಡ ಅಲ್ಲದೆ ಅದೇ ಸರ್ವ ಅಲ್ಲ.

ನಾನು ಇನ್ನೊಬ್ಬರ ಕಾರ್ಯದ ಕಾರಣಳು ಅಷ್ಟೆ.

ಅಂದಮೇಲೆ ಮಗು ನನ್ನದಲ್ಲ.

ನನ್ನದಲ್ಲದ ಮಗುವಿಗೆ ನಾನೇಕೆ ಇಷ್ಟು ಕಷ್ಟಪಡಬೇಕು ?

ಮಗು ಯಾರದೊ ಅವರು ಅದೆಲ್ಲಿಯೋ ' ನನ್ನದಲ್ಲ. ನನಗೇನೂ ಅರಿಯದು ' ಎಂದು ಹೊಣೆ ಹಾರಿಸಿಕೊಂಡಿರುವಾಗ ನಾನಾದರೂ ಏಕೆ ಅದು ನನ್ನದೆಂದು ಅದರ–ಆ ಪಾಪದ ಹೊಣೆಯನ್ನು ಹೊತ್ತುಕೊಳ್ಳಬೇಕು!

ಆದರೆ ನಾನು ಸ್ತ್ರೀ. ನೆಲ. ಹೊಣೆ ಹಾರಿಸಿಕೊಳ್ಳಲು ಸಾಧ್ಯವಿಲ್ಲ. ಬೇಕಾಗಲಿ ಬೇಡವಾಗಲಿ ಹೊತ್ತದ್ದು-ನನ್ನ ಹೊಣೆ ಎಂದು ಅದಕ್ಕೊಂದು ಸರಿಯಾದ ಮಾರ್ಗ ತೋರಿಸಲೇಬೇಕು ಇಲ್ಲದಿದ್ದರೆ ಅದರಿಂದ ನನಗೆ ಮುಕ್ತಿಯಿಲ್ಲ.

ನನ್ನ ಮುಕ್ತಿಯಾಗಬೇಕಾದರೆ ಈ ಕ್ರೂರ ವ್ಯಾಘ್ರನ ಕಠೋರ ದವಡೆ ಯಿಂದ ಬಿಡುಗಡೆ ಹೊಂದಬೇಕಾದರೆ ನಾನು ಮಗುವಿಗೆ ಜನ್ಮ ಕೊಡಲೇ ಬೇಕು.

ಆದರೆ ರಂಗ ಹೇಳುತ್ತಿದ್ದ "ನಿಮ್ಮಾ ... ನೀನೇನೂ ಹೆದರಬೇಡ. ಇದು ಇಪ್ಪತ್ತನೆಯ ಶತಮಾನ. ಸಾಕಷ್ಟು ಔಷಧಗಳು ಸಹಾಯಕ್ಕೆ ಸಿದ್ಧವಾಗಿವೆ. ಮನೆ ಮನೆಯಲ್ಲಿ ಅಂತಹ ಔಷಧಗಳು ಸಿದ್ಧವಾಗಿವೆ...."

ಅಲ್ಲದೆ ಆತ ಔಷಧವನ್ನು ತಂದಿದ್ದ. ಆದರೆ ಅದನ್ನು ' ಗರ್ಭಿಣಿ ಸ್ತ್ರೀ ಯರು ತಗೆದುಕೊಳ್ಳಕೂಡದು ' ಎಂದು ಬರೆದದ್ದರಿಂದ ಅದನ್ನು ತೆಗೆದು ಕೊಳ್ಳಲಿಲ್ಲ.

ಅದಕ್ಕೆ ರಂಗ " ನಿರ್ಮಲಾ....ನೀನು ಹುಚ್ಚಿ ಎಂದರೆ ಹುಚ್ಚಿಯೆ. ಗರ್ಭಿಣಿಯರು ತಗೆದುಕೊಳ್ಳಕೂಡದು ಎಂದರೆ ಗರ್ಭಪಾತವಾಗುವದು. ಎಂಬರ್ಥ. ಗರ್ಭಪಾತಕ್ಕೆ ಔಷಧ ಎಂದರೆ ಕಾಯಿದೆ ದೃಷ್ಟಿಯಿಂದ ಅಪರಾಧ. ಕಾಯಿದೆ ದೃಷ್ಟಿಯಿಂದ ಅಪರಾಧವಾಗದಂತೆ ಜಾರಿಕೊಳ್ಳಲು ಹಾಗೆಲ್ಲ ಬರೆದಿರುತ್ತಾರೆ... ಈ ಜಗತ್ತೆಂದರೆ ಏನೆಂದು ತಿಳಿದಿರುವಿ ..... ? ... ಶುದ್ಧ ಮೋಸಗಾರಿಕೆ. ತಮ್ಮ ತಮ್ಮ ಸ್ವಾರ್ಥಕ್ಕಾಗಿ ಇನ್ನೊಬ್ಬರನ್ನು ಸಭ್ಯತೆಯ ಸಜ್ಜನತೆಯ ನೋಗಿನಲ್ಲಿ ಮೋಸಗೊಳಿಸುತ್ತಾರೆ...... ತಾವು ಬದುಕಬೇಕಾ

ದರೆ ಇನ್ನೊಬ್ಬರನ್ನು ಮೋಸಗೊಳಿಸಲೇಬೇಕು... ಅದೇ ಇಂದಿನ ಜಗದ ರೀತಿ···" ಎಂದು ಆತ ಹೇಳುತ್ತಿದ್ದ.

ಆತನು ಹೇಳುವದರಲ್ಲಿ ಅಸತ್ಯವಾದರೂ ಏನಿತ್ತು? ತಾವು ಬದುಕ ಬೇಕಾದರೆ ಇನ್ನೊಬ್ಬರನ್ನು ಮೋಸಗೊಳಿಸಲೇಬೇಕು. ಇಲ್ಲದಿದ್ದರೆ, ಮೋಸಗೊಳಿಸುವ ವ್ಯಕ್ತಿ ಬದುಕುವದಾದರೂ ಹೇಗೆ ?

ಆದರೆ ಮೋಸ ಹೋದ ವ್ಯಕ್ತಿಯ ಅವಸ್ಥೆ ಏನು ?

ಮೋಸ ಹೋದ ವ್ಯಕ್ತಿಯ ಬಗ್ಗೆ ಮೋಸಗೊಳಿಸುವ ವ್ಯಕ್ತಿ ವಿಚಾರ ಮಾಡುತ್ತಿದ್ದರೆ ಆತ ಮೋಸಗೊಳಿಸುವದಕ್ಕೆ ಸಿದ್ಧನಾಗುತ್ತಿದ್ದನಾದರೂ ಏಕೆ.......?

ರಂಗ ನನ್ನನ್ನು ಮೋಸಗೊಳಿಸುತ್ತಿದ್ದನಾದರೂ ಏಕೆ ?

ಅವನು ನನಗೆ ಮೋಸ ಮಾಡಿದ್ದೇಕೆ? ನಾನು ಅವನಿಗೆ ಮಾಡಿದ ಅಪರಾಧವೇನು ?

ಮೋಸಗೊಳಿಸುವದಕ್ಕೆ ಅಪರಾಧಮಾಡಲೇಬೇಕೆಂಬ ನಿಯಮವಿಲ್ಲ. ಅಪರಾಧ ಮಾಡಿದವರಿಗೆ ಯಾರೂ ಮೋಸಗೊಳಿಸುವದಿಲ್ಲ. ಶಿಕ್ಷೆ ಮಾಡುತ್ತಾರೆ.... .. ಮೋಸಗೊಳಿಸುವದು ನಿರಪರಾಧಿಯನ್ನು.

ಏಕೆ....?

ತನ್ನ— ಸ್ವಾರ್ಥಕ್ಕಾಗಿ. ವ್ಯಕ್ತಿ ಸ್ವಾರ್ಥಕ್ಕಾಗಿ. ವೈಯಕ್ತಿಕ ಸ್ವಾರ್ಥಕ್ಕಾಗಿ.

ರಂಗ ಹೇಳುತ್ತಾನೆ— "ಅದೇ ಇಂದಿನ ಜಗದ ರೀತಿ...."

ಇಂದಿನ ಜಗದ ರೀತಿಯಂತೆ ಆತ ನನ್ನನ್ನು ವಂಚಿಸಿದ.

ವಂಚಿಸುವ ಪೂರ್ವದಲ್ಲಿ ಆತ ಎಷ್ಟೊಂದು ನನ್ನನ್ನು ಪ್ರೀತಿಸುತ್ತಿದ್ದನಲ್ಲ......!

ಪ್ರೀತಿ.......!

ಅದು ಪ್ರೀತಿಯಲ್ಲ. ಮರಣ ಶಿಕ್ಷೆ ವಿಧಿಸುವ ಪೂರ್ವದಲ್ಲಿಯ ಇಚ್ಛಾಪೂರೈಕೆ.

ಆ ರೀತಿ ಪ್ರೀತಿಯ ಆಟವಾಡದಿದ್ದರೆ ನಾನು ಅವನಿಗೆ ಬಲಿಯಾಗು ತ್ತಿದ್ದೇನೆ....?

ಹಾಗಾದರೆ ವಂಚಿಸುವದಕ್ಕಾಗಿಯೇ ಎಲ್ಲರೂ ಪ್ರೀತಿಸುತ್ತಾರೆಯೆ ?

ಕಾಮಿನಿ ಏಕೆ ನನ್ನನ್ನು ಪ್ರೀತಿಸುತ್ತಾಳೆ......?

ಕುಲಕರ್ಣಿಯವರು ಏಕೆ ನನ್ನನ್ನು ಪ್ರೀತಿಸುತ್ತಾರೆ....?

ಸ್ಪಷ್ಟವಾಗಿ ಕಾಮಿನಿ "ನಾನು ಜಗದಲ್ಲಿ ಯಾರನ್ನೂ ಪ್ರೀತಿಸುವದಿಲ್ಲ" ಎಂದು ಹೇಳುತ್ತಾಳೆ.

ಆದರೆ ಕುಲಕರ್ಣಿ ಹೇಳುತ್ತಾರೆ " ಸುಮಿತ್ರಾ... ಪ್ರೀತಿಯನ್ನುಳಿದರೆ ಈ ಬರಡು ಜೀವನದ ಮೇಲೆ ಸಂಜೀವಿನಿಯನ್ನೆಳೆಯುವ, ಅಮೃತವನ್ನು ಪ್ರೋಕ್ಷಿಸುವ ಇನ್ನಾವ ಶಕ್ತಿಯೂ ಈ ಜಗದಲ್ಲಿ ಇಲ್ಲ." ಎಂದು.

ಕಾಮಿನಿಯ ವಿಚಾರ ಇದಕ್ಕೆ ತೀರ ವಿರುದ್ಧವಾದುದು. " ಸುಮಿತ್ರಾ ........ಪ್ರೀತಿ ಎಂದರೆ ಏನೆಂದು ತಿಳಿದಿರುವಿ ? ಬೇಟೆಗಾರ ಬೇಟೆಯನ್ನು ಹಿಡಿಯುವದಕ್ಕೆ ಪಸರಿಸಿದ್ದ ಸುಂದರ ಜಾಳಿಗೆ ಎಂದರೆ ಈ ಪ್ರೀತಿ. ಪ್ರೀತಿ ಎನ್ನುವ ಒಂದು ಹೆಸರಿನಿಂದ ಸಾವಿರ ಜನರನ್ನೂ ಸಾಲು ನಿಲ್ಲಿಸಿ ಕುತ್ತಿಗೆ ಕೊಯ್ಯಬಹುದು. ಜಗತ್ತಿನಲ್ಲಿ ಕಟುಕನನ್ನು ನಂಬಬಹುದು. ಆದರೆ 'ನಿನ್ನನ್ನು ಪ್ರೀತಿಸುವೆ' ಎನ್ನುವ ಗಂಡಸನ್ನು ಮಾತ್ರ ನಾವು ಎಂದಿಗೂ ಎಂದೆಂದಿಗೂ ನಂಬಕೂಡದು....ಅವರು ತೀರ ಭೀಕರರು. ನಾವು ರಾಕ್ಷಸ ರಿಗೆ ಹೆದರಬೇಕಿಲ್ಲ. ಏಕೆಂದರೆ ಅವರು ನೇರವಾಗಿ ಬರುತ್ತಾರೆ. ಅವರು ಬಂದಾಗ ನಮಗೂ ಸ್ಪಷ್ಟವಿರುತ್ತದೆ ಇವರು ಕೊಲೆ ಮಾಡುತ್ತಾರೆ ಎಂದು. ಮರಣವೇ ಎದುರು ಬಂದಾಗ ಹೆದರಿದರೆ ಬಿಡುಗಡೆ ಎಲ್ಲಿ ? ಆದ್ದರಿಂದ ಹೆದ ರುವದಾದರೂ ಏಕೆ ? ....ಆದರೆ..."

"....ಆದರೆ....ಈ ಪ್ರೀತಿ ರಾಕ್ಷಸರು....! ಅಬ್ಬಾ....ಅವರ ರೀತಿಯೇ ಬೇರೆ. ಅವರು ತಾವು ನಂದನವನದ ಯಕ್ಷರು ಎಂಬ ಭಾವನೆಯನ್ನು ನಮ್ಮಲ್ಲಿ ನಿರ್ಮಾಣ ಮಾಡುತ್ತಾರೆ. ನಮ್ಮನ್ನು ನಂದನವನಕ್ಕೆ ಕರೆದೊಯ್ಯುವ ನಟನೆ ಮಾಡುತ್ತಾರೆ. ನರ್ತಿಸುತ್ತಾರೆ. ನಲಿಯುತ್ತಾರೆ. ನಲಿಸುತ್ತಾರೆ... ನಗಿಸು ತ್ತಾರೆ. ಕೊನೆಗೆ........"

"...ಕೊನೆಗೆ ಭೀಕರವಾಗಿ ಯಮಯಾತನೆಗೆ ಗುರಿಮಾಡುತ್ತಾರೆ. ಮರಗಿ ಮರಗಿ ಒದ್ದಾಡಿ ಚಡಪಡಿಸಿ ಸಾಯುವಂತೆ ಮಾಡುತ್ತಾರೆ ... ಆದರೆ ಕೊಲ್ಲುವದಿಲ್ಲ... ಸಮಾಜದಲ್ಲಿಯ ಸ್ತ್ರೀ ಸುರಕ್ಷಿತವಾಗಿ ಬಾಳಬೇಕಾದರೆ ಪ್ರೀತಿ ಎಂದುಚ್ಚರಿಸಿದವರಿಗೆ ಮರಣಶಿಕ್ಷೆ ವಿಧಿಸಬೇಕು. ಕೊಲೆ ಮಾಡಿಬಿಡಬೇಕು."

ಕಾಮಿನಿಯ ಹೃದಯದಿಂದ ತಪ್ತವಾಗಿ ಈ ನುಡಿಗಳು ಹೊರಬೀಳುತ್ತವೆ. ಆದರೆ ಕುಲಕರ್ಣಿ ಹೇಳುವದೇ ಬೇರೆ

ಅವರು ಹೇಳುವಾಗ " ಪ್ರೀತಿಯೇ ಪರಮಾತ್ಮ " ಎನ್ನಿಸುತ್ತದೆ

" ಸುಮಿತ್ರಾ ನಿಜವಾಗಿಯೂ ಪ್ರೀತಿಯೇ ಪರಮಾತ್ಮ. ಪ್ರೀತಿಯಿಂದಲೇ ಪರಮಾತ್ಮ. ಪ್ರೀತಿಯಿಲ್ಲದಿದ್ದರೆ ಏನಿದೆ ಈ ಜಗದಲ್ಲಿ ? ಒಬ್ಬರು ಇನ್ನೊಬ್ಬರನ್ನು ಮಾತನಾಡಿಸುವ ಕಾರಣವಾದರೂ ಏನು ? ಪ್ರೀತಿಯಿಲ್ಲದಿದ್ದರೆ ಜಗತ್ತೆ ಕಟುಕರ ಮನೆಯಾಗುತ್ತಿತ್ತು. ಒಬ್ಬ ಇನ್ನೊಬ್ಬನ ಸಂಹಾರ ಮಾಡುತ್ತಿದ್ದ. ಮಾನವ ಕುಲವೇ ಸಂಹಾರವಾಗುತ್ತಿತ್ತು. ನಿರ್ನಾಮವಾಗುತ್ತಿತ್ತು. ಆದರೆ ಪ್ರೀತಿ ಎನ್ನುವ ಪರಮಾತ್ಮ ಈ ಸಂಹಾರದಿಂದ ಜಗವನ್ನು ಉದ್ಧರಿಸಿದ್ದಾನೆ. ರಕ್ಷಿಸಿದ್ದಾನೆ. ರಕ್ಷಿಸುತ್ತಿದ್ದಾನೆ........"

" ... ತಾಯಿ ಮಕ್ಕಳ ಸಂಬಂಧವೇನು ? ತಂದೆ ಮಕ್ಕಳ ಸಂಬಂಧವೇನು ? ಅಣ್ಣ–ತಮ್ಮಂದಿರನ್ನು ಬಂಧಿಸಿದ ಶಕ್ತಿಯಾವದು ? ನನ್ನ ನಿಮ್ಮನ್ನು ಒಂದೆಡೆಗೆ ತಂದ ಶಕ್ತಿಯಾವುದು ? ನೀವು ಕಾಮಿನಿ ಒಂದಾಗಿ ಮುಕ್ತ ಹೃದಯದಿಂದ ಮಾತನಾಡುವದರ ಮೂಲವೇನು " ಹೆತ್ತ ಮಗುವಿನಂತೆ ಕಾಮಿನಿ ನನ್ನನ್ನು ರಕ್ಷಿಸುವದೇಕೆ ? ನಾನು ಸುತ್ತೆಲ್ಲ ತಿರುಗಾಡಿ ಸುರಕ್ಷಿತವಾಗಿ ಮನೆ ಮುಟ್ಟುವ ವರೆಗೆ ನನ್ನನ್ನು ಕಾಯುವರಾರು ?... ಎಲ್ಲದಕ್ಕೂ ಮೂಲ ಪ್ರೀತಿ.... ಪ್ರೀತಿಯಿಂದಲೇ ಸರ್ವ ಶಕ್ತಿಯ ಸಂಚಲನ "

" ತಾಯಿ ಮಕ್ಕಳ ಸಂಬಂಧ ಪ್ರೀತಿ..."

"...ತಂದೆ ಮಕ್ಕಳ ಸಂಬಂಧ ಪ್ರೀತಿ...."

"...ಅಣ್ಣ ತಮಂದಿರನ್ನು ಬಂಧಿಸುವ ಶಕ್ತಿ ಪ್ರೀತಿ..."

"...ನನ್ನ ಸಿಮ್ಮನ್ನು ಒಂದೆಡೆಗೆ ತಂದ ಶಕ್ತಿ ಪ್ರೀತಿ...."

"ಕಾಮಿನಿ ನನ್ನನ್ನು ರಕ್ಷಿಸುವದು ಪ್ರೀತಿಯಿಂದ..."

"ಜಗತ್ತಿನಲ್ಲಿಯ ಜನರನ್ನು ಸುರಕ್ಷಿತವಾಗಿಡುವ ಶಕ್ತಿ ಪ್ರೀತಿ..."

"....ಪ್ರೀತಿ....ಮಹಾಶಕ್ತಿ ಪ್ರೀತಿ... "

"...ಪ್ರೀತಿಯೇ ಪರಮಾತ್ಮ..."

"...ಪ್ರೀತಿಯೆ ಪರಮಾತ್ಮನಾದರೆ ಈ ಜಗತ್ತಿನಲ್ಲಿ ದ್ವೇಷದ ಅಲ್ಲೋಲ ಕಲ್ಲೋಲವೇಕೆ! ದ್ವೇಷದಿಂದ ಅಲ್ಲೋಲಕಲ್ಲೋಲವೇಕೆ? ದ್ವೇಷದಿಂದ ಅನಾಹುತವಾಗುವದೇಕೆ ! ಎನ್ನುವ ಪ್ರಶ್ನೆ ಸಾಮಾನ್ಯನಾಗಿ, ಸಾಮಾನ್ಯರಲ್ಲಿ ಉದ್ಭವಿಸುವದು ಸಹಜ. ಅದಕ್ಕೆ ಉತ್ತರ..."

"...ಪ್ರೀತಿಯ ಕಂಗಳಿಗೆ ದ್ವೇಷವೇ ಕಾಣದು..."

"....ಇದುವೇ ಒಂದೇ ಒಂದಾದ ಉತ್ತರ..."

"....ಪರಮಾತ್ಮ ಯಾರನ್ನೂ ದ್ವೇಷಿಸುವದಿಲ್ಲ....ಆ "

"...ಆತ ಅಮೃತ ಸ್ವರೂಪ. ಆತನೇ ಅಮೃತ..."

"ಅಮೃತದ ಗುಣ ಕೊಲ್ಲುವದಲ್ಲ. ಮೃತ್ಯರಿಗೆ ಅಮರತ್ವ ತಂದು ಕೊಡುವದು. ಮೃತ್ಯರಿಗೆ ಅಮರತ್ವವನ್ನು ಸಾಧಿಸಿ ಕೊಡುವ, ತಂದು ಕೊಡುವ ಅಮೃತ, ಹಾಲಾಹಲವಾಗಿ ಹೃದಯದಲ್ಲಿ ನೇರುವದು ಎಂದು ಹೇಗೆ ಹೇಳಲು ಬಂದಿತು ? "

" ಅಮೃತದ ಅವತಾರ ಅಮರತ್ವಕ್ಕೆ..."

"....ಪರಮಾತ್ಮನ ಅವತಾರ ಉದ್ಧಾರಕ್ಕೆ .. "

"...ಪ್ರೀತಿಯ ಅವತಾರ ಅಭಯದಾನಕ್ಕೆ...."

" ಪ್ರೀತಿಯೇ ಅಭಯ. "

" ಅಭಯದಿಂದ, ವ್ಯಕ್ತಿಗೆ ಭಯವೆನ್ನಿಸುತ್ತಿದ್ದರೆ ಕುಂದು ವ್ಯಕ್ತಿಯಲ್ಲಿ ಅಲ್ಲದೆ ಅಭಯದಲ್ಲಿ ಅಲ್ಲ. ಪ್ರೀತಿ, ಅಭಯ ಈ ಜಗದಲ್ಲಿ ಇಲ್ಲದಿದ್ದರೆ ಏನಾಗುತ್ತಿತ್ತು ? "

"...ತಾಯಿ ರೌದ್ರಳಾಗಿ ಹೆತ್ತ ಕರುಳನ್ನು ಕಾಲ್ತುಳಕ್ಕೆ ಮೆಟ್ಟು ತ್ತಿದ್ದಳು...."

"...ಒಬ್ಬ ಇನ್ನೊಬ್ಬನ ನೆತ್ತರ ಹೀರುತ್ತಿದ್ದ..."

"....ದೇವ ದೈತ್ಯನಾಗಿರುತ್ತಿದ್ದ."

"...ಈ ಜಗದಲ್ಲಿ ದೇವ ಎನ್ನುವ ಶಬ್ದ, ಶಕ್ತಿ ಇರುತ್ತಿರಲಿಲ್ಲ...."

"...ಪ್ರೀತಿ ವ್ಯಕ್ತಿ ವ್ಯಕ್ತಿಗಳ ನಾಡಿ ನಾಡಿಗಳಲ್ಲಿ ಹರಿದಾಡುತ್ತದೆ. ಆ ಹರಿದಾಡುವ ಪ್ರೀತಿಯ ಮೂಲ ಒಂದು. ಪ್ರೀತಿ ಒಂದು....."

"...ಅಂತೆಯೇ ಒಂದೇ ಒಂದಾದ,, ಒಂದಿದ್ದ ಪ್ರೀತಿ ಸರ್ವಕಾಲದಲ್ಲಿ ಸಮರಸವಾಗಲು ಪ್ರಯತ್ನಿಸುತ್ತದೆ. ತನ್ನ ಸಂಸಾರವನ್ನು ಹಿರಿದು ಮಾಡಲು ಪ್ರಯತ್ನಿಸುತ್ತದೆ........"

"....ಅಂತಹ ಪ್ರೀತಿಯಲ್ಲಿ ದ್ವೇಷವೆಲ್ಲಿಂದ ಬಂದೀತು. ?"

ಸುಮಿತ್ರಾ....ಎಲ್ಲೆಲ್ಲಿಯೂ ಪ್ರೀತಿಯಿದೆ. ಎಲ್ಲರಲ್ಲಿಯೂ ತುಂಬಿದೆ. ಪ್ರೀತಿ ವ್ಯಕ್ತಿಯ ದೇಹಕ್ಕೆ ಅಂಟಿಕೊಂಡು ಬಂದುದಲ್ಲ. ವ್ಯಕ್ತಿಯ ಆತ್ಮಕ್ಕೆ ಅಂಟಿದ್ದು.

ಅದರ ಸ್ಥಾನ ವ್ಯಕ್ತಿಯ ಆತ್ಮದ ಜೊತೆಗೆ"

"ಆ ಆತ್ಮ ವ್ಯಕ್ತಿ ವ್ಯಕ್ತಿಯಲ್ಲಿದೆ. ಸರ್ವರಲ್ಲಿ ಸಮವಾಗಿದೆ..."

"ಯಾವ ಸ್ವಾರ್ಥಿಯೂ ಅದನ್ನು ಸ್ವಾರ್ಥದಿಂದ ತನ್ನವರಿಗೆ ಹೆಚ್ಚು ಕೊಟ್ಟಿಲ್ಲ. ದ್ವೇಷದಿಂದ ಕಡಿಮೆ ಕೊಟ್ಟಿಲ್ಲ."

"... ಜಗತ್ತಿನಲ್ಲಿ ದ್ವೇಷ ಕಾಣಿಸುತ್ತದೆ ಎಂದರೆ ಅದು ನೋಡುವ ಕಂಗಳಲ್ಲಿದೆ ಎಂಬ ಅರ್ಥವಲ್ಲದೆ ಇನ್ನೇನೂ ಅಲ್ಲ..."

"....ಸೂರ್ಯನ ಕಣ್ಣಿಗೆ ಕತ್ತಲೆ ಕಂಡೀತೆ ?...."

"... ಸುಮಿತ್ರಾ.. .....ನಾನು ಹೇಳುವದು ವೇದಾಂತವೆಂದು ಭಾವಿಸ ಬೇಡಿರಿ. ನಿತ್ಯ ಜೀವನದಲ್ಲಿಯ ಸತ್ಯವಸ್ತು ಅದು. ಎಂದೆಂದಿಗೂ ಮಾಸದು ಅದು..."

"...ಪರಮಾತ್ಮ ವೃದ್ಧನಾಗುವನೆ...?" ಎಂದು ಕುಲಕರ್ಣಿ ಪ್ರಶ್ನೆ ಹಾಕುತ್ತಾರೆ.

ಇಲ್ಲ ಪರಮಾತ್ಮ ಎಂದಿಗೂ ವೃದ್ಧನಾಗಲಾರ, ನಿತ್ಯ ಯೌವನ ಮೂರ್ತಿ ಆತ. ಅದು ನಿಜ. ಪರಮಾತ್ಮನ ಅಂಶವಾದ ಪ್ರೀತಿ ಸರ್ವರ ಹೃದಯದಲ್ಲಿ ಸಮವಾಗಿ ವಾಸಿಸಿದಲ್ಲಿ ಜಗತ್ತಿನ ಕಲ್ಯಾಣವಾಗಬಹುದು

'ಜಗತ್ತಿನಲ್ಲಿ ದ್ವೇಷ ಕಾಣಿಸುತ್ತದೆ. ಎಂದರೆ ಅದು ನೋಡುವ ಕಂಗಳಲ್ಲಿದೆ' ಎಂದು ಕುಲಕರ್ಣಿಯವರು ಹೇಳುತ್ತಾರೆ.

ರಂಗ ನನ್ನನ್ನು ಪ್ರೀತಿಸುವದಿಲ್ಲ. ಅದಕ್ಕಾಗಿ ನನ್ನನ್ನು ದೂಡಿದ; ಇದೂ ಸತ್ಯ.

' ಆದರೆ ನಾನೇ ಅವನನ್ನು ದೂಡಿ ಓಡಿ ಬಂದೆ ' ಎಂದು ಹೇಳಲು ಬಂದೀತೆ ?

ಸ್ತ್ರೀ ಎಂದಿಗಾದರೂ ನಂಬಿದ ಪುರುಷನನ್ನು ತೊರೆದು ಬರುವಳೆ ? ಹಾಗೆ ತೊರೆದು ಬಂದರೆ ಅವಳಿಗೆ ಉಳಿಗಾಲವೆಲ್ಲಿ ? ಅವಳು ಬದುಕುವದು ಪುರುಷರಿಂದ ಪುರುಷರ ಕೃಪೆಯಿಂದ

ಸಂಗತಿ ಹೀಗಿರುವಾಗಲೂ ಪ್ರೀತಿ ನನ್ನಲ್ಲಿಲ್ಲ ದ್ವೇಷ ನನ್ನಲ್ಲಿದೆ. ಆದ್ದರಿಂದಲೇ ನಾನು ರಂಗನನ್ನು ತೊರೆದು ಬಂದೆ- ಎಂದು ಹೇಳುವದು ಸತ್ಯದ ವಿಷಯವಷ್ಟೇ ಅಲ್ಲ. ಆದರ ಕೊಲೆ.

ನಾನು ರಂಗನನ್ನು ನಂಬಿದ್ದೆ. ಅವನ ಮಾತಿನಲ್ಲಿ ವಿಶ್ವಾಸ ತಾಳಿದ್ದೆ. ಅವನ ಮಾತಿನಲ್ಲಿ ತಾಳಿದ ನಂಬಿಕೆ ಇಟ್ಟ ವಿಶ್ವಾಸ ಪ್ರೀತಿಯ ದ್ಯೋತಕ ಗಳಾಗಿರಲಿಲ್ಲವೆ ?

" ನಿಮ್ಮಾ........ಇಂದಿಲ್ಲ ನಾಳೆ ನಿನ್ನಪತಿಯಾಗುವ ನನ್ನೆದುರು ಎಂದಿನ ವರೆಗೆ ನಾಚುವಿ....?" ಎಂದು ಕೇಳಿದ್ದ ರಂಗ ಒಂದು ದಿನ.

ಅಂದಿನಿಂದ ಅವನನ್ನೇ ನನ್ನ ಪತಿ ಎಂದು ಭಾವಿಸಿದ್ದೆ....ಪತಿ ಎಂದು ಪ್ರೀತಿಸಿದ್ದೆ.

ಪತಿ ಎಂದು ಪೂಜಿಸುತ್ತಿದ್ದೆ.

ಪೂಜೆಗೊಳ್ಳುವ ಪತಿಗಾಗಿ ಸ್ತ್ರೀ ಹೃದಯದಲ್ಲಿ ಪ್ರೀತಿ ಇರುವದಿಲ್ಲವೆ ?

ಪ್ರೀತಿಯಿಲ್ಲದೆ ಪೂಜೆಯಾದೀತೆ ?

ಪ್ರೀತಿಯಿಲ್ಲದ ಪೂಜೆ, ಪೂಜೆ ಆಹುವೇ ?

ನನ್ನ ಪ್ರೀತಿಯ ಪೂಜೆ ವಿಫಲವೇಕಾಯಿತು ?

ನನ್ನ ಪ್ರೀತಿಗೆ ಫಲವೇಕೆ ದೊರೆಯಲಿಲ್ಲ....?

ಪ್ರೀತಿಗೆ ಫಲ ದೊರೆಯಬೇಕಾದರೆ— ಪೂಜೆ ವಿಫಲವಾಗಬೇಕಾದರೆ ದೋಷವಿರಲೇಬೇಕು. ಪ್ರೀತಿಯಲ್ಲಿ... ಪೂಜೆಯಲ್ಲಿ...

ಏನಾದರೂ ದೋಷವಿದ್ದಿರಲೇ ಬೇಕು.

ನನ್ನಲ್ಲಿ ದೋಷವಿದ್ದಿತೆ....?

ನನ್ನ ಮನದಲ್ಲಿ ವಂಚನೆ ಇದ್ದಿತೆ ?

ನನ್ನ ಪ್ರೀತಿಯಲ್ಲಿ ಪಾಪವಡಗಿದ್ದಿತೆ ?

ಇದಕ್ಕೆ ಉತ್ತರಿಸಲು ಹೆಚ್ಚಿನ ಸಮರ್ಥರು ನಾನಲ್ಲದೆ ಇನ್ನಾರು.... ?

ಈ ಉತ್ತರ ನನಗಲ್ಲದೆ ಇನ್ನಾರಿಗೆ ಗೊತ್ತು ...?

ನನಗೆ ಗೊತ್ತಿದ್ದ ಉತ್ತರ ಒಂದು. ನನ್ನಲ್ಲಿದ್ದ ಉತ್ತರ ಒಂದು—

ನನ್ನ ಮನದಲ್ಲಿ ವಂಚನೆಯಿರಲಿಲ್ಲ. ನನ್ನ ಪೂಜೆಯಲ್ಲಿ ದೋಷವಿರಲಿಲ್ಲ ನನ್ನ ಪ್ರೀತಿಯಲ್ಲಿ ಪಾಪವಡಗಿರಲಿಲ್ಲ.

ಆದರೂ ನಾನು ದುಃಖಿಯಾದೆ.

ಏಕೆ ?

ಅದಕ್ಕೆ ನನ್ನ ಉತ್ತರ—

'ರಂಗ ವಿಶ್ವಾಸ ಘಾತಕಿ........ರಂಗ ವಂಚಕ........ ಪಾಪಿ.........'

ವಿಶ್ವಾಸ ಘಾತಕಿಯನ್ನು ವಿಶ್ವಾಸವಿಡಬಹುದೆ........? ವಂಚಕನನ್ನು ನಂಬಬಹುದೆ ಪಾಪಿಯನ್ನು ಪ್ರಾರ್ಥಿಸಬಹುದೆ....?

ಪಾಪಿಗಳ ಜೊತೆಗೆ ಯಾವ ಪುಣ್ಯ ಕಾರ್ಯವೂ ಅಪ್ರಸ್ತುತ.... ಮಾಡಕೂಡದು.

ಆದರೆ ಆವನು ಪಾಪಿ ಎಂಬ ಅರಿವು ನೊದಲು ಇರಲಿಲ್ಲ.... ಅಲ್ಲ .... ನಾನು ಮೊದಲು ಅಂತಹ ವಿಚಾರವನ್ನು ಕೂಡ ಮಾಡಲಿಲ್ಲ. ಯಾವುದು ಯೋಗ್ಯ, ಯಾವುದು ಅಯೋಗ್ಯ, ಯಾವುದು ಒಳ್ಳೆಯದು, ಯಾವುದು ಕೆಡಕು ಎನ್ನುವದನ್ನು ನಾನು ವಿಚಾರ ಮಾಡಲಿಲ್ಲ. ಅದು ನನ್ನ ತಪ್ಪು

ಅದುವೇ ನನ್ನ ಅಪರಾಧ .. ಮಹಾಪರಾಧ.

ತಾರುಣ್ಯದ ಹುಂಬತನದಲ್ಲಿ ಕಣ್ಣಿದ್ದರೂ ಅಂಧಳಾದ ನಾನು ಊರು ಗೋಲಿಲ್ಲದೆ ಮುಂದೆ ಸಾಗಿದೆ. ದಾರಿಯಲ್ಲಿ ಮುಂದೆ ಕಲ್ಲು ಮುಳ್ಳುಗಳಿವೆ ಎನ್ನುವದನ್ನು ನೋಡಲಿಲ್ಲ ಆ ಎಂದು ಬಾಯಿ ತೆರೆದ ಹಾಳು ಭಾವಿ ಹಾಳಾಗಿ ನೆಲವಾಗದೆ ಸಸಗಾಗಿಯೇ ಇನ್ನೂ ಭೂಮಿತಾಯಿಯ ಹೃದಯ ಗಲ್ಲಿಯ ಆಳವಾದ ಗಾಯದಂತೆ ಉಳಿದಿದೆ ಎನ್ನುವದನ್ನು ಸ್ಮರಣೆಗೆ ತಂದು ಕೊಳ್ಳಲಿಲ್ಲ. ತಂದೆ ತಾಯಿಗಳ ಕಣ್ಣಿಗೆ ಮಣ್ಣೆರಚಿ ರಂಗನ ತಾಯಿಯ ಜೊತೆಗೆ ಮಾತನಾಡುವ ನೆವದಿಂದ ರಂಗನಿಗಾಗಿ ರಂಗನ ಮನೆಯಲ್ಲಿ ಕಾಯುತ್ತ ಕೂಡುತ್ತಿದ್ದೆ.

ಆ ತಪ್ಪು ಇನ್ನಾದರೂ ಅಲ್ಲ. ನನ್ನದು.

ಆ ದಿನವೇ ನಾನು ಕಣ್ತೆರೆದು ದಾರಿ ನೋಡಿ ಮುಂದೆ ಸಾಗಿದ್ದರೆ ....?

ಆ ಪ್ರಶ್ನೆಯಿಂದ ಈ ದಿನವಾಗುವ ಪ್ರಯೋಜನವಾದರೂ ಏನು ?

ಕಣ್ತೆರೆದು ದಾರಿ ನೋಡಿ ಹೆಜ್ಜೆ ಹಾಕಿದ್ದರೆ ಹೆಜ್ಜೆ ತಪ್ಪುತ್ತಿರಲಿಲ್ಲ. ದಾರಿ ತಪ್ಪುತ್ತಿರಲಿಲ್ಲ. ಹಾಳು ಬಾವಿಯಲ್ಲಿ ಬೀಳುತ್ತಿರಲಿಲ್ಲ.

ನನ್ನ ತಪ್ಪಿಗಾಗಿ ಯಾರನ್ನು ದೂಷಿಸಿದರೂ ಪ್ರಯೋಜನವಿಲ್ಲ. ಹಿಂದೆ ಮಾಡಿದ ತಪ್ಪಿಗಾಗಿ ನನ್ನನ್ನುನಾನೇ ದೂಷಿಸಿಕೊಂಡರೂ ದೂರಿಕೊಂಡರೂ, ನನ್ನದೋಷದಮೇಲೆ ಅಪರಾಧದ ಮೇಲೆ ಪಾಪದಮೇಲೆ ತೆರೆಬೀಳಲಾರದು.

ಅಪರಾಧಕ್ಕೆ ಶಿಕ್ಷೆಯಾಗಲೇಬೇಕು. ಅದೆಂದಿಗೂ ತಪ್ಪಿದ್ದಲ್ಲ

ಶಿಕ್ಷೆಯಾಗಬಾರದು ಎಂದಿದ್ದರೆ ಅಪರಾಧವನ್ನೇ ಮಾಡಕೂಡದು.

ಆದರೆ ಮನುಷ್ಯರೆನ್ನಿಸಿಕೊಂಡು ಬಾಳುವದರಿಂದ ಅಪರಾಧವಾಗದೆ ಇರಲು ಅದೆಂದಿಗಾದರೂ ಸಾಧ್ಯವೆ ?

ನಾನೂ ಮನುಷ್ಯಳು. ನನ್ನಿಂದ ಅಪರಾಧವಾಯಿತು. ಪಾಪ ಸಂಭ ವಿಸಿತು.

ಆದರೆ ನನ್ನ ಕೃತಿ ಅಪರಾಧವಾಗದೆ ಇರಲು ಸಾಧ್ಯವಿತ್ತು. ರಂಗ ತನ್ನ ಮಾತಿನಂತೆ ನಡೆದಿದ್ದರೆ ಅದು ಪಾಪವಾಗುತ್ತಿರಲಿಲ್ಲ. ಅಥವಾ ಜನ ಅದಕ್ಕೆ ಪಾಪ ಎಂದು ಕರೆಯುತ್ತಿರಲಿಲ್ಲ. ಅಥವಾ ಕರೆಯುವ ಸಾಹಸ ಮಾಡುತ್ತಿರ ಲಿಲ್ಲ. ಕರೆಯುವ ಧೈರ್ಯವಾಗುತ್ತಿರಲಿಲ್ಲ.

ಹಾಗೆಂದು ಹೇಳಿ ಹೊಣೆ ಹಾರಿಸಿಕೊಳ್ಳಲು ಬಂದೀತೆ ?

ರಂಗನ ಒಪ್ಪಿಗೆಯಲ್ಲಿ ಪಾಪವನ್ನು ಪುಣ್ಯಕ್ಕೆ ಪರಿವರ್ತಿಸುವ ಶಕ್ತಿ ಇದೆಯೆ ?

ಆದರೆ ಕುಲಕರ್ಣಿಯವರು ಹೇಳುತ್ತಾರೆ. " ಪಾಪವು-ಪಾಪವೇ. ಅದನ್ನು ಪುಣ್ಯಕ್ಕೆ ಪರಿವರ್ತಿಸುವ ಶಕ್ತಿ ಪರಮಾತ್ಮನಲ್ಲಿ ಕೂಡ ಇಲ್ಲ..." ಎಂದು

ಅಂದಮೇಲೆ ರಂಗನ ಒಪ್ಪಿಗೆಯಿಂದ ಪಾಪ ಹೇಗೆ ಇಲ್ಲದಾಗುತ್ತಿತ್ತು ? ಅಪರಾಧ-ನಿರಪರಾಧ ಹೇಗಾಗುತ್ತಿತ್ತು ?

ಸುಖದ ವ್ಯಾಮೋಹದಿಂದ ಯುಕ್ತಾಯುಕ್ತಗಳ ವಿಚಾರವಿಲ್ಲದೆ ಕಂಡ ಗಂಡಿನ ಕೋಣೆಯಲ್ಲಿ ಬಿದ್ದದ್ದು ಪಾಪವಲ್ಲವೆ ?

' ಕರ್ಣ ಜೊತೆಗಿದ್ದರೆ ನನಗೆ ಆರು ಜನ ಪತಿಗಳಾಗುತ್ತಿದ್ದರು ' ಎಂಬ ವಿಚಾರ ಒಂದೇ ಕ್ಷಣ ನುಸುಳಿ ಹೋದ ದ್ರೌಪದಿ ಕಲಂಕಿತೆಯಾದಳಂತೆ ! ಅವಳು ಮಹಾ ಪತಿವ್ರತೆ ಎಂದು ಪುರಾಣ ಸಾರುತ್ತದೆ. ಅವಳು ಮಹಾ ಭಕ್ತಳು ಎಂದು ಅವಳ ಉಜ್ವಲ ಚರಿತ್ರೆ ಹೇಳುತ್ತದೆ. ಅವಳ ಮೇಲಿನ ಸಂಕಟಗಳ ನಿವಾರಣೆಗಳಲ್ಲಿ ಪರಮಾತ್ಮ ಸಹಾ ಸಿದ್ಧನಿರುತ್ತಿದ್ದ.

ಆದರೆ ಅಂತಹ ಭಕ್ತಳ ಪತಿವ್ರತೆಯ ಮನದಲ್ಲಿ ಮನುಷ್ಯ ಸ್ವಭಾವದ ಪ್ರತೀಕವಾಗಿ ಬೇಡವಾಗಿಯಾದರೂ ಸುಳಿದ ಒಂದು ಅರಕ್ಷಣದ ವಿಚಾರ ದಿಂದ ಅವಳಿಗೆ ಕಲಂಕ ತಗುಲಿತು ! ಅದು ಅವಳ ಅಪರಾಧ ! ಅದಕ್ಕೆ ಶಿಕ್ಷೆಯೂ ಆಯಿತು ! ಮನುಷ್ಯರಾದರೂ ದೇವತೆಗಳ ಮಟ್ಟಕ್ಕೇರಿದವರ ಅವಸ್ಥೆ ಹೀಗಾದರೆ ಮನುಷ್ಯತ್ವದಿಂದ ಪ್ರಾಣಿಗಳ ಅವಸ್ಥೆಗಿಳಿದ ನಮಗಾಗುವ ಶಿಕ್ಷೆ ಎಂತಹದು....?

ಮಾಡಿದ ಪಾಪ ನನ್ನದಾಗಿದ್ದರೂ ಅದನ್ನು ಇನ್ನೊಬ್ಬರ ಮೇಲೆ ಹಾಕಿ ನಾನು ನಿರಪರಾಧಿ ಎನ್ನಿಸಿಕೊಳ್ಳಬಯಸುವೆ.

ನಿಜವಾಗಿಯೂ ನಾನು ನಿರಪರಾಧಿಯೆ ?

ಅಲ್ಲ.

ಅದು ನನ್ನ ನಿಶ್ಚಿತ ಉತ್ತರ.

ಏಕೆಂದರೆ ಕುಲಕರ್ಣಿಯವರು " ನಿರಪರಾಧಿಗೆ ಎಂದಿಗೂ ಶಿಕ್ಷೆಯಾಗದು " ಎಂದು ಸ್ಪಷ್ಟವಾಗಿ ಹೇಳುತ್ತಾರೆ. ಅವರ ಈ ಮಾತಿನಲ್ಲಿ ನನ್ನ ನಂಬಿಗೆಯೂ ಇದೆ.

ನನಗೆ ಶಿಕ್ಷೆಯಾಗಿದೆ ಎಂದಮೇಲೆ ನಾನು ಅಪರಾಧಿ. ನನ್ನಿಂದ ಅಪರಾಧವಾದುದು ನಿಜ.

ಮಾನ ರಕ್ಷಣೆಗಾಗಿ ಮಗುವನ್ನು ಹೊಳೆಗೆ ಬೀಸಾಕಿದ ಕುಂತಿದೇವಿಗೆ ಸಾಯುವವರೆಗೆ ಮಕ್ಕಳಿಗಾಗಿ ಹಲುಬಬೇಕಾಯಿತು. ಅಡವಿಯಲ್ಲಿ ತಿರಗುವ ಮಕ್ಕಳಿಗಾಗಿ ಮನೆಯಲ್ಲಿ ಕುಳಿತು ಕಣ್ಣೀರಿಡಬೇಕಾಯಿತು. ಒಂದೇ ವಂಶದ ಮಕ್ಕಳು ಒಬ್ಬರೊಬ್ಬರ ನೆತ್ತರ ಹೀರುವದಕ್ಕೆ ಸಿದ್ಧರಾದುದನ್ನು ನೆತ್ತರ ಹರಿಸಿದ್ದನ್ನು ತೆರೆದ ಕಂಗಳಿಂದ ನೋಡಬೇಕಾಯಿತು.........ವಿವಾಹ ಪೂರ್ವದಲ್ಲಿ ತಾಯಿಯ ಅಪರಾಧಕ್ಕಾಗಿ ಅವಳು ವಿವಾಹ ನಂತರ ಕೂಡ ವೈವಾಹಿಕ ಸುಖವಿಲ್ಲದೆ ಕೊರಗಬೇಕಾಯಿತು.

ಅವಳು ಮಾಡಿದ್ದು ಅಪರಾಧ.

ಅಪರಾಧಕ್ಕೆ ಶಿಕ್ಷೆಯಾಗಲೇಬೇಕು.

ಶಿಕ್ಷೆಯೂ ಆಯಿತು

ನಾನು ಮಾಡಿದ್ದು ಕೂಡ ಅಪರಾಧ.

ನನಗಾಗಿ ಯಾವ ಶಿಕ್ಷೆ ಕಾದಿದೆಯೋ........?.......

ಆದರೆ ಕಾಮಿನಿ "ನೀನು ಮಾಡಿದ್ದು ಅಪರಾಧವಲ್ಲ........ನಿನಗಾಗಿ ಯಾವ ಶಿಕ್ಷೆಯೂ ಕಾದಿಲ್ಲ." ಎಂದೇ ಹೇಳುತ್ತಾಳೆ.

" ನೀನು ಮಾಡಿದ್ದು ಅಪರಾಧ ಎಂದು ಹೇಳುವದಾದರೂ ಹೇಗೆ ..? ತಾಯಿಯಾಗುವದು ಅಪರಾಧ ಎಂದು ನೀನು ಅಥವಾ ಯಾರಾದರೂ ಹೇಳುತ್ತಿದ್ದರೆ ಜಗತ್ತಿಗೆ ಜನ್ಮಕೊಟ್ಟ ಪರಮಾತ್ಮನೂ ಅಪರಾಧಿ....ನಿನಗೆ... ನನಗೆ....ನಮ್ಮಂತೆ ಇನ್ನುಳಿದ ಸಮಸ್ತ ಪ್ರಾಣಿಗೆ ಜನ್ಮಕೊಟ್ಟ ತಾಯಿಗಳೂ ಅಪರಾಧಿಗಳು..... .. ಆದರೆ ತಾಯಿ-ಮಗುವಿನದು ಪಾಪವಲ್ಲ. ತಾಯಿಯಾಗುವದು ಪಾಪವಾಗಿದ್ದರೆ ಈ ಜಗತ್ತಿನ ಜನ ಜಂಗುಳಿಯಲ್ಲ ಪಾಪದ ಜಂತುಗಳು. ದೇಹ ಧರಿಸಿದ ಜೀವಿಗಳೆಲ್ಲ ಪಾಪದ ಪ್ರಾಣಿಗಳು, ಎಂದರೆ ಎಲ್ಲರೂ ಪುಣ್ಯವಂತರೇ ಎಂದಂತೆ. ಏಕೆಂದರೆ ಪುಣ್ಯವೇ ಇಲ್ಲದಿದ್ದರೆ ಪಾಪಕ್ಕಾದರೂ ಅಸ್ಪದವೆಲ್ಲಿ? ಪುಣ್ಯವಿದೆ ಅಂತೆಯೇ ಪಾಪವಿದೆ. ಪಾಪವಿದೆ ಎನ್ನುವದರಿಂದಲೇ ಪುಣ್ಯಕ್ಕಾಗಿ ಪ್ರಯತ್ನಿಸುತ್ತಾನೆ. ಮನುಷ್ಯ ........ಪುಣ್ಯಕ್ಕಾಗಿ ಪ್ರಯತ್ನಿಸುವ ಮನುಷ್ಯರಿಗೆ- ಜನ್ಮದಾತ್ರ ತಾಯಿ.... ಮನುಷ್ಯರಿಗೆ ಜನ್ಮಕೊಡುವ ತಾಯಿಯು ಪಾಪಿಯೇ? ಮನುಷ್ಯರಿಗೆ ಜನ್ಮ ಕೊಡುವದು ಅಪರಾಧವೆ? ....ಅಲ್ಲ.... ಅದು ಎಂದೆಂದಿಗೂ ಅಪರಾಧವಲ್ಲ. ಅದು ಅಪರಾಧವಲ್ಲ ಎಂದಾಗ ಶಿಕ್ಷೆಯಾದರೂ ಏಕೆ? ಯಾರಿಗೆ...? .... ಪತಿಯಿಲ್ಲದೆ ಸ್ತ್ರೀ ತಾಯಿಯಾಗುವದು ಅಪರಾಧ ಎಂದು ಸಮಾಜದ ಕಟ್ಟಳೆ. ಆದರೆ ದೇವರದಲ್ಲ "

" ಜಗತ್ತಿನ ಜನನವಾದಾಗ ಮನುಷ್ಯರನ್ನು ನಿರ್ಮಿಸಿದವ ವಿವಾಹವನ್ನೂ ನಿರ್ಮಿಸಲಿಲ್ಲ... ವಿವಾಹ ಮನುಷ್ಯನ ಕಟ್ಟಳೆ. ಅಲ್ಲದೆ ದೇವನದಲ್ಲ. ಮನುಷ್ಯ ಸ್ವಾರ್ಥಿಯಾದಾಗ ಅವನ ಸ್ವಾರ್ಥದಿಂದ ಇನ್ನೊಬ್ಬನಿಗೆ ಕೆಡಕಾಗಕೂಡದು ಎಂಬ ವಿಚಾರದಿಂದ ಮಾಡಿದ ಹಲವು ಕಟ್ಟಳೆಗಳಲ್ಲಿ ಇದೂ ಒಂದು... ಒಂದು ದಿನದ ಪೂರ್ವದಲ್ಲಿ ಸ್ತ್ರೀಗೆ ಸಂಬಂಧವಿಲ್ಲದ ಒಬ್ಬ ಗಂಡಸು ಒಂದೇ ಕ್ಷಣದಲ್ಲಿ ಆ ಸ್ತ್ರೀಯನ್ನು ಅಖಂಡವಾಗಿ ಗುಲಾಮಳನ್ನು ಮಾಡುವ ವಿಧಿಗೆ ವಿವಾಹ ಎಂಬ ಹೆಸರು. ಬೆಂಕಿಯ ಎದುರಿನಲ್ಲಿ "ಇವನು ನನ್ನ ಗಂಡ, ಇವಳು ನನ್ನ ಹೆಂಡತಿ ಇದಕ್ಕೆ ಮಾತನಾಡದ ಜೀವವಿರದ ಅಗ್ನಿ ಸಾಕ್ಷಿ" ಎಂದು ಹೇಳುವರು. ಅದಕ್ಕೆ ವಿ ವಾ ಹ ಎಂಬ ಹೆಸರು, ಆದಾದ ನಂತರ ಬೇಡವಾದರೂ ಗಾಂಧಾರಿಯಂತೆ ನೂರು

ಮಕ್ಕಳನ್ನು ಹಡೆಯಬೇಕು. ಏಕೆಂದರೆ ಗಂಡನಿಗೆ ಮಕ್ಕಳು ಬೇಡವಾದರೂ ಹೆಂಡತಿ ಬೇಕು. ಅದು ಅಪರಾಧವಲ್ಲ. ಏಕೆಂದರೆ ಪತಿ ಎನ್ನುವ ದೈತ್ಯ ಸರ್ವರಕ್ಷಕನೆಂದು ಇರುವ ದೇವನ ಹೆಸರಿನಲ್ಲಿ. ಅಲ್ಲವೆ.... ಸುಮಿತ್ರಾ....? ಆದರೆ ಜಗತ್ತಿನ ಮೂಲ ಎನ್ನುವ ಆಕಾಶದ ಕೆಳಗೆ ಒಬ್ಬ ತರುಣ ಇನ್ನೊಬ್ಬ ತರುಣಿಗೆ ವಿವಾಹಕ್ಕೆ ಒಪ್ಪಿಗೆ ಕೊಟ್ಟದ್ದು ವಿವಾಹವಲ್ಲವೇ.... ? ಏಕೆ....?

".... ಏಕೆ ? ಏಕೆ.... ? ... "

" .... ಅಗ್ನಿಗಿಂತ ಆಕಾಶ ಹಿರಿದಲ್ಲವೇ ? .... "

".... ನೀನು ನಿನ್ನ ಪ್ರಿಯಕರನನ್ನು ಪತಿ ಎಂದು ಒಪ್ಪಿಕೊಂಡಿರಲಿಲ್ಲವೆ? ನಿನ್ನವ ನಿನ್ನನ್ನು ಪತ್ನಿ ಎಂದು ಸ್ವೀಕರಿಸುವದಾಗಿ ವಚನ ಕೊಟ್ಟಿರಲಿಲ್ಲವೆ?"

"....ನಿಮ್ಮಿಬ್ಬರ ವಿವಾಹಕ್ಕೆ ಆಕಾಶ, ವಾಯು, ತೇಜ, ಅಲ್ಲದೆ ಜಗತ್ತನ್ನು ತುಂಬಿದ ಪರಮಾತ್ಮ ಸಾಕ್ಷಿಯಾಗಿಲ್ಲವೆ ? ನಿನ್ನ ಹೊಟ್ಟೆಯಲ್ಲಿಯ ಬೆಳೆಯುವ ಪಿಂಡ ನಿಮ್ಮ ಸಂಸಾರದ ವೃಕ್ಷಕ್ಕೆ ಬಿಟ್ಟ ಫಲವಾಗಿಲ್ಲವೆ........? ಅಂದ ಮೇಲೆ....?"

"ನಿನ್ನದು ಅಪರಾಧ ಹೇಗೆ.... ?"

" ನಾಲ್ಕು ಜನ ಕೂಡಿ ಕುಂಕುಮ ಸವರಿದ ಅಕ್ಕಿಕಾಳು ಚೆಲ್ಲಿದರೇನೆ ವಿವಾಹವೆ ? ಪರಮಾತ್ಮನ ಸಾಕ್ಷಿಯಾಗಿ ನಡೆದ ವಿಧಿಗೆ ವಿವಾಹವೆಂದು ಕರೆಯಲಾಗದೇ ?....ಮನುಷ್ಯರಿಗಿಂತ ಮನುಷ್ಯರನ್ನು ನಿರ್ಮಿಸಿದ ದೇವ ಕೀಳನೆ....? ಕ್ಷುಲ್ಲಕನೆ....?"

"....ದುಷ್ಯಂತನ ವಿವಾಹಕ್ಕೆ ಎಷ್ಟೊಂದು ಜನ ಎಷ್ಟೊಂದು ಚೀಲ ಅಕ್ಕಿಕಾಳನ್ನು ದುಷ್ಯಂತ ಶಕುಂತಲೆಯರ ಮೇಲೆ ಎಸೆದಿದ್ದರು....? ಆದರೆ ಕಣ್ವನಂತಹ ಮಹಾಮುನಿ ಮಹಾ ತಪಸ್ವಿಯೂ,ಕೂಡ ಆಶೀರ್ವಾದ ಮಾಡಿರಲಿಲ್ಲವೆ...? ಅವರ ವಿವಾಹಕ್ಕೆ ಸಾಕ್ಷಿ ಅನಂತ ಆಕಾಶ ಪ್ರಾಣಾಧಾರಕ ವಾಯು ಗಾಳಿ....ಚರಾಚರ ಸೃಷ್ಟಿಗೆಲ್ಲ ಕಣ್ಣು ಕೊಟ್ಟ ಪ್ರಕಾಶ...ಎಲ್ಲರಿಗೂ ಹೆಚ್ಚಾಗಿ ಸೃಷ್ಟಿಕರ್ತ...ಇವರೇ ಅಲ್ಲವೇ...?...ಅಂದಿನ ದುಷ್ಯಂತ ಶಕುಂತಲೆಯ ವಿವಾಹ ವೃಕ್ಷಕ್ಕೆ ಬಿಟ್ಟ ಫಲದ ಹೆಸರಿನಿಂದ ಅಭಿಮಾನಪೂರ್ವಕ

ಕರೆದುಕೊಳ್ಳುವ ದೇಶದಲ್ಲಿಯ ಜನಕ್ಕೆ ನೀನು ಪಾಪಿಯಾಗಿ ಕಂಡರೆ ಯಾರ ಕಣ್ಣಿನ ದೋಷ....? ಕಂಗಳು ದೋಷಿಯಾದರೆ ಚಿಕಿತ್ಸೆ ಬೇಡವೆ....?

"...ಸುಮಿತ್ರಾ....ಜನ ಕಣ್ಣು ತೆರೆದರೂ ಅಂಧರಾಗಿಯೇ ಉಳಿದಿದ್ದಾರೆ ತೆರೆದ ಕಂಗಳಿಂದ ನೋಡುವದು ಅವರಿಗೆ ಬೇಕಿಲ್ಲ ಅಂಥ ಜನಕ್ಕೆ ನೀನು ಪಾಪಿಯಾಗಿ ಕಂಡರೆ ಕಾಣುವವರ ಕಂಗಳಲ್ಲಿ ಪಾಪ ತುಂಬಿದೆ ಎಂಬ ಅರ್ಥ ಅಲ್ಲದೆ ನೀನು ಪಾಪಿ ಎಂದಲ್ಲ. ನೋಡುವವರಿಗೆ ನೀನು ಅಪರಾಧಿಯಾಗಿ ಕಂಡರೆ ನೋಡುವವರೇ ಅಪರಾಧಿಗಳು ಅಲ್ಲದೆ ನೀನಲ್ಲ.......

"... ಇನ್ನೊಬ್ಬರ ಮೇಲೆ ಗಂಡಾಂತರ ತರುವದು ಬೇರೊಬ್ಬರಿಗೆ ಕೇಡು ಬಗೆಯುವದು ಅಪರಾಧ. ಅಂತಹ ಅದಾವ ಕೆಲಸವೂ ನಿನ್ನಿಂದ ಆಗಿಲ್ಲ."

"... ಇದೀಗ ಕಣ್ಣು ತೆರೆದು ಜೀವನದಲ್ಲಿ ಕಾಲಿಡಬಯಸುವ ನಿಷ್ಪಾಪ ನಿನ್ನಂತಹ ಮಗುವಿನಿಂದ ಯಾರಿಗೆ ಕೆಡಕಾಗಬೇಕಾಗಿದೆ? ........ ಗಂಡು ಹೆಣ್ಣು ಒಂದಕ್ಕೊಂದು ಹೊಂದಿಕೊಂಡು ಬಾಳಬೇಕಾದುದು ನಿಸರ್ಗದ ನಿಯಮ. ಪರಮಾತ್ಮನ ನಿಯಮ ...ಅದಕ್ಕೆ ವಿರೋಧವಾಗಿ ವರ್ತಿಸುವದು ಅಪರಾಧ........"

" ಅಂತಹ ಅಪರಾಧ ನಿನ್ನಿಂದ ಘಟಿಸಿಲ್ಲ...."

"....ನೀನು ಅಪರಾಧಿಯಲ್ಲ...."

"....ನೀನು ಪಾಪಿಯಲ್ಲ......."

"....ನಿನಗೆ ಶಿಕ್ಷೆಯಾಗದು...ಎಂದೆಂದಿಗೂ 'ಆಗದು..."

ಎಂದು ಹೇಳುವ ಕಾಮಿನಿಯ ಮಾತನ್ನು ನಾನು ನಂಬಬಾರದೇಕೆ....?

ಸ್ತ್ರೀ ಪುರುಷರು ಹೊಂದಿಕೊಂಡು ಬಾಳಬೇಕು. ಅದು ನಿಸರ್ಗದ ನಿಯಮ, ಪರಮಾತ್ಮನ ನಿಯಮ. ಅವರು ಹೊಂದಿಕೊಂಡು ಬಾಳುತ್ತಿರಬೇಕು. ಒಬ್ಬರನ್ನೊಬ್ಬರು ಬಿಟ್ಟು ದೂರಾಗಬಾರದು ಎಂದು ಬಂಧಿಸುತ್ತಾರೆ ವಿವಾಹ ಬಂಧನದಲ್ಲಿ.

ಬಂಧಿಸುವದು ದೂರೋಡುವವರನ್ನು ಅಲ್ಲದೆ ಕೂಡಿ ಇರುವವರನ್ನಲ್ಲ. ಓಡಿ ಹೋಗುವವರಿಗೆ ಬಂಧನಬೇಕು. ಓಡಿ ಹೋಗುತ್ತಾರೆಂದು ಬಂಧನಬೇಕು. ನಾನು ದೂರ ಓಡಿ ಹೋಗುವದಿಲ್ಲ. ಅಂದ ಮೇಲೆ ನನಗೆ ಬಂಧನದ ಅವಶ್ಯಕತೆಯಿಲ್ಲ ಇದ್ದಿರಲಿಲ್ಲ.

ರಂಗನೂ ನನ್ನಂತಿದ್ದರೆ....?

ಆದರೆ ಅವೆಲ್ಲವೂ ಮುಗಿದು ಹೋಯಿತಲ್ಲ........ ಕಳೆದುಕೊಂಡದ್ದಕ್ಕಾಗಿ ಮರುಗಿದರೆ ಆಗುವದಾದರೂ ಏನು....?

ಒಂದು ವೇಳೆ ರಂಗನೇ ಬಂದರೆ......?

ರಂಗನು ಬಂದರೆ ..?

ಬಂದು ಕರೆದರೆ...?

ಕರೆದರೆ.......?

ಛೆ .......ಛೆ .. ....ಹೋಗಲಾಗದು...ಹೋಗಬಾರದು.

ಒಂದು ಸಲ ಮೋಸ ಮಾಡಿದವನು ಇನ್ನೊಂದು ಸಲ ಹಾಗೆ ಮಾಡಿದರೆ ?

ಹಾಗೆ ಮಾಡಲಿಕ್ಕಿಲ್ಲ...ತಿರುಗಿ ಕರೆಯಲು ಬಂದವನಲ್ಲ ತಾನು ಮಾಡಿದ ತಪ್ಪಿಗಾಗಿ ಪಶ್ಚಾತ್ತಾಪವಿರುತ್ತದೆ.

........ಹಂ.......ಹುಚ್ಚು.......ಹುಚ್ಚುತನ... ಹಸಿವಿಯಿಂದ ಕ್ಷೀಣವಾದ ಹುಲಿಯನ್ನು ನಂಬಬಹುದೆ ...?

ಕರೆದಾಗ ಅವನ ಜೊತೆಗೆ ಹೋಗದಿದ್ದರೆ ಮಾಡುವದಾದರೂ ಏನು? ಕುಲಕರ್ಣಿಯವರಲ್ಲಿ ಅವರಿಗೆ ಭಾರವಾಗಿ ಅದೆಷ್ಟು ದಿನಗಳವರೆಗೆ ಇರುವದು...?

ರಂಗ ತಾನಾಗಿ ಬಂದು ನಿನ್ನನ್ನು ವಿವಾಹಮಾಡಿಕೊಳ್ಳುತ್ತೇನೆಂದು ಹೇಳಿದರೆ........

ವಿವಾಹ ಮಾಡಿಕೊಂಡು ಅವನ ಜೊತೆಗೆ ಸಂಸಾರ ಸಾಗಿಸಲು ಅಭ್ಯಂತರವಾದರೂ ಏನು ?

ಆದರೆ....ಕಡಿದ ಮನ ಕೂಡಬಹುದೆ.......?

ಸ್ತ್ರೀಗೆ ' ಮನ ' ಎನ್ನುವದು ಇರುವದಾದರೂ ಎಲ್ಲಿ ? ಮಾಡಿಕೊಂಡವನು ಎಂತಹನೇ ಇರಲಿ ಅವನ ಜೊತೆಗೆ ಅವನ ರುಚಿಗನುರೂಪವಾಗಿ ವ್ಯವಹರಿಸಬೇಕು ಹಾಗೆ ವ್ಯವಹರಿಸುವ ಸ್ತ್ರೀಗೆ ' ಪತಿವೃತೆ ' ಎಂಬ ಬಿರುದು.

ರಂಗನು ಬಂದು ಕರೆದರೆ ಅವನ ಜೊತೆಗೆ ಹೋಗಬೇಕು ಅವನೊಡನೆ ಕೂಡಿಕೊಂಡು 'ಪತಿವೃತೆ'ಯಾಗಿ ಬದುಕಬೇಕು.

ಅದೊಂದೇ ದಾರಿ.

ಸ್ತ್ರೀಗೆ ಪತಿಯ ಜೊತೆಗೆ ಕೂಡಿಕೊಂಡು ಬಾಳುವದು ಒಂದೇ ಒಂದಾದ ಮಾರ್ಗ. ಮೊದಲು ನಾನು ನಿರ್ಧರಿಸಿದ್ದು ಕೂಡ ಅದನ್ನೆ.

ರಂಗನೊಡನೆ ಕೂಡಬೇಕು. ಅವನೊಡನೆ ತಿರುಗಾಡಬೇಕು. ಎಲ್ಲೆಲ್ಲಿಯೂ ಅವನೊಡನೆ ಕೂಡಿಕೊಂಡು ಒಂದಾಗಿ ಅಲೆಯಬೇಕು. ಸಂಸಾರ ನಾಗಿಸಬೇಕು. ಇದುವೆ ಅಲ್ಲವೆ ನಾನು ನಿರ್ಧರಿಸಿದ್ದು.

ಆದರೆ.......?

ಸ್ತ್ರೀಯ ನಿರ್ಧಾರ ಗಾಳಿಯಲ್ಲಿಯ ರವದೆ.

ಗಾಳಿಯಲ್ಲಿ ಹಾರುತ್ತ ಹೊರಟ ರವದೆ ಒಂದು ಕ್ಷಣವಾದರೂ ಒಂದೆಡೆಗೆ ಸ್ತಬ್ಧವಾಗಿ, ಸ್ಥಿರವಾಗಿ ನಿಲ್ಲಬಹುದು. ಆದರೆ ಅಂತಹ ಸ್ಥಿರತೆ ಸ್ತ್ರೀಗೆ ಅಸಾಧ್ಯ.

ಏಕೆಂದರೆ ಸ್ತ್ರೀ ಮನುಷ್ಯಳಲ್ಲ.
ಅವಳಿಗೆ ದೋಷವಿಲ್ಲ.
ಅವಳಿಗೆ ದೇಹವಿಲ್ಲ.
ಅವಳಿಗೆ ಮನವಿಲ್ಲ.
ಅಂತೆಯೇ ಅವಳಿಗೆ ಅಸ್ತಿತ್ವವಿಲ್ಲ.
ಅದ್ದರಿಂದ ಅವಳು ಮನುಷ್ಯಳಲ್ಲ.
ಮನುಷ್ಯರಲ್ಲದವರಿಗೆ ಸ್ಥಿರತೆ ಎಲ್ಲಿ ?

ನಾನೊಂದು ರಂಗನ ಕೈಗೆ ಸಿಕ್ಕ ಹುಲ್ಲುಕಡ್ಡಿಯಾಗಿದ್ದೆ.ಅದನ್ನು ಅವನು ಅರಿತೋ ಅರಿಯದೆಯೋ ನುಚ್ಚುನೂರು ಮಾಡಿ ತುಳಿದು ಹಾಕಿದ.

ಕೇಳಿದಾಗ ಹೇಳಿದ " ನನಗೇನೂ ಅರಿಯದು. "
ಅಂತಹನು ತಿರುಗಿ ನನ್ನನ್ನು ಕರೆಯಲು ಬರುವನೆ ?
ಬಂದರೂ ನಾನು ಹೋಗುವದು ಯೋಗ್ಯವೆ ?
ಹೋದರೂ ಇತಿಹಾಸ ಪುನರಾವೃತ್ತಿಯಾದರೆ.......?

ಅದಕ್ಕೆ ಸಂಶಯವೇ ಇಲ್ಲ. ನಿನ್ನಿಯದೂ ಇಂದು, ಇಂದಿನದೂ ಇಂದು ನಾಳೆಗೂ ಕೂಡ ಇಂದಿನದು ನಿನ್ನೆಯದು ಮುಂದುವರೆಯುವದು.

ಭಗವಂತ ಸರ್ವಜ್ಞ. ಅವನಿಗೆ ಅರಿಯದ್ದು ಇಲ್ಲ ಆದರೂ ಅವನ ಅವತಾರವಾದ ಶ್ರೀರಾಮಚಂದ್ರ ಮಾಡಿದ್ದೇನು ?

ಭಗವಂತನ ಅವತಾರವಾದ ರಾಮನಿಗೆ ಏನು ಹೇಳಲೂ ಹೆದರಿಕೆ. ನನಗೆ ಹೆದರಿಕೆ ಆದರೆ ಕಾಮಿನಿಗೆ ಅಂತಹ ಹೆದರಿಕೆ ಇಲ್ಲ ಅವಳು ನಿರ್ಭಯ ವಾಗಿ ಹೇಳುತ್ತಾಳೆ.

" ಸುಮಿತ್ರಾ ದೇವರಾಗಲಿ ಮನುಷ್ಯರಾಗಲಿ.... ಎಲ್ಲರೂ ಒಂದೇ ಎಲ್ಲರೂ ಪುರುಷರೆ.... ರಾಮಚಂದ್ರ ಭಗವಂತನ ಅವತಾರ ಇದ್ದಿರಬಹುದು ಅದಕ್ಕೆ ನಾನೂ ಇಲ್ಲವೆಂದು ಹೇಳುವದಿಲ್ಲ. ಆದರೆ ಆತನೂ ಪುರುಷ. ಅದಕ್ಕೆ ಅವನ ಕೃತಿಗಳೇ ಸಾಕ್ಷಿ.ಜನಕರಾಜನಂತಹ ಮಹಾ ಸಾಧುವಿನ ಹೊಟ್ಟೆ ಯಲ್ಲಿ ಜನ್ಮತಾಳಿದಳು ಸೀತೆ ಅವಳೂ ಮನುಷ್ಯಳಲ್ಲ. ಲಕ್ಷ್ಮಿ ಅವತಾರ. ಬೆಳೆ ದುದು ರಾಜಭವನದಲ್ಲಿ; ವಿವಾಹವಾದುದು ರಾಜಕುಮಾರನನ್ನು. ಬಿಸಿಲಿನ ಹೆಸರಿನಿಂದ ಕೂಡ ಮುಖಕಮಲ ಬಾಡುವಷ್ಟು ಸುಕೋಮಲೆ ಅವಳು. ಮೆತ್ತನೆಯ ರತ್ನಗಂಬಳಿಕೂಡ.ಅವಳ ಕಮಲದಂತಹ ಪಾದಗಳಿಗೆ ನೋವು ಮಾಡಿದ ಪಾಪಕ್ಕಾಗಿ ಮರಗುತ್ತ ದುಃಖದಿಂದ ನೆಲಕ್ಕೆ ಬಿದ್ದಿರುತ್ತಿದ್ದವು. ಅಂತಹ ರಾಜಕುಮಾರಿ ವೇಳೆ ಬಂದಾಗ ಎಲ್ಲವನ್ನೂ ತ್ಯಜಿಸಿ ಪತಿಯ ನೆರ ಳಾಗಿ ಕಠಿಣತೆಯ ರಾಕ್ಷಸೀ ರೂಪವಾದ ಕಲ್ಲು ಮುಳ್ಳನ್ನು ಕಮಲದಂತಹ ಕೋಮಲ ಪಾದಗಳಿಂದ 'ಉಶ್ಯ' 'ಅಯ್ಯೋ' ಎನ್ನದೆ ತುಳಿಯುತ್ತ ನಡೆದಳು.

ಆ ಸಾಧ್ವಿ ತನ್ನ ಜೀವವನ್ನೇ ಪತಿಯ ಪಾದದಲ್ಲಿ ಇಟ್ಟು ಹಗಲು ರಾತ್ರಿ ಪೂಜಿಸುವ ಮಹಾ ಪತಿವ್ರತೆ ರಾಕ್ಷಸನ ದವಡೆಯಲ್ಲಿ ಸಿಕ್ಕು ಕೊರಗಿದಳು; ಮರುಗಿದಳು. ಪತ್ನಿಯ ಬಿಡುಗಡೆ ತನ್ನ ಮಹಾಕರ್ತವ್ಯವೆಂದರಿತ ರಾಮ ಲಕ್ಷಾವಧಿ ಜನರ ನೆತ್ತರ ಹರಿಸಿ ತನ್ನ ಪತ್ನಿಯ ಬಿಡುಗಡೆ ಮಾಡಿದ.... ದೇವನೆನ್ನಿಸಿಕೊಂಡು ದೇವನ ಕರ್ತವ್ಯ ಮಾಡಿದ ದೇವನ ಅವತಾರ ರಾಮ ಕೊನೆಗೆ ಸಾಮಾನ್ಯ ಮನುಷ್ಯನಾದ. ತನ್ನ ಪತ್ನಿಯ ಸೀತೆಯ ಸಾಧ್ವಿಯ ಪಾತಿವ್ರತ್ಯದಲ್ಲಿ ಸಂಶಯ ತಾಳಿದ! ... ಆದರೆ ಅದರಿಂದ ಸೀತೆಗೆ ದುಃಖವಿಲ್ಲ. ಅವಳಿಗೆ ಕೆಡಕೆನ್ನಿಸಲಿಲ್ಲ ! ! ತನ್ನ ಪಾತಿವ್ರತ್ಯದ ಪತಾಕೆಯನ್ನು ಜಗದಲ್ಲಿ ಮೆರೆಸಲು ಅವಳು ನಗುನಗುತ್ತ ಭುಗಿಲ್ಲೆಂದು ಜಗವನ್ನೇ ದಹಿಸುವಂತೆ ತೂರಿಬರುತ್ತಿರುವ ಅಗ್ನಿಯನ್ನು ಪ್ರವೇಶಿಸಿದಳು.... ”

“.... ಅಗ್ನಿ ಶಾಂತವಾಯಿತು.... ”

“... ಪತಿಯ ಮನಸ್ಸು ಶಾಂತವಾಯಿತು ... ”

“ .... ಆದರೆ ಅದು ಕ್ಷಣಿಕ ...”

“ .... ಬೀದಿಯ ಜನರ ಮಾತು ಕೇಳಿ ತನಗಾಗಿ ತನ್ನ ಜೀವನವನ್ನೇ ಮೀಸಲಿಟ್ಟ ತನ್ನ ಜೀವದ ಜೀವವಾದ ಪತ್ನಿಯನ್ನು ದೂಡಿದ ರಾಮ; ಅದೂ ಕೂಡ ತುಂಬಿದ ಬಸಿರು ಇದ್ದಾಗ ... !

“.... ಸುಮಿತ್ರಾ ದೇವರೆಂದು ಹೊಗಳಿಸಿಕೊಳ್ಳುವ, ಪೂಜಿಸಿಕೊಳ್ಳುವ ರಾಮನ ಕತೆ ಇದು ಸೀತೆಯ ಅಪರಾಧವೇನು ...?

“ .... ಅದನ್ನು ರಾಮ, ನ್ಯಾಯನಿಷ್ಠುರನೆಂದು ಖ್ಯಾತಿವೆತ್ತ ರಾಮ ವಿಚಾರಿಸಲಿಲ್ಲ... ”

“ ... ರಾವಣನ ಸೆರೆಯಲ್ಲಿದ್ದುದು ಯಾರ ತಪ್ಪು ?.... ”

“ ... ಸೀತೆ ತಾನಾಗಿ ರಾವಣನ ಲಂಕೆಗೆ ಹಾರಿ ಹೋದಳೆ ? ಅಥವಾ ಬಲಾತ್ಕಾರದಿಂದ ಎಳೆದೊಯ್ಯಲಾಯಿತೇ ?... ”

“ ....ಬಲಾತ್ಕಾರದಿಂದ ಎಳೆದೊಯ್ಯಲಾಗಿದ್ದರೆ ಆ ತಪ್ಪು ಯಾರದು ?

" .... ಮಾಡಿಕೊಂಡ ಮಡದಿಯನ್ನು ಸಂರಕ್ಷಣೆ ಮಾಡದಿದ್ದ ತಪ್ಪು ಯಾರದು ?"

" ... ಅದು ರಾಮಚಂದ್ರನ ಅಪರಾಧ. ಅಡವಿಯಲ್ಲಿ ಒಬ್ಬಳನ್ನೇ ಬಿಟ್ಟು ಹೋದುದು ರಾಮಚಂದ್ರನ ಅಪರಾಧ.... "

".... ಅಪರಾಧ ರಾಮಚಂದ್ರನದಾದರೂ ಶಿಕ್ಷೆ ಮಾತ್ರ ಸೀತೆಗೆ .... "

".... ಏಕೆಂದರೆ ಅವಳು ಸ್ತ್ರೀ .... "

" ...ಸುಮಿತ್ರಾ ಹೀಗಿದೆ ಜಗದ ನೀತಿ ನ್ಯಾಯ.... "

" .... ಗಂಡಸು ದೇವನಿರಲಿ, ದೈತ್ಯನಿರಲಿ, ಮಾನವನಿರಲಿ ಅವನು ಗಂಡಸೆ. ಅವನು ಕಮಲ ಪತ್ರವಿದ್ದಂತೆ. ಅವನಿಗೆ ಯಾವ ಪಾಪವೂ ಅಂಟದು. ಎಲ್ಲ ಇದ್ದ ಬಿದ್ದ ಪಾಪಗಳು ಸ್ತ್ರೀಗಾಗಿ ನಿರ್ಮಿತ. ಅವು ಜೇಡನ ಎಳೆಯಂತೆ ಅವಳನ್ನು ಸುತ್ತುತ್ತಿವೆ. ಸುತ್ತಿ ಸುತ್ತಿ ಅವಳ ಕೊಲೆ ಮಾಡುತ್ತವೆ..."

" .... ಸುಮಿತ್ರ ನಿನ್ನ ತಪ್ಪು ಏನೂ ಇಲ್ಲ. ಆದರೂ ನೀನು ಅಪ ರಾಧಿ ಪಾಪಿ ಹೀಗಿದೆ ಜಗತ್ತು. ಇಂತಹ ಜಗದಲ್ಲಿ ಸ್ತ್ರೀಯಾಗಿ ಜನ್ಮ ತಾಳಬಾರದು. "

"...ಸ್ತ್ರೀಯಾಗಿ ಬಾಳಬಾರದು...."

" ಒಂದು ವೇಳೆ ಸ್ತ್ರೀಯಾಗುವದೇ ಆದರೆ ಯಾವುದಾದರೊಂದು ಅದ್ಭುತ ಚಮತ್ಕಾರದಿಂದ ಗರ್ಭ ಧರಿಸುವವ ಪುರುಷನಾಗಬೇಕು. ಗರ್ಭ ಧಾರಣೆಯ ಕೆಲಸವನ್ನು ಗಂಡಸಿನಪಾಲಿಗೆ ಕೊಡಬೇಕು...ಆಗ ತಿಳಿಯು ವದು ಇವರ ಉನ್ಮತ್ತತೆ...ಇವರ ಪಾಪ ಪುಣ್ಯ..."

"....ಅಂತಹ ದಿನ ಒದಗಿದರೆ ಸಾವಿರ ಜನರನ್ನು ಸಾಲು ನಿಲ್ಲಿಸಿ 'ಥೂ' ಎಂದು ಹೇಳುವೆ....ನನ್ನ ದ್ವೇಷದ ಜ್ವಾಲೆ ಶಾಂತವಾಗಬೇಕಾದರೆ ಅಂತಹ ಸುದಿನ ಒದಗಿ ಬರಬೇಕು. "

"....ಸೀತೆ ರಾಮನ ಪತಿಯಾಗುವ ದಿನ ನನಗೆ ಬೇಕಾಗಿದೆ..."

ಹೀಗೆಲ್ಲ ಕಾಮಿನಿ ಹೇಳಿ ಹೊಟ್ಟೆಯಲ್ಲಿ ಅಡಗಿದ ವಿಷವನ್ನು ಹೊರಕ್ಕೆ ಕೆಡವುತ್ತಾಳೆ.

ಅವಳ ವಿಚಾರವನ್ನೆಲ್ಲ ಕೇಳಿದಾಗ ನನಗೆಕೂಡ ನನ್ನಕೆಲಸ ಪಾಪವಲ್ಲ ಎನ್ನಿಸುತ್ತದೆ.

ನಾನು ಪಾಪ ಮಾಡಿರದಿದ್ದರೂ ಪಾಪಿಯಾಗಿ ಬಾಳಬೇಕಾಗಿದೆ. ಅಲ್ಲದೆ ನಾನು ಬಾಳುತ್ತಿರುವದೂ ಕೂಡ ಇನ್ನೊಬ್ಬರ ಕೃಪೆಯಿಂದ.

ಕುಲಕರ್ಣಿಯವರ ಕೃಪೆಯಿಂದ.

ಅವರ ಕೃಪೆಯ ಭಂಡಾರವನ್ನು ಎಲ್ಲಿಯ ವರೆಗೆ ಬಳಸುತ್ತ ಕುಳಿತು ಕೊಳ್ಳುವದು...? ಅವರು ಯಾರು ನನಗೆ...?

ಅವರು ಯಾರು...?
ನನಗೆ ಅವರು ಏನಾಗಬೇಕು....?
ಏನೂ ಅಲ್ಲ....ಯಾರೂ ಅಲ್ಲ...
ಯಾರೂ....ಅಲ್ಲ....!
ಈ ಮಾತನ್ನು ನಾನು ನಂಬುತ್ತೇನೆ.
ಈ ಮಾತನ್ನು ಕುಲಕರ್ಣಿ ನಂಬುತ್ತಾರೆ.
ಆದರೆ ಜಗ ಈ ಮಾತಿನಲ್ಲಿ ವಿಶ್ವಾಸ ತಾಳಬಾರದು.
ಒಂದೇ ಕೋಣೆ....
ಒಬ್ಬ ತರುಣಿ.
ಇನ್ನೊಬ್ಬ ತರುಣ...
ಆ ತರುಣಿ....ಬಸಿರು....

ನಾನು ಆ ತರುಣಿ ಇದ್ದಿರದೆ ಬೇರೆ ಸ್ತ್ರೀ ತರುಣಿಯಾಗಿದ್ದರೆ ನಾನೂ ಕೂಡ ನಂಬುತ್ತಿರಲಿಲ್ಲ. ‘ ಅವರು ಯಾರೂ ಅಲ್ಲ ’ ಎನ್ನುವದನ್ನುಯಾರೂ ನಂಬುವದಿಲ್ಲ ಅಂತಹ ಮಾತಿನಲ್ಲಿ ಯಾರೂ ವಿಶ್ವಾಸವಿಡಲಾರರು

ವಿಶ್ವಾಸವಿಡುವದಾದರೂ ಹೇಗೆ...?

ಯಾವ ತರದ ಬಾಂಧವ್ಯ ವಿಲ್ಲದೆ ತರುಣ ತರುಣಿಯರು ಒಂದೆಡೆ ಯಲ್ಲಿ ನೆಲೆಸಿರುವದು ಸಾಧ್ಯವೆ....? ನೆಲೆಸಿದ್ದರೆ.......ಅವರಲ್ಲಿ ಯಾವ ದೊಂದು ರೀತಿಯಲ್ಲಿ ಬಾಂಧವ್ಯ ಇದ್ದಿರಬೇಕು.

ಅಥವಾ ಯಾವುದೊಂದು ಬಾಂಧವ್ಯದ ಪೂರ್ವ ಪೀಡಿಕೆಯಾಗಿರ ಬೇಕು. ಬರಲಿರುವ ಬಾಂಧವ್ಯದ ' ಸೂತೋವಾಚ 'ವಾಗಿದ್ದಿರಬಹುದು.

ಅಂದರೆ....?

ಅದರ ಅರ್ಥವು ಅದೇ.

ನನ್ನ ಕುಲಕರ್ಣಿಯವರ ನಡುವೆ ಇಂದಿನ ವರೆಗೆ ಅದಾವ ರೀತಿಯ ಲ್ಲಿಯೂ ಸ್ನೇಹ, ಆಪ್ತತ್ವ ಬೆಳೆದು ಬಂದಿಲ್ಲ.

ಅನಾಥಳಾಗಿ ಹೊರಟಿದ್ದ ನನ್ನನ್ನು ಕರೆದು ಅವರು ಆಶ್ರಯಕೊಟ್ಟರು. ತಮ್ಮ ಮನೆಯಲ್ಲಿ.

ಅವರ ಮನೆ ಅನಾಥಾಶ್ರಮವಲ್ಲ–ಕಂಡವರಿಗೆ ಆಶ್ರಯಕೊಡಲು.

ಆದರೂ ಅನಾಥಳಾದ ನನಗೆ ಆಶ್ರಯ ಕೊಟ್ಟರು.

ಏಕೆ....?

ಇನ್ನೊಬ್ಬರ ಹೃದಯದಲ್ಲಿ ಅಡಗಿರುವದನ್ನು ಕಂಡು ಹಿಡಿಯುವಷ್ಟು ಜಾಣಳು ನಾನಲ್ಲ. ಆ ಶಕ್ತಿ ನನ್ನಲ್ಲಿ ಇಲ್ಲ.

ಅಂತಹ ಶಕ್ತಿ ನನ್ನಲ್ಲಿ ಇದ್ದರೆ... ?

ಇದ್ದಿದ್ದರೆ.......? ಇದ್ದಿದ್ದರೆ....?

ನಾನಿಂದು ಕುಲಕರ್ಣಿಯವರ ಆಶ್ರಯದಲ್ಲಿ ಪಾಪದ ಹೊರೆ ಹೊತ್ತು ಕೊಂಡು ಮುಖ ತಗ್ಗಿಸಿ ಬಾಳುತ್ತಿರಲಿಲ್ಲ.

ರಂಗನ ಸವಿಮಾತಿನ ಹಿಂದೆ ಅಡಗಿದ ಅತನ ರಾಕ್ಷಸೀ ಹೃದಯವನ್ನು ಅರಿತುಕೊಂಡು ಅವನಿಂದ ದೂರಿರುತ್ತಿದ್ದೆ. ಹೆತ್ತ ಹೊಣೆ ಇಳಿಸಲೆಂದು ತಂದೆ ಯಾರೊಬ್ಬರ ಕೊರಳಿಗೆ ನನ್ನನ್ನು ಕಟ್ಟುತ್ತಿದ್ದ. ಆವ ಎಂತಹನೇ ಇರಲಿ

ಅವ ನನ್ನ ಪತಿ. ನನ್ನ ಪಾಲಿನ ದೇವರು. ಅವನೊಂದಿಗೆ ನನ್ನ ಜೀವನ ಸುಖದಿಂದ ಸಾಗುತ್ತಿತ್ತು.

ಸುಖದಿಂದ ?

ಅಹುದು ಸುಖದಿಂದ.

ಯಾರೂ ಬೆರಳು ಮಾಡಿ ತೋರದ ಹೆಂಗಸು ನಾನಾಗಿರುತ್ತಿದ್ದೆ. ಅಂದು ಈ ಜಗದಲ್ಲಿ ಬೆರಳುಮಾಡಿ ತೋರಿಸಿಕೊಳ್ಳದ ಸ್ತ್ರೀ ಸುಖಿ.

ಅಂತಹ ಸುಖಕ್ಕೆ ಸಮಾನವಾದುದು ಇನ್ನಾವುದೂ ಇಲ್ಲ.

ಮಾಡಿಕೊಂಡವನ ಕೈಹಿಡಿದು ಅವನ ನೆರಳನ್ನು ಹಿಂಬಾಲಿಸಿ ನಡೆದು ಅವನನ್ನು ಸಂತುಷ್ಟ ಗೊಳಿಸಿದರಾಯಿತು ಅವನು ಸಂತುಷ್ಟನಾಗಿದ್ದರೆ ನಾನೂ ಸಂತುಷ್ಟಳು. ನಮ್ಮಿಬ್ಬರ ಸಂತುಷ್ಟತೆಯೇ ಮನೆಯ ಸಂತುಷ್ಟತೆ. ಅದುವೇ ಸುಖ.

ಸಂಸಾರದ ಕಷ್ಟ-ನಷ್ಟಗಳು ಯಾರನ್ನೂ ಅಸುಖಿ ಮಾಡುವದಿಲ್ಲ. ಸಂಸಾರ ಎಂದಾಗ ಅಲ್ಲಿ ದುಃಖವಿದೆ. ಅಲ್ಲಿ ಕಷ್ಟವಿದೆ. ಅಲ್ಲಿ ಕಾರ್ಪಣ್ಯವಿದೆ, ಕಠಿಣತೆಯಿದೆ. ಅವೆಲ್ಲವುಗಳನ್ನು ಸಹಜತೆಯಿಂದ ದಾಟಿಗೊಂಡು ಹೋದಾಗ ಹೋಗಿ ಹಿಂದಿರುಗಿ ನೋಡಿದಾಗ ದೊರಕುವದು ಆನಂದ. ಸುಖ... "

ಅದುವೇ ನಿಜವಾದ ಆನಂದ.

ಅಂತಹ ಆನಂದ ದೊರಕುತ್ತಿತ್ತು ನಾನೂ ಜಾಣಳಾಗಿದ್ದರೆ. ಇನ್ನೊಬ್ಬರ ಹೃದಯದಲ್ಲಿ ಅಡಗಿದ್ದನ್ನು ಕಂಡು ಹಿಡಿಯುವ ಶಕ್ತಿ ನನ್ನಲ್ಲಿದ್ದರೆ ಅಂತಹ ಆನಂದ ತಾನಾಗಿ ಸಮುದ್ರದ ತೆರೆ ದಡಕ್ಕೆ ಅಪ್ಪಳಿಸುವಂತೆ ನನ್ನ ಕಾಲಿಗೆ ಅಪ್ಪಳಿಸುತ್ತಿತ್ತು. ಅಪ್ಪುತ್ತಿತ್ತು!

ಆದರೆ ...?

ಆದರೆ ಇಂದು ಎಲ್ಲವನ್ನೂ ಎಂದೆಂದಿಗೂ ದೊರಕದಂತೆ ಕಳೆದು ಕೊಂಡು ಕಂಡವರಲ್ಲಿ ಅನ್ನಕ್ಕಾಗಿ ಬಿದ್ದಿರುವೆ ಮನೆಯ ಮುಂದಿನ ನಾಯಿಯಂತೆ.

ಅಲ್ಲಿ... ನಾಯಿಗಿಂತ ಕೀಳಾಗಿ.

ಎಂಜಲಕ್ಕಾಗಿ ಕಾದು ಕುಳಿತ ನಾಯಿಗೆ ಹೆಸರಿಡುವದಿಲ್ಲ ಯಾರೂ. ಬೀದಿಯ ನಾಯಿಯ ಬದುಕು ಧರ್ಮದ ಎಂಜಲ ಕೂಳಿನಿಂದ. ಕಾಯುತ್ತ ಕುಳಿತರೇನೇ ಅದಕ್ಕೆ ದೊರಕುವದು ಅನ್ನ. ಅದುವೇ ಅದರ ಕರ್ಮ. ಅಥವಾ ಕರ್ಮಕ್ಕೆ ದೊರೆತ ಫಲ.

ಆದರೆ ಸ್ತ್ರೀ. ಅದರಲ್ಲಿಯೂ ತರುಣಿ ಹಾಗಲ್ಲ.

ತರುಣಿ ನಾಯಿಯಲ್ಲ ಹೆಂಗಸು.

ಹೆಂಗಸಿಗೆ ದೊರಕುವದು ಧರ್ಮದ ಅನ್ನವಲ್ಲ. ಕರ್ಮದ ಫಲ. ಹೆಂಗಸಿಗೆ ಧರ್ಮದ ಅನ್ನ ದೊರಕುವದು ಅವಳು ಸ್ತ್ರೀತ್ವವನ್ನು ಕಳೆದುಕೊಂಡಾಗ. ವೃದ್ಧೆಯಾದಾಗ. ಅವಳಲ್ಲಿ ಸ್ತ್ರೀತ್ವ ಇರುವವರೆಗೆ ಅವಳಿಗೆ ಸಿಕ್ಕುತ್ತಿರುವದು ಕರ್ಮದ ಫಲ.

ಕರ್ಮದ ಫಲ.... !

ಕರ್ಮಕ್ಕೆ ದೊರಕುವ ಫಲ. ಧರ್ಮಕ್ಕಾಗಿ ದೊರಕುವ ಫಲ...ಅನ್ನ ಹಾಗಾದರೆ... ನನ್ನ ಅದಾವ ಕರ್ಮಕ್ಕೆಂದು ಕುಲಕರ್ಣಿಯವರು ಅನ್ನವನ್ನು ಹಾಕುತ್ತಿರುವದು ?

“ ಇಲ್ಲ— ಸುಮಿತ್ರಾ ನಾನು ನಿನಗೆ ಅನ್ನ ಹಾಕುತ್ತಿರುವದಿಲ್ಲ. ನೀನು ತಿನ್ನುತ್ತಿರುವದು ನಿನ್ನ ಅನ್ನ. ಅದು ನನ್ನದೆಂದು ಹೇಳಲು ನಾನು ಯಾರು? ನಿನಗೆ ಅನ್ನವನ್ನು ಹಾಕಲು ನಾನು ಯಾರು ? ಹಾಗೆ ಯಾರಾದರೂ ಹೇಳಿಕೊಳ್ಳುತ್ತಿದ್ದರೆ ಅವರು ಅನ್ಯಾಯ ಮಾಡುತ್ತಿರುವರು. ಪಾಪವನ್ನು ಆಚರಿಸುತ್ತಿರುವರು. ಈ ಜಗದಲ್ಲಿ ಯಾರು ಯಾರಿಗೂ ಅನ್ನಹಾಕರು. ಮನುಷ್ಯ ಜನ್ಮ ತಾಳುವಾಗ ತನ್ನ ಅನ್ನವನ್ನು ತನ್ನ ಉಡಿಯಲ್ಲಿ ಕಟ್ಟಿಕೊಂಡು ಬರುತ್ತಾನೆ ತನ್ನ ಪೂರ್ವ ಜನ್ಮದ ಕರ್ಮ ಭೋಗಗಳಿಗನುಸರಿಸಿ. ಅದನ್ನು ಅಲ್ಲಿ ಇಲ್ಲಿ ಎಲ್ಲಿಯಾದರೂ ಕುಳಿತುಕೊಂಡು ತಿನ್ನುವದು. ಯಾರೂ ಯಾರಿಗೂ ಕೊಡುವದೂ ಇಲ್ಲ. ಯಾರಿಂದ ಯಾರೂ ಅಪೇಕ್ಷಿಸಲೂ ಬೇಕಿಲ್ಲ....... ಸುಮಿತ್ರಾ.... ‘ ನೀವು ದಾರಿಯಲ್ಲಿ ಸಿಕ್ಕುವದು ’ ಎಂದು ಬೀದಿಯಲ್ಲಿ ಸಿಕ್ಕ ದುಡ್ಡನ್ನು ಎತ್ತಿ ತರುವಂತೆ ನಿಮ್ಮನ್ನು ನಾನು ಎತ್ತಿ ತಂದಿಲ್ಲ.... ಅದಾವುದೊ

ಪೂರ್ವ ಜನ್ಮದ ಸಂಬಂಧ ನನ್ನ ನಿಮ್ಮನ್ನು ಒಂದೆಡೆಗೆ ಕೂಡಿಸಿದೆ... ಅದು ಇಲ್ಲವೆಂದು ಹೇಳಲಿಕ್ಕಾದೀತೆ ? ... ನಾವು ನಿತ್ಯ ಅದೆಷ್ಟು ಜನರನ್ನು ಕಾಣುವ ದಿಲ್ಲ ? ಕಂಡವರೆಲ್ಲರನ್ನೂ ನಾನು ಅಥವಾ ನಾವು ಕರೆದುಕೊಂಡು ಬಂದು ಆದರಿಸುವೆವೆ ? "

" ....ಇಲ್ಲ....ಹಾಗೆಂದಿಗೂ ಆಗದು....ಯಾರೊಬ್ಬರ ಜೊತೆಗೆ ಸ್ನೇಹ ಮಾಡಬೇಕಾದರೆ— ಸ್ನೇಹ ಬೆಳೆಯಬೇಕಾದರೆ ಪೂರ್ವ ಜನ್ಮದ ಸಂಬಂಧ ಇದ್ದಿರಲೇಬೇಕು...."

" ನನ್ನ ವಿಚಾರವನ್ನು ನೀವು ಒಪ್ಪುತ್ತಿರಲಿಕ್ಕಿಲ್ಲ . ಆದರೆ....ಜೀವನದ ಹಲವು ರೀತಿ ನೀತಿಗಳನ್ನು ಕಂಡಾಗ ಅವೆಲ್ಲವುಗಳ ವಿಷಯಕ್ಕೆ ಮನದಲ್ಲಿ ಬರುವ ವಿಚಾರ......."

" .. ನಾವು ಯಾರೊಬ್ಬರನ್ನು ಕಂಡಕೂಡಲೇ ಅವರ ವಿಷಯಕ್ಕೆ ಆದರ ನಮ್ಮ ಮನದಲ್ಲಿ ಮೂಡುವದು...."

"...ಯಾರೊಬ್ಬರನ್ನು ನೋಡಿದಕೂಡಲೇ ಮುಖ ಕಿವಿಚಿಕೊಳ್ಳು ವೆವು...."

" ಏಕೆ..."

" ನಮಗೆ ಯಾರ ಪರಿಚಯವೂ ಇರುವದಿಲ್ಲ, ಪ್ರಥಮ ದರ್ಶನದ ಲ್ಲಿಯೇ ಅಂತಹ ಭಾವನೆಗಳು ಮನುಷ್ಯನ ಮನದಲ್ಲಿ ಮೂಡುವದಕ್ಕೆ ಕಾರ ಣವೇನು ? ಯಾರೊಬ್ಬರ ಗುಣಾವಗುಣಗಳನ್ನು ಅರಿತು ನೋಡುವ ಮೊದಲೇ— ಅಳೆದು ನೋಡುವ ಮೊದಲೇ ನಮ್ಮಲ್ಲಿ ಪ್ರೀತಿ ದ್ವೇಷಗಳು ಮೂಡುವದೇಕೆ ?"

" ...ಏಕೆ ... ? "

" .... ಹಾಗೆ ಪ್ರಥಮದರ್ಶನದಲ್ಲಿ ಅಂತಹ ಭಾವನೆ ಮೂಡುವದಿಲ್ಲ ವೆಂದು ಯಾರೂ ಹೇಳಲಾರರು. ಹಾಗೆ ಯಾರಾದರೂ ಹೇಳುತ್ತಿದ್ದರೆ— ಅವರು ಸಂಸ್ಕೃತ ಕವಿಗಳು ಹೇಳುವಂತೆ ' ಅವರು ಪಶುವಾಗಿರಬೇಕು, ಇಲ್ಲ ದಿದ್ದರೆ ಪಶುಪತಿಯಾದರೂ ಇದ್ದಿರಬೇಕು.'.... ಇಲ್ಲ... ದೇವ ಕೂಡ ಹಾಗೆ

ಹೇಳಲಾರ. ಆತನಿಗೂ ಕೆಲವರನ್ನು-ಭಕ್ತರನ್ನು-ಕಂಡರೆ ಪ್ರೀತಿ... ಭಕ್ತರಲ್ಲ ದವರಿಗಾಗಿ ಆವನಲ್ಲಿ ದ್ವೇಷವಿರಲಿಕ್ಕಿಲ್ಲ. ಆದರೆ ಪ್ರೀತಿಯಂತೂ ನಿಶ್ಚಯ ವಾಗಿ ಇರುವದಿಲ್ಲ.?

" ದ್ವೇಷಿಸದೆ ಇರುವದು ದೇವನ ಹಿರಿತನ. ಯಾರನ್ನೂ ದ್ವೇಷಿಸದೆ ಇರುವದು ದೇವತ್ವದ ಲಕ್ಷಣ.... "

" ಆದರೆ ನಾವು ಸಾಮಾನ್ಯರು. ನಮ್ಮಲ್ಲಿ ರಾಗ ದ್ವೇಷಗಳಿವೆ. ಅಂತೆಯೇ ಯಾರೊಬ್ಬರನ್ನು ಕಂಡ ಕೂಡಲೇ ದ್ವೇಷಿಸುವೆವು.... ಯಾರೋ ಒಬ್ಬರಿಗಾಗಿ ನಮ್ಮ ಮನದಲ್ಲಿ ಆದರ ಮೂಡುವದು..."

" ಏಕೆ....? "

" ಸುಮಿತ್ರಾ... ಇದನ್ನು ಅದೆಷ್ಟು ಬಗೆಯಾಗಿ ವಿಚಾರಿಸಿದರೂ ಆದಕ್ಕೆ ಎದುರಿರುವ ಜಗತ್ತಿನಲ್ಲಿ ಉತ್ತರ ಸಿಕ್ಕುವದಿಲ್ಲ. ಬುದ್ಧಿಯ ಕಸರತ್ತಿಗೆ ಕಸು ವಿಗೆ ವಿಚಾರದ ಉಕ್ಕು ಮಣಿಯುವದಿಲ್ಲ.— ಅದಕ್ಕೆ ನಾವು ...ಹಿರಿಯರು ಜ್ಞಾನಿಗಳು ಹೇಳಿದ ಮಾತನ್ನು ನಂಬಬೇಕು....ಅವರ ಮಾತಿನಲ್ಲಿ ವಿಶ್ವಾಸ ವಿಡಬೇಕು.... "

" .... ನಾವು ಯಾರೊಬ್ಬರನ್ನು ಪ್ರೀತಿಸಬೇಕಾದರೆ ಪ್ರೀತಿಸಿಗೊಳ್ಳುವ ವ್ಯಕ್ತಿ ಸದ್ಗುಣಿಯಾಗಿರಬೇಕು... "

" ನಮ್ಮಿಂದ ದ್ವೇಷಿಸಿಕೊಳ್ಳಲ್ಪಡುವ ವ್ಯಕ್ತಿ ದುರ್ಗುಣಿಯಾಗಿರಬೇಕು"

" ನಮ್ಮ ಪ್ರೀತಿ - ದ್ವೇಷ ವ್ಯಕ್ತಿಯ ಸದ್ಗುಣ ದುರ್ಗುಣಗಳಿಗೆ ಸಂಬಂಧಿತವಾಗಿರುತ್ತವೆ.... ಆದರೂ... "

" ಆದರೂ ಕೆಲವೊಂದು ಸಲ ನಾವು ದುರ್ಗುಣಿಯನ್ನೂ ಪ್ರೀತಿಸುವ ದುಂಟು "

" ಏಕೆ ? "

" ಆದಕ್ಕೆ ಉತ್ತರ 'ಇದು' ಎಂದು ತೋರಿಸಲು ಸಾಧ್ಯವಿಲ್ಲ. "

" ಆದರೆ 'ಪೂರ್ವ ಜನ್ಮದ ಋಣಾನುಬಂಧ' ಎಂದು ಹೇಳಿದರೆ ಅದನ್ನು ಅಲ್ಲಗಳೆಯುವ ಧೈರ್ಯ ಯಾರಿಗೂ ಆಗದು "

" ಏಕೆಂದರೆ ಅದಕ್ಕೆ ಅದಲ್ಲದೆ ಬೇರೆ ಯಾವ ಉತ್ತರವೂ ಇಲ್ಲ."

" ಅದುವೆ ಉತ್ತರ ಸುಮಿತ್ರಾ.... ನನ್ನ ನಿನ್ನ ಸಂಬಂಧಕ್ಕೆ"

" ....ಇದನ್ನು ಯಾರಾದರೂ ಒಪ್ಪಬಹುದೇ ? ನಂಬಬಹುದೇ ? ಎನ್ನುವ ವಿಚಾರವನ್ನು ನಾವು ಮಾಡುವದು ಹುಚ್ಚುತನ ...."

".... ಏಕೆಂದರೆ ಇನ್ನೊಬ್ಬರನ್ನು ಒಪ್ಪಿಸುವದು ಎಂದಿಗೂ ಸಾಧ್ಯವಿಲ್ಲ ಈ ಜಗದಲ್ಲಿ...."

" .... ಪ್ರತಿಯೊಬ್ಬನ ಜ್ಞಾನ ಚಕ್ಷುವಿನ ಮೇಲೆ ಕಪ್ಪು ಪರದೆ ಇದೆ ಆ ಕಪ್ಪು ಹರಿದು ಹಾಕಿ ಜಗವನ್ನು ನೋಡುವವರೆಗೆ ಜಗದಲ್ಲಿಯ ಸತ್ಯ ವಸ್ತುವು ಅವನ ಕಂಗಳಿಗೆ ಬೀಳದು. ಈ ಜಗದಲ್ಲಿ ಯಾರೂ ಕೆಟ್ಟ ಪ್ರಾಣಿ ಗಳಿಲ್ಲ. ....ಆದರೂ ಪ್ರತಿಯೊಬ್ಬರೂ ಅಜ್ಞಾನದಲ್ಲಿ ಮುಳುಗಿದ್ದರಿಂದ ಅವರಿಗೆ ಒಳ್ಳೆಯ ಕಾರ್ಯದ ಕಡೆಗೆ ವಿಚಾರ ಹರಿಯಲಾರದು. ಅವರು ಯಾವುದನು ಕಂಡರೂ ಅವರಿಗೆ ಕಾಣುವದು ಕೆಡಕು. ಏಕೆಂದರೆ ಅದು ಅವರ ಆ ವ್ಯಕ್ತಿಯ ಅಜ್ಞಾನದ ಫಲ...."

" ....ಅಜ್ಞಾನ ಅಳಿದು ಹೋಗಬೇಕು...."

"...ಕತ್ತಲೆ ಇಲ್ಲದಾಗಬೇಕು..."

" ... ಅಜ್ಞಾನ ಅಳಿದು ಹೋಗುವದಕ್ಕೆ ಜ್ಞಾನದ ಉದಯನಾಗ ಬೇಕು "

" ಕತ್ತಲೆ ದೂರಾಗುವದಕ್ಕೆ ಸೂರ್ಯನ ಉದಯವಾಗಬೇಕು. "

" ಅದೆಂದಿಗೂ ಅಸಾಧ್ಯ ಎಂದು ಹಲವರ ವಾದ...."

" ... ಆದರೆ 'ನಾವು ಕತ್ತಲೆಯಲ್ಲಿರುವೆವು' ಎನ್ನುವದರ ಅರಿವು ಪೂರ್ಣ ಅರಿವು ನಮಗಾದ ಕ್ಷಣದಿಂದಲೇ ನಾವು ಬೆಳಕಿನ ಕಿರಣಗಳನ್ನು ಕಾಣಲು ಆರಂಭಿಸುವೆವು. "

" ...ಏಕೆಂದರೆ 'ಕತ್ತಲೆ' ಅಜ್ಞಾನ "

' ಕತ್ತ[illegible]ವೆವು ' ಎನ್ನುವದನ್ನು ಅರಿತುಕೊಳ್ಳುವದೇ ಜ್ಞಾನ"

ಕುಲಕರ್ಣಿಯವರ ಇಂತಹ ವಿಚಾರಗಳ ಅರ್ಥ ನನಗಾಗುತ್ತಲೇ ಇರುತ್ತಿರಲಿಲ್ಲ.

ಆದರೆ ಅವರ ಮಾತು ಕೇಳಿದ ನಂತರ ಒಂದು ತರದ ಶಾಂತಿ ದೊರ ಕುತ್ತಿತ್ತು. ನನ್ನ ಮನದಲ್ಲಿಯ ಹಲವು ವಿಚಾರಗಳ ಯುದ್ಧಕ್ಕೆ ವಿರಾಮ ಸಿಕ್ಕುತ್ತಿತ್ತು. ಕೋಲಾಹಲ ಕೆಲವು ವೇಳೆಯವರೆಗಾದರೂ ತಡೆಯುತ್ತಿತ್ತು.

ಆದರೂ ಅನಿಸುತ್ತಿತ್ತು ನಾನು ಕುಲಕರ್ಣಿಯವರಿಗೆ ಭಾರವಾಗಿರುವೆ ನೆಂದು.

ಅವರೇನೋ ಹೇಳುತ್ತಿದ್ದರು, ನಾನು ಅನ್ನ ಹಾಕುವದಿಲ್ಲ ಎಂದು.

ಅದು ಅವರ ಔದಾರ್ಯ.

ಆದರೆ ಹಾಗೆ ಅವರಾಡುವದು ಅಸತ್ಯವಲ್ಲವೆ ?

ಅವರು ಹೇಳುವದನ್ನು ನಾನು ಒಪ್ಪಿಕೊಳ್ಳಬೇಕೆ ?

ಒಪ್ಪಿಕೊಂಡರೆ ನಾನು ಕೃತಘ್ನ ಯಾಗುವದಿಲ್ಲವೇ ?

ನಾನು ತಿನ್ನುವ ಅನ್ನ ಅವರ ಬೆವರಿನಿಂದ ಬಂದುದು. ಆದರೆ ಅದು ನನ್ನದು ಎಂದರೆ ಹೇಗೆ ? ಭಗವಂತನು ಅದನ್ನು ಒಪ್ಪಬಹುದೇ ? ಭಗ ವಂತನೇಕೆ — ನನ್ನ ಮನವಾದರೂ ಅದನ್ನು ನಂಬಬಹುದೆ ?

ಕುಲಕರ್ಣಿ ಯಾರು ನನಗೆ ?

ಹೆತ್ತ ತಂದೆಯೇ ಮನೆಯಿಂದ ದೂಡಿದಾಗ ದೇವರಂತೆ ಧಾವಿಸಿ ಬಂದ ಕುಲಕರ್ಣಿಯವರು ನನ್ನ ಪಾಲಿಗೆ ದೇವರಲ್ಲವೆ....?

ಅವರು ದೇವರು... ಅಹುದು.

ಅವರು ಮನುಷ್ಯರಲ್ಲ... ದೇವರು.

ಮನುಷ್ಯರಲ್ಲಿಯ ಯಾವ ಗುಣಗಳೂ ಅವರಲ್ಲಿಲ್ಲ. ಯಾವ ಸ್ವಾರ್ಥವೂ ಅವರಿಗೆ ಸೋಂಕದು. ಯಾವ ಆಕರ್ಷಣೆಯೂ ಅವರನ್ನು ಆಕರ್ಷಿಸಲಾ ರದು.

ಇಲ್ಲದಿದ್ದರೆ.... ?

ನನ್ನಂತಹ ತರುಣಿ 'ಕಾಮಿನಿ ಹೇಳುವಂತೆ' 'ರೂಪವತಿ ತರುಣಿ' ಅವರ ಉಡಿಯಲ್ಲಿ ರೆಕ್ಕೆ ಕಿತ್ತಿ ಬಿದ್ದಿರುವಾಗ ದೂರಿರುವದು ಸಾಮಾನ್ಯರಿಗೆ ಸಾಧ್ಯವೆ ?

ನಾನು ನನ್ನ ಮನೆಯಲ್ಲಿರುವಾಗ ಹೊರಕ್ಕೆಳೆದು ನನ್ನನ್ನು ಹಾಳು ಮಾಡಿದ ರಂಗನೆಲ್ಲಿ? ಹಾಳಾಗಿ ಹಳ್ಳದಲ್ಲಿ ಸಿಕ್ಕು ಹೋಗುವಾಗ ಎತ್ತಿ ತಂದು ಮನೆಯಲ್ಲಿಟ್ಟ ಸುರಕ್ಷಿತವಾಗಿಟ್ಟ ಮಹಾನುಭಾವರೆಲ್ಲಿ ?

ಅವ ಹಾಳು ಭಾವಿಯ ತಳ.

ಇವರು ಆಗಸದಲ್ಲಿ ಮಿನುಗುವ ನಕ್ಷತ್ರ.

ಭಾವಿಯ ತಳ ಕಾಣಿಸುವದು ತೀರ ಸುಲಭ. ಮೇಲಿಂದ ಹಾರಿ ಕೊಂಡು ಬಿಟ್ಟರಾಯಿತು. ಯಾರ ಸಹಾಯವಿಲ್ಲದೆ ಯಾವ ಆತಂಕವಿಲ್ಲದೆ ನೇರವಾಗಿ ತಳವನ್ನು ಕಂಡು ತಳವಾಗಿ ಬೀಳಬಹುದು.

ಆದರೆ ಆಗಸದೆಡೆಗೆ ಹಾರಲು ಸಾಧ್ಯವೆ ?

ಸಾಧ್ಯವಿಲ್ಲ. ಯಾರೊಬ್ಬರು ಎತ್ತಿಕೊಂಡು ಹೋಗಬೇಕು. ಎತ್ತಿ ಕೊಂಡು ಹೋಗುವದಾದರೂ ಕೂಡ ಎತ್ತಿಸಿಕೊಳ್ಳುವವರ ಜೊತೆಗೆ ಸಂಕಟ ಪಡಬೇಕು. ಒಬ್ಬರಿಗೆ ಇನ್ನೊಬ್ಬರ ಭಾರ.

ಆದರೂ ಕುಲಕರ್ಣಿಯವರು ನನ್ನ ಭಾರವನ್ನು ಎತ್ತುತ್ತಿರುವರು.

ನನ್ನಿಂದಾಗಿ ಅವರಿಗೆ ಕಷ್ಟವಾಗುತ್ತಿರಬಹುದೆ ?

ಅವರಿಗೆ ಕಷ್ಟ ಕೊಟ್ಟು ನಾನು ಅವರಲ್ಲಿ ಉಳಿಯಬೇಕೆ ?

ನನಗೆ ಉಪಕಾರ ಮಾಡಿದವರಿಗೆ ಕಷ್ಟಕೊಡುವದು ಅನ್ಯಾಯ...... ಪಾಪ.

ನಾನು ಅವರಿಗೆ ಕಷ್ಟ ಕೊಡಬಾರದು. ಕಷ್ಟಕೊಟ್ಟು ಅವರಲ್ಲಿ ಉಳಿಯಬಾರದು.

ಆದರೆ ಹೋಗುವದೆಲ್ಲಿಗೆ...?

ನಾನು ಹೋಗಬೇಕಾದುದು ಎಲ್ಲಿಗೆ ?

ಇನ್ನೆಲ್ಲಿಯೂ ಹೋಗಬಾರದೆಂದು ಅವರು ನನ್ನನ್ನು ಇಲ್ಲಿಗೆ ಕರೆದು ತಂದಿದ್ದಾರೆ. ನಾನು ಎಲ್ಲವನ್ನೂ ಬಿಟ್ಟು ಹೊರಟು ಹೋದರೆ...!

ಅವರ ಮನಸ್ಸಿಗೆ ನೋವು.

ನನಗೆ ಕಷ್ಟ.

ಈ ಮನೆ ಬಿಟ್ಟ ಮರುದಿನವೇ ನಾನು ಈ ಜಗವನ್ನು ಬಿಡುವದಕ್ಕೆ ಸಿದ್ಧಳಾಗಬೇಕು... ನನಗೆ ಯಾರಲ್ಲಿಯೂ ಆಶ್ರಯ ಸಿಕ್ಕಲಾರದು. ನನಗೆ ಆಶ್ರಯ ಕೊಡುವರಾದರೂ ಯಾರು ? ಯಾವ ಕಾರಣಕ್ಕಾಗಿ ಅವರು ನನಗೆ ಆಶ್ರಯ ಕೊಡಬೇಕು ?

ಆಶ್ರಯದ ಅಪೇಕ್ಷೆ ಮಾಡುವವಳು ಅನಾಥಳು.

ಆವರೆ ಆಶ್ರಯ ಕೊಡುವವರು ದೇವರಿರಬೇಕು. ದೇವರಿರಲೇಬೇಕು.

ಅನಾಥರಿಗೆ ನಿರಪೇಕ್ಷ ಬುದ್ಧಿಯಿಂದ ಆಶ್ರಯಕೊಡುವವ ದೇವನೊಬ್ಬ. ಅಲ್ಲದೆ ಇನ್ನಾರೂ ಇಲ್ಲ.

ದೇವರೇ ಮನುಷ್ಯರೂಪ ತಳೆದು ನನಗೆ ಆಶ್ರಯ ಕೊಟ್ಟಿದ್ದಾನೆ. ಇಲ್ಲ ದಿದ್ದರೆ ಯಾರಿಗೆ ಯಾರು ಕರೆಯುತ್ತಿದ್ದರು ?

ಅಪರಿಚಿತರೊಬ್ಬರು ನನ್ನನ್ನು ಕರೆಯುತ್ತಿದ್ದರಾದರೂ ಹೇಗೆ ? ದಾರಿ ಯಲ್ಲಿ ಹೋಗುವ ಸ್ತ್ರೀಯನ್ನು ಕರೆಯುವ ಧೈರ್ಯ ಯಾರಿಗೆ ?

ಮನುಷ್ಯನಿಗೆ ದೇವನ ಪರಿಚಯ ಸಿಕ್ಕುವದು ಕಠಿಣ. ಏಕೆಂದರೆ ಆತ ಮನುಷ್ಯರಲ್ಲಿ ಮನುಷ್ಯನಾಗಿ ಅಡಗಿರುತ್ತಾನೆ.

ಆದರೆ ದೇವರಿಗೆ ಪ್ರತಿಯೊಬ್ಬನ ಪರಿಚಯ. ಏಕೆಂದರೆ ಜಗತ್ತೇ ಆತನ ಸೃಷ್ಟಿ. ' ಹೊಲೆಗೆಲಸದಲ್ಲಿಯೇ ಆಯುಷ್ಯ ಕಳೆದ ಅಜಮಿಳನಿಗೆ ಕೂಡ ದೇವರು ಆಪತ್ಕಾಲದಲ್ಲಿ ಒಲಿದ ' ಎಂದು ತಾಯಿಗೆ ತಂದೆ ಆಗಾಗ ಹೇಳು ತ್ತಿದ್ದ ಮಾತಿನಲ್ಲಿ ತಥ್ಯವಿಲ್ಲದೆ ಇಲ್ಲ. ದೇವರು ಆಪತ್ಕಾಲದಲ್ಲಿ ನೆರವಿಗೆ ಧಾವಿ ಸುತ್ತಾನೆ ಎಂದು ಹೇಳುವದು ಸತ್ಯ......

ಅನೇಕರಿಗೆ ಅಸತ್ಯವೆನ್ನಿಸುತ್ತಿರಬಹುದು. ಆದರೆ ನಾನೂ ಅಸತ್ಯವೆಂದು ಹೇಳಿದರೆ ಸತ್ಯವನ್ನು ಮರೆಮಾಚಿದಂತಾಗುವದಿಲ್ಲವೆ....?

.... ಸಾಯುವವರನ್ನು ಬದುಕಿಸುವದು ದೇವರ ಕೆಲಸ. ಆಪತ್ಕಾಲದಲ್ಲಿ ನೆರವು ನೀಡುವದು ದೇವ ಕಾರ್ಯ; ಅನಾಥರಿಗೆ ಆಶ್ರಯ ಕೊಡುವದು ದೇವ ಧರ್ಮ.

ಈ ಎಲ್ಲವನ್ನು ಆಚರಿಸುವವರು ದೇವರೇ ಅಲ್ಲದಿದ್ದರೆ ದೇವರ ಅಂಶ
ಈ ಎಲ್ಲವನ್ನು ಆಚರಿಸಿದ ಕುಲಕರ್ಣಿಯವರು ದೇವರ ಅಂಶ........
ನನ್ನ ಪಾಲಿಗೆ ದೇವರು.......

ದೊರೆತ ದೇವರನ್ನು ದೂಡಿ ಹೋಗಬೇಕೆ? ದೇವರನ್ನು ದೂಡಿ ಹೋಗುವದಾದರೂ ಎಲ್ಲಿಗೆ....? ದೇವರನ್ನು ದೂರಮಾಡಿ ಮನುಷ್ಯರು ಬಾಳುವದಾದರೂ ಸಾಧ್ಯವೆ... ?

ದೇವರನ್ನು ದೂಡಿದಾಗ ಬೀಳುವದು ರಾಕ್ಷಸನ ದವಡೆಯಲ್ಲಿ. ರಾಕ್ಷಸನ ದವಡೆಯಿಂದ ಮುಕ್ತಳಾಗಿ ದೇವನ ಹತ್ತಿರಕ್ಕೆ ಬಂದಿರುವೆ ...

ರಾಕ್ಷಸನ ದವಡೆಯಿಂದ........?
ಅಹುದು...ರಂಗ ರಾಕ್ಷಸನೇ ನಿಜ
ಕುಲಕರ್ಣಿಯವರು ಹೇಳುವದಿಲ್ಲವೆ.... ?
" ಜಗತ್ತಿಗೆ ಒಳ್ಳೆಯದನ್ನು ಮಾಡುವವ ದೇವರು. "
" ಇನ್ನೊಬ್ಬರಿಗೆ ಕೆಡಕಾಗದಂತೆ ನಡೆಯುವವ ಮನುಷ್ಯ "
" ತನ್ನ ಸ್ವಾರ್ಥಕ್ಕಾಗಿ ಉಳಿದವರನ್ನು ಹಾಳುಮಾಡುವವ ರಾಕ್ಷಸ..." ಎಂದು.

ಅಂತೆಯೇ ರಂಗ ರಾಕ್ಷಸ.
ರಾಕ್ಷಸ ರಂಗ ಹಾಳು ಮಾಡಿದ ನನ್ನನ್ನು.
ದೇವರಂತಹ ಕುಲಕರ್ಣಿ ನನ್ನನ್ನು ಬದುಕಿಸುತ್ತಿರುವರು.
ಆದರೆ.......

ಆದರೆ ಕೊನೆಯವರೆಗೆ ಕುಲಕರ್ಣಿಯವರು ಹೀಗೆಯೇ ನನ್ನನ್ನು ಇಟ್ಟುಕೊಂಡು ಸಲಹುಬಹುದೆ ...? ಸಲಹುವೆ ಎಂಬ ವಿಚಾರ ಇಂದು ಅವರಲ್ಲಿ ಇದ್ದುದಾದರೂ ನಾಳೆಯ ವರೆಗೆ– ಕೊನೆಯವರೆಗೆ– ಉಳಿಯಬಹುದೆ....?

ಇಂದು ಅವರು ಒಬ್ಬರೇ ಇರುವರು. ನಾಳೆ ಅವರ ವಿವಾಹವಾದರೆ...?

ಅವರ ವಿವಾಹವಾದರೆ....?....ಆದರೆ....?

ಅವರ ವಿವಾಹ ಯಾರ ಜೊತೆಗೆ.......?

ನನ್ನ ಜೊತೆಗೇ ಅವರ ವಿವಾಹ ಏಕೆ ಆಗ ಕೂಡದು...?
... ಹುಚ್ಚಿ....ನಾನು...........ಹುಚ್ಚಿ........
ನನ್ನ ಜೊತೆಗೆ ವಿವಾಹ...?
ಕುಲಕರ್ಣಿಯವರ ವಿವಾಹ ನನ್ನ ಜೊತೆಗೆ... ?
ಅದು ಹೇಗೆ ಸಾಧ್ಯ...?
ಅವರು ದೇವ ಪುರುಷರು.
ನಾನು ಪಾಪಿ....ಹೆಂಗಸು

ನನ್ನ ಕತೆ ಎಲ್ಲವೂ ಅವರಿಗೆ ಗೊತ್ತಿದೆ. ನನ್ನ ಹೊಟ್ಟೆಯಲ್ಲಿ ಬೆಳೆಯುವ ಪಿಂಡದ ವಿಚಾರ ಅವರಿಗೆ ಗೊತ್ತಿದೆ. ಅವರ ತಂದೆಯ ವಿಚಾರ ಅವರಿಗೆ ಗೊತ್ತಿದೆ. 'ಅದರ ತಂದೆ ತಾನಲ್ಲ' ಎಂದು ಹೇಳುವದೂ ಅವರಿಗೆ ಗೊತ್ತಿದೆ.

ಅಂದ ಮೇಲೆ ಅದು ಹೇಗೆ ಸಾಧ್ಯ... ?
ಛೆ... ಇಂತಹ ವಿಚಾರ ಸರಿಯಲ್ಲ. ಯೋಗ್ಯವಲ್ಲ.
ಇಂತಹ ವಿಚಾರ ಕೂಡ ಪಾಪ........
ಇರಲು ಆಶ್ರಯ ಕೊಟ್ಟವರ ಮೇಲೆಯೇ ಕಣ್ಣು ಹಾಕುವದೆ ?

ಛೆ....ಇದೆಂತಹ ಅನ್ಯಾಯ.........ಇಂತಹ ವಿಚಾರ ತೀರ ಅನುಚಿತ...

ಆದರೆ ಇಂತಹ ವಿಚಾರಗಳು ಅನುಚಿತನಾಗಿ ಕಾಣುವದಿಲ್ಲ ಕಾವಿನಿಗೆ. ಅವಳು ತೀರ ವಿಚಿತ್ರ ಹೆಣ್ಣು ಮಗಳು. ನನ್ನ ಮನದ ವಿಚಾರ ಅವಳಿಗೆ ಅರಿವಾಯಿತೊ ಅಥವಾ ಅಂತಹದೇ ವಿಚಾರ ಅವಳಲ್ಲಿ ಉದ್ಭವಿಸಿತೋ ಯಾರು ಬಲ್ಲರು....ಒಂದು ದಿನ ಅವಳು ನನ್ನೆದುರು ಹೇಳಿಯೇ ಬಿಟ್ಟಳು.

" ಸುಮಿತ್ರಾ...ನೀನು ಯಾವ ವಿಚಾರವನ್ನೂ ಮಾಡದೇ ಕುಲಕರ್ಣಿಯವರನ್ನು ವಿವಾಹವಾಗು......ಇದರಲ್ಲಿ ವಿಚಾರ ಮಾಡುವಂತಹದೇನೂ ಇಲ್ಲ. ನೀನು ಸ್ತ್ರೀ. ನಿನ್ನ ಆಯುಷ್ಯದಲ್ಲಿಯ ಮೊದಲನೆಯ ಮರಣ ಅಥವಾ ಜನನ ನಿನ್ನ ವಿವಾಹ.

ವಿವಾಹವು ಮರಣವೂ ಅಹುದು. ಜನನವೂ ಅಹುದು.

ವಿವಾಹದ ಪೂರ್ವದಲ್ಲಿ ಅವಳು ತಂದೆ-ತಾಯಿಯ ಮಗಳು. ವಿವಾಹದ ನಂತರ ಆವಳ ಹಿಂದಿನ ಎಲ್ಲ ಸಂಬಂಧವೂ ಕಡಿದು ಹೋಗುವದು. ಆವಳ ತಂದೆ-ತಾಯಿಗಳ ಪಾಲಿಗೆ ಅವಳು ಇಲ್ಲದಾಗುವಳು. ಅರ್ಥಾತ್ ಸತ್ತುಹೋಗುವಳು. ತಾವೇ ಹೆತ್ತ ತಮ್ಮ ಮಗಳ ಮುಖ ನೋಡಬೇಕೆನ್ನಿಸಿದರೂ ಆವರು ಆವಳ ಪತಿಯ 'ಪೂರ್ವ ಪರವಾನಿಗೆ' ಪಡೆದುಕೊಳ್ಳಬೇಕು. ತಮ್ಮ ಮನೆಯಲ್ಲಿಯೇ ಬೆಳೆದ ಮಗಳಿಗೆ ಅವಂಗೆ ಏನನ್ನು ಹೇಳಲು ಅಧಿಕಾರವಿರುವದಿಲ್ಲ. ಸತ್ತ ಮೇಲೆ ಶ್ರಾದ್ಧಮಾಡುವ ರೀತಿಯಲ್ಲಿ ತಂದೆ-ತಾಯಿಗಳು ಮಗಳಿಗೆ ಯಾವುದನ್ನೂ ಮಾಡಬೇಕಾದರೂ ಮಾಡಿದ ಅಡಿಗೆಯನ್ನು ಬ್ರಾಹ್ಮಣರ ಮುಖಾಂತರ ಪಿತೃಗಳಿಗೆ ತಲುಪಿಸುವಂತೆ ತಂದೆ ತಾಯಿಗಳು ಯಾರೊಬ್ಬರ ಮುಂಖಾಂತರ ಮಗಳಿಗೆ ತಲುಪಿಸಬೇಕು. ಅಂತೆಯೇ ವಿವಾಹ ಸ್ತ್ರೀಯ ಮರಣ"

"ಆದರಂತೆ ವಿವಾಹವೂ ಜನ್ಮವೂ ಅಹುದು."

"ವಿವಾಹದ ಅಕ್ಷತೆಗಳು ಅಥವಾ ಕಾಗದದ ಮೇಲೆ ಹಸ್ತಾಕ್ಷರಗಳು ಮೂಡಿದ ಕ್ಷಣದಿಂದಲೇ ಅವಳು ಈ ಜಗದಲ್ಲಿ ಹೆಂಡತಿ, ಪತ್ನಿ, ಭಾರ್ಯೆ ಎಂಬ ವಿವಿಧ ಹೆಸರಿನಿಂದ ಜನ್ಮ ತಾಳುವಳು. ಜೀವವಿದ್ದ ಯಾವ ಜೀವಿಯ ಜನನಕ್ಕೂ ಗಂಡು, ಹೆಣ್ಣು, ತಂದೆ-ತಾಯಿಗಳ ಅವಶ್ಯವಿದ್ದರೆ ಈ ಜನನಕ್ಕೆ ಹೆಣ್ಣಿನ ಅವಶ್ಯಕತೆಯೇ ಇಲ್ಲ. ಗಂಡುನಾದರೆ, ಗಂಡಾದರೆ ಸಾಕು. ಅವನಿಂದಲೇ ಅವಳ ಜನನ. ಆದರೆ ಜನ್ಮ ಕೊಟ್ಟ ಗಂಡಸು ಇಲ್ಲಿ ತಂದೆಯಲ್ಲ. ಗಂಡ, ಪತಿ, ಆರ್ಯ.... ಅಥವಾ ಕಳ್ಳರ ಮಾತಿನಲ್ಲಿ ಭಂಡರ ಮಾತಿನಲ್ಲಿ ಹೇಳುವದಾದರೆ ದೇವರು. ಪತಿದೇವರು."

"ವಿವಾಹದ ಮರುಕ್ಷಣದಲ್ಲಿ ಹೆಂಡತಿ ಎಂಬ ಒಂದು ಜೀವಕ್ಕೆ ಜನ್ಮ ಕೊಟ್ಟು ಆ ಜೀವದ ಸರ್ವಾಧಿಕಾರಿಯಾಗುತ್ತಾನೆ ಜನ್ಮ ಕೊಟ್ಟ ಗಂಡಸು. ಈ ಜಗತ್ತಿನಲ್ಲಿ ಹೆಂಡತಿ, ಪತ್ನಿಯಾಗಿ ಜನ್ಮ ತಾಳಿದವಳಿಗೆ ಜಗದ ಯಾವ ಸಂಬಂಧವೂ ಇರುವದಿಲ್ಲ. ಅವಳಿಗೆ ಸ್ವತಹದ ಅಸ್ತಿತ್ವವೇ ಇರುವದಿಲ್ಲ.

ಅವಳ ಜೀವ ಜೀವನ ಎಲ್ಲವೂ ಅವಳಿಗೆ ಜನ್ಮ ಕೊಟ್ಟ ಪತಿಯಲ್ಲಿ ಲೀನವಾಗು ತ್ತವೆ. ಆಗ ಅವಳು ಒಂದು ಗೊಂಬೆ. ಸೂತ್ರದ ಗೊಂಬೆ....."

"... ಆ ಗೊಂಬೆಯ ಸೂತ್ರಗಳೆಲ್ಲವೂ ಅವಳಿಗೆ ಜನ್ಮ ಕೊಟ್ಟ ಗಂಡನ ಕೈಯಲ್ಲಿ ಅವನು ಕುಣಿಸಿದಂತೆ ಕುಣಿಯಬೇಕು ಅವನು ಕೈಸೂತ್ರ ಎಳೆ ದರೆ ಸರ್ವ ದೇಹವೂ ಸ್ಥಗಿತವಾಗಿ ಕೈಯೊಂದೇ ಮೇಲಕ್ಕೇಳಬೇಕು .. "

"ಜೀವವಿದ್ದ ಪ್ರಾಣಿಗಳಲ್ಲಿ ಸರ್ವಶ್ರೇಷ್ಠವೆಂದ ಮನುಷ್ಯ ದೇಹದಲ್ಲಿ ಪತ್ನಿಯಾಗಿ ಜನ್ಮ ತಾಳಿದರೂ ಅವಳಿಗೆ ಅಸ್ತಿತ್ವವಿಲ್ಲ ! "

" ಪತ್ನಿಗೆ ಅಸ್ತಿತ್ವವೇ ಇಲ್ಲ".

ಪತ್ನಿ ಎನ್ನುವ ಗೊಂಬೆಯಾಗಿ ಸ್ತ್ರೀಯ ಜನನವಾಗುತ್ತದೆ ವಿವಾಹ ದಿಂದ "

" ಆದರೂ.... ನಾನು ನಿನಗೆ ವಿವಾಹ ಮಾಡಿಕೊ ಎಂದು ಹೇಳುವೆ. ವಿವಾಹದಿಂದ ನಿನ್ನ ಅಸ್ತಿತ್ವವೇ ಅಡಗಿ ಹೋಗುತ್ತದೆ. ಎನ್ನುವದನ್ನು ತಿಳಿಸಿ ಹೇಳಿ ನನಗೆ ವಿವಾಹ ಮಾಡಿಕೊ ಎಂದು ಹೇಳುತ್ತಿರುವೆ ! "

" ಇದು ಆಶ್ಚರ್ಯ ! "

" ವಿವಾಹ ಮಾಡಿಕೊಂಡು ನಿನ್ನ ಕೊಲೆಯನ್ನು ನೀನು ಮಾಡಿಕೊ ಎಂದು "

" ಏಕೆ... ? ಏಕೆ ... ?"

" ಏಕೆಂದರೆ ... ಏಕೆಂದರೆ ಅಸಂಖ್ಯಾತ ಕೊಲೆಯ ಅಸ್ತಿಭಾರದ ಮೇಲೆಯೇ ಜಗದ ಬೆಳವಣಿಗೆಯಾಗಬೇಕಾಗಿದೆ ಜಗತ್ತು ಮುಂದುವರಿಯ ಬೇಕಾಗಿದೆ "

" ವಿವಾಹವೆಂದರೆ ಸ್ತ್ರೀಯ ಕೊಲೆ. ಸ್ತ್ರೀಜಾತಿಯ ಕೊಲೆ. ಸುಮಿ ತ್ರೆಯ ಕೊಲೆ. ಆದರೂ ವಿವಾಹವಾಗಲೇಬೇಕು ಏಕೆಂದರೆ ವಿವಾಹ ವಿಲ್ಲದೆ ಸ್ತ್ರೀ ಬಾಳಲಾರಳು. ಸ್ತ್ರೀಜಾತಿ ಬಾಳಲಾರದು....ಸುಮಿತ್ರೆ ಬಾಳ ಲಾರಳು."

" ಸ್ತ್ರೀ ಬದುಕಬೇಕಾದರೆ ತನ್ನ ಕೊಲೆ ಮಾಡಿಕೊಳ್ಳಬೇಕು. ತನ್ನ ಕತ್ತಿಗೆ ತಾನೇ ಹಗ್ಗಹಾಕಿಕೊಂಡು ಪತಿ ಎನ್ನುವ ಯಾವನೋ ಒಬ್ಬ ಗಂಡಸಿನ ಕೈಗೆ ಕೊಟ್ಟು ಕೊಲೆ ಮಾಡಿಸಿಕೊಳ್ಳಬೇಕು......"

"ಕೊಲೆ ಮಾಡುವವರಿಗೆ ಕರುಣೆಯಿಲ್ಲ."

"ಕೊಲೆ ಮಾಡಿಸಿಕೊಳ್ಳುವವರಿಗೆ ಹೆದರಿಕೆಯಿಲ್ಲ"

" ಏಕೆಂದರೆ......."

" ಒಬ್ಬರಲ್ಲಿ ಲಾಲಸೆ........"

" ಇನ್ನೊಬ್ಬರಲ್ಲಿ ಅಜ್ಞಾನ..."

" ತನ್ನ ಸುಖಕ್ಕಾಗಿ ಹೆಣ್ಣು, ಹೆಣ್ಣು ಜಾತಿ ಎಂದು ತಿಳಿದುಕೊಳ್ಳುವದು ಗಂಡು, ಗಂಡುಸು ಜಾತಿ...."

"...ಪತಿಯೇ ಪರದೈವತ. ಅವನಿಂದಲೇ ಮುಕ್ತಿ. ಅವನಿಲ್ಲದಿದ್ದರೆ ಬಾಳು ಇಲ್ಲ. ಎಂದು ತಿಳಿದುಕೊಳ್ಳುವಳು ಸ್ತ್ರೀ, ಸ್ತ್ರೀ ಜಾತಿ..."

" ಒಬ್ಬನದು ತೆರೆದ ಮುಖ. ಇನ್ನೊಬ್ಬಳು ರೆಕ್ಕೆ ಕಿತ್ತ ಹಕ್ಕಿ"

" ಒಂದು ರಕ್ತ ಪಿಪಾಸಿ ದೇವತೆ ಇನ್ನೊಂದು ಬಲಿಗಾಗಿ ನಿಂತ ಪಶು"

"....ಈ ಕಟುಕತೆಗೆ ಹೆಸರು— ದೊಡ್ಡ ಹೆಸರು— ಸಂಸಾರ.!"

ಸಂಸಾರ.... !

"....ಸುಮಿತ್ರಾ....ನೀನೂ ಸಂಸಾರ ಮಾಡಬೇಕಾಗಿದೆ. ಅರ್ಥಾತ್ ನೀನು ಬಲಿಯ ಮೂಕ ಪಶುವಾಗಬೇಕಾಗಿದೆ. ಬಾಯ್ತೆರದು ನಿಂತ ರಕ್ತ ಪಿಪಾಸಿ ದೇವನಿಗೆ ನಿನ್ನ ಬಲಿಯಾಗಬೇಕಾಗಿದೆ...."

"....ಆ ಬಲಿದಾನದ ಸಮಾರಂಭಕ್ಕೆ ಸಂಭ್ರಮದ ಹೆಸರು ವಿವಾಹ.!"

" ವಿವಾಹ ..."

" ಅರ್ಥಾತ ನೀನು ವಿವಾಹಕ್ಕೆ ಸಿದ್ಧಳಾಗಬೇಕಾಗಿದೆ"

" ನೀನು ವಿವಾಹ ಮಾಡಿಕೊಳ್ಳಲೇ ಬೇಕು...."

"...ಏಕೆಂದರೆ ವಿವಾಹವಿಲ್ಲದೆ ಬಾಳು ಇಲ್ಲ, ಬದುಕು ಇಲ್ಲ, ಕೊಲೆ ಮಾಡಿಕೊಂಡು ಕತ್ತು ಹಿಸುಕಿಸಿಕೊಂಡೂ ನೀನು ಬದುಕ ಬೇಕಾಗಿದೆ."

"ಸುಮಿತ್ರಾ ನನಗೆ ಗಂಡಸೆಂದರೆ ಜುಗುಪ್ಸೆ, ವಿವಾಹವೆಂದರೆ ಹೇಸಿಕೆ, ಸಂಸಾರವೆಂದರೆ ಕೊಳಚೆ. ಆದರೂ ಹೇಳುವೆ...."

" 'ನೀನು ವಿವಾಹ ಮಾಡಿಕೊ' ಎಂದು"

"ಏಕೆ...?"

"ಅದಿಲ್ಲದೆ, ವಿವಾಹವಿಲ್ಲದೆ ಸ್ತ್ರೀಗೆ ಸಂರಕ್ಷಣೆಯಿಲ್ಲ"

"ಪತಿಯಿಲ್ಲದ ಸ್ತ್ರೀ ಸಾರ್ವಜನಿಕ ವಸ್ತು. ಎಲ್ಲರಿಗೂ ಲಭ್ಯವಿರುವ ವಸ್ತು. ಯಾರಿಗೂ ಸಿಕ್ಕುವದು. ಅಂತೆಯೇ ಎಲ್ಲರೂ ಕೂಡಿ ಅವಳನ್ನು ಮುಗಿಸುವರು. ಅವಳನ್ನು ಕೊಂದುಬಿಡುವರು......"

"....ಸಾವಿರ ಜನರ ಕೈಗೆ ಸಿಕ್ಕು ಸಾಯುವದಕ್ಕಿಂತ ಒಬ್ಬನ ಕೈಯಿಂದ ತನ್ನ ಕೊಲೆ ಮಾಡಿಸಿಕೊಳ್ಳುವದು ವಾಸಿ...."

"ನನ್ನನ್ನು ನೋಡು...."

"ನನ್ನ ವಿವಾಹವಾಗಿದೆಯೇ....?"

"ಆಗಿದೆ."

"ನನಗೆ ಪತಿ ಇರುವನೆ...?"

"ಇರುವನು....ಇಲ್ಲ ..!"

"... ಎರಡು ಉತ್ತರ ಒಂದೇ ಪ್ರಶ್ನೆಗೆ...!"

"ನಾನು ಕೈಗೆ ಸಿಕ್ಕುವ ರೆಕ್ಕೆಯಿಲ್ಲದ ವಸ್ತುವೆಂದು ಸುತ್ತಲಿನ ಗಿಡಗಗಳು ನನ್ನನ್ನು ಹೊಡೆದು ಹಾಕಲು ಸರ್ವ ಕಾಲವೂ ಪ್ರಯತ್ನಿಸುತ್ತವೆ. ತಮ್ಮ ಮನದಿಚ್ಛೆ ಪೂರೈಸದಂತಾದಾಗ ಎಲ್ಲರೂ ನನಗೆ ಹೇಳುತ್ತಾರೆ.—"

"....ಕಾಮಿನಿ ಪಾಪಿ....ಕಾಮಿನಿ ಕೆಟ್ಟ ಹೆಂಗಸು...ಕಾಮಿನಿ ವ್ಯಭಿಚಾರಿ...." ಇನ್ನೂ ಹಲವು ಬಿರುದಾವಳಿಗಳು....

".... ಅದನ್ನು ಸಿದ್ಧಮಾಡಿ ಕೊಡುವ ಧೈರ್ಯ ಯಾರಿಗಾದರೂ

ಇದೆಯೇ ? ಅಂತಹ ಎದೆತಟ್ಟಿ ಮುಂದೆ ಬಂದಿರುವ ಗಂಡಸು ಒಬ್ಬನಾದರೂ ಇರುವನೆ...? "

"...ನನ್ನ ಗಂಡನೆನ್ನುವ ವ್ಯಕ್ತಿಗೆನೇ ಆ ಧೈರ್ಯವಿಲ್ಲದಾಗ ಇನ್ನು ಳಿದವರಿಗೆ ಎಲ್ಲಿಂದ ಬರಬೇಕು ಅಂತಹ ಧೈರ್ಯ....?

"...ಆದರೆ ನನ್ನಂತೆ ಬದುಕಲು ನಿನಗೆ ಸಾಧ್ಯವೆ ...."

"....ಇನ್ನೂ ಹಾರಲು ಕಲಿಯುವ ಪೂರ್ವದಲ್ಲಿಯೇ, ಗೂಡಿನ ಹೊಸ್ತಿಲಲ್ಲಿಯೇ ಗಿಡುಗನ ಬಾಯಿಗೆ ತುತ್ತಾಗಿರುವ....ನೀನು. "

" ಅದಕ್ಕೆ ಹೇಳುವೆ ನೀನು ವಿವಾಹ ಮಾಡಿಕೊಂಡು ಬಿಡು...."

ಕಾಮಿನಿ ಅತ್ಯಂತ ಸುಲಭವಾಗಿ ಹೇಳುತ್ತಾಳೆ. ' ವಿವಾಹ ಮಾಡಿಕೊಂಡು ಬಿಡು. ' ಎಂದು. ಆದೂ ಕೂಡ ಕುಲಕರ್ಣಿಯವರ ಜೊತೆಗೆ !

ವಿವಾಹವೆಂದರೆ ಕೊಲೆ ಎಂದು ಹೇಳುತ್ತಾಳೆ. ಆದರೂ ನೀನು ವಿವಾಹ ಮಾಡಿಕೊಂಡು ಸಂಸಾರ ಸಾಗಿಸು ಎಂದೇ ಹೇಳುತ್ತಾಳೆ.

ಏಕೆಂದರೆ ' ವಿವಾಹವಿಲ್ಲದೆ ಸ್ತ್ರೀಗೆ ಸಂರಕ್ಷಣೆ ಇಲ್ಲ ' ಅಂತೆ.

ಅವಳು ಹೇಳುವದೂ ಸತ್ಯ.

ಪತಿಯಿಲ್ಲದ ಸ್ತ್ರೀಗೆ ಯಾವ ಬೆಲೆಯಿದೆ ? ಬೆಲೆ ಇಲ್ಲದಿದ್ದರೆ ಬಿಡಲಿ. ಅವಳ ರಕ್ಷಣೆ ಮಾಡುವವರಾದರೂ ಯಾರು !

ಮನೆಯಿಂದ ಬೀದಿಗೆ ನಾನಿಳಿದಾಗ ನನ್ನ ರಕ್ಷಣೆ ಮಾಡುವವರಾದರೂ ಯಾರಿದ್ದರು....?

ವಿವಾಹವಾಗದೆ ಹಾಗೆಯೇ ಉಳಿದಲ್ಲಿ ಎಲ್ಲರಿಗೂ ನಾನು 'ಬೇಕು.' ಏಕೆಂದರೆ ನಾನು ಒಬ್ಬನ ಪತ್ನಿಯಲ್ಲ. ಒಬ್ಬನ ಪತ್ನಿಯಾಗದೆ ಇರುವವಳು ಎಲ್ಲರಿಗೂ ಪತ್ನಿ. ಪ್ರತಿಯೊಬ್ಬರೂ ಅವಳನ್ನು ತನ್ನವಳನ್ನು—ಆದೂ ವಿವಾಹದ ಹೊಣೆಗಾರಿಕೆ ಇಲ್ಲದೆ—ತನ್ನವಳನ್ನು ಮಾಡಿಕೊಳ್ಳಬೇಕೆಂದು ಪ್ರಯತ್ನಿಸುವರು ಆದರಲ್ಲಿ ಒಬ್ಬಿಬ್ಬರಾದರೂ ಯಶಸ್ವಿಯಾಗಿ ಹಾಳು ಮಾಡುವರು. ನನ್ನನ್ನು ರಂಗ ಹಾಳು ಮಾಡಿದಂತೆ.

ರಂಗ ನನ್ನನ್ನು ಹಾಳು ಮಾಡಿದ.

ನನ್ನದೂ ವಿವಾಹವಾಗಿದ್ದರೆ....?

ನನಗೂ ಒಬ್ಬ ಪತಿಯಿದ್ದರೆ....?

ರಂಗನಿಗೆ ಹತ್ತಿರ ಸುಳಿಯುವದಂತೂ ಇರಲಿ ಕಣ್ಣೆತ್ತಿ ನೋಡುವ ಧೈರ್ಯವಾಗುತ್ತಿರಲಿಲ್ಲ. ನನ್ನ ನೆರೆಮನೆಯ ಕಮಲೆ........

ಅವಳಿಗೂ ನನಗೂ ವಯಸ್ಸಿನಲ್ಲಿ ಬಹಳ ಅಂತರವಿಲ್ಲ. ಅವಳು ನನ್ನಕ್ಕಿಂತಲೂ ಚಲುವೆ. ಆದರೆ ಅವಳನ್ನು ಕಣ್ಣೆತ್ತಿನೋಡುವ ಧೈರ್ಯ ಯಾರಿಗೆ ?

ಏಕೆಂದರೆ ಅವಳ ವಿವಾಹವಾಗಿದೆ. ಅವಳ ಪತಿ ಅವಳ ರಕ್ಷಣೆ ಮಾಡುತ್ತಾನೆ.

ಕಾಮಿನಿ ಹೇಳುತ್ತಾಳೆ 'ವಿವಾಹವೆಂದರೆ ಕೊಲೆ' ಎಂದು.

ಆದರೆ ವಿವಾಹ ಕೊಲೆಯಿಂದ ರಕ್ಷಿಸುವ ಕವಚ ಇದ್ದಂತೆ. ಕೊಲೆ ಯಾಗದಂತೆ ಕಾಯುವ ಕವಚವಿದ್ದಂತೆ ಅಲ್ಲವೆ...?

ನನ್ನದೂ ಲಗ್ನವಾಗಿದ್ದರೆ....?

ನಾನು ಆ ಹಾಳು ಮನೆಯಲ್ಲಿ ಇರುತ್ತಿರಲಿಲ್ಲ. ರಂಗನ ನೋಟಕ್ಕೆ ಬಲಿಬೀಳುತ್ತಿರಲಿಲ್ಲ. ರಂಗನ ಸವಿಮಾತುಗಳಿಗೆ ಮರುಳಾಗುತ್ತಿರಲಿಲ್ಲ.

ಇನ್ನೊಬ್ಬರು ನನ್ನನ್ನು ನೋಡದಂತೆ ಸುತ್ತ ಕೋಟೆ ಕಟ್ಟಿದ ಶಕ್ತಿ ಯೊಂದು ಇರುತ್ತಿತ್ತು. ಆ ಶಕ್ತಿಯೇ ಪತಿ.

ಅದು ದೊರೆಯುವದು ವಿವಾಹದ ನಂತರ.

ವಿವಾಹವಿಲ್ಲದೆ, ಪತಿಯಿಲ್ಲದೆ ಸ್ತ್ರೀಗೆ ಸಂರಕ್ಷಣೆಯಿಲ್ಲ. ಎಂದು ಹೇಳುವ ಕಾಮಿನಿಯ ಮಾತು ನಿಜ. ಆದರೆ ವಿವಾಹವೆಂದರೆ ಮರಣ ಎನ್ನುವದನ್ನು ನಾನು ನಂಬುವದಾದರೂ ಹೇಗೆ ?

ನನ್ನ ತಾಯಿಯದೂ ವಿವಾಹವಾಗಿದೆ. ತಾಯಿಯ ತಾಯಿಯದೂ ವಿವಾಹವಾಗಿತ್ತು. ಸಮಸ್ತ ಸ್ತ್ರೀಜಾತಿಯದೂ ವಿವಾಹವಾಗಿದೆ. ಆಗಿತ್ತು. ಆಗುವದು.

ವಿವಾಹವಿಲ್ಲದೆ ಸ್ತ್ರೀಗೆ ಅಸ್ತಿತ್ವವೇ ಇಲ್ಲ.

ಸ್ತ್ರೀ ಎನ್ನುವ ಶಬ್ದಕ್ಕೆ ಅಸ್ತಿತ್ವ ಬರಬೇಕಾದರೆ ಪತಿ ಎನ್ನುವ ಶಕ್ತಿ ಅದಕ್ಕೆ ಜೀವ ತುಂಬಲೇಬೇಕು. ತುಂಬಿರಲೇಬೇಕು. ಅದಿಲ್ಲದಿದ್ದರೆ ಪತಿ ಶಕ್ತಿಯಿಲ್ಲದಿದ್ದ ಹೆಣ್ಣು ಸ್ತ್ರೀ ದೇಹಧಾರಿ ಅಷ್ಟೆ.

ಸ್ತ್ರೀ ಅಲ್ಲ.

ನನಗಾರು ಸ್ತ್ರೀ ಎಂದು ಕೂಗುವವರು....?

ನಾನೊಂದು ಹೆಣ್ಣು. ಬರಿ ಹೆಣ್ಣು ಮಾತ್ರ.

ದಯಾಳು ಕುಲಕರ್ಣಿಯವರ ರಕ್ಷಣೆಯ ನಾಲ್ಕು ಗೋಡೆಗಳು ಬಿಚ್ಚಿ ನೆಲಸಮವಾದಾಗ ನನ್ನ ಅವಸ್ಥೆ ಏನು....?

ತಂದೆಯ ಮನೆಯಿಂದ ಹೊರಗೆ ಬಂದಾಗ್ಗೆ ಆದ ನನ್ನ ಅವಸ್ಥೆ ಏನು. ? ಮರಣವಲ್ಲದೆ ಇನ್ನಾವ ದಾರಿ ನನ್ನೆದುರು ತೆರೆದಿತ್ತು? ತೆರೆದ ಎಲ್ಲರ ಬಾಗಿಲುಗಳು ನನಗಾಗಿ ಮುಚ್ಚಿದ್ದವು. ಕರೆಯುವ ಎಲ್ಲರ ಮುಖಗಳು ನನಗಾಗಿ ಮೌನಿಯಾಗಿದ್ದವು ಕೈಮಾಡಿ ಕರೆಯುವ ಕೈಗಳು ನಿಶ್ಚಲವಾಗಿದ್ದವು.

ಕುಲಕರ್ಣಿಯವರೊಬ್ಬರು.........

ಅವರ ವಿಚಾರವೇಕೆ ? ಅವರು ಮನುಷ್ಯರೇ ಅಲ್ಲ. ದೇವರು.

ದೇವರ ವಿಚಾರ ಮಾನವರಾದ ನಮಗೆ ನಿಲುಕದು. ಅವನ ಕಾರ್ಯದಿಂದಲೇ ನಾವು ಅವನಿಗೆ ಕೃತಜ್ಞರಾಗಿರಬೇಕು,

" ನಮ್ಮ ವಿಚಾರ ಸಾವಿರ ಹರದಾರಿ ದೂರ ಓಡಿದರೂ ದೇವರ ವಿಚಾರ ನಮಗೆ ಗೊತ್ತಾಗದು " ಎಂದು ಕುಲಕರ್ಣಿಯವರು ಹೇಳುವದಿಲ್ಲವೆ ?

ಅದು ನಿಜವೂ ಅಹುದು,

ಇಲ್ಲದಿದ್ದರೆ ಯಾರಿಗೆ ಗೊತ್ತು ನಾನು ಇಲ್ಲಿಗೆ ಕುಲಕರ್ಣಿಯವರ ಮನೆಗೆ ಬರುತ್ತಿದ್ದೆನೆಂದು ?

ಸಾಯಬೇಕೆಂದು ಹೊರಟವಳು ಇಲ್ಲಿಗೆ ಬಂದು ವಿವಾಹದ ವಿಚಾರ ನಡೆಯಿಸಿರುವೆ. ಇದು ಮನುಷ್ಯರ ಕಾರ್ಯವೆ....? ಮನೆಯಿಂದ ಹೊರ ಬೀಳುವಾಗ ತಪ್ಪಿಕೂಡ ನನ್ನ ವಿವಾಹವಾಗಬಹುದು— ಎನ್ನಿಸಿದ್ದಿತೆ....?

ವಿವಾಹವಾಗಬಹುದು ಎನ್ನಿಸಿದ್ದರೆ ನಾನು ಸಾಯುವದಕ್ಕೇಕೆ ಹೊರಡುತಿದ್ದೆ? ಮದುಮಗಳಾಗಿ ಮದುಮಗಳಂತೆ ಸಿಂಗರಿಸಿಕೊಂಡು ನಲಿಯುತ್ತ ನಗುತ್ತ ನನ್ನವರೆನ್ನುವವರನ್ನು ಸುತ್ತುಗಟ್ಟಿಕೊಂಡು ಹೊರಡುತ್ತಿದ್ದೆ.

ವಿವಾಹ, ಮರಣವೆಂದು ಕಾಮಿನಿ ಹೇಳುತ್ತಾಳೆ. ನಾನು ಮಾತ್ರ ಮರಣದಿಂದ ಮದುವೆಯ ಕಡೆಗೆ ಮಾರ್ಗ ಕ್ರಮಿಸುತ್ತಿರುವೆ.

ಎಷ್ಟು ದೂರದ ದಾರಿ .......?

ಮರಣ ಜೀವದ ಜೀವನದ ಅಂತ್ಯ.

ವಿವಾಹ ಜೀವನದ ಆರಂಭ.

ಎಲ್ಲರೂ ಆರಂಭದಿಂದ ಅಂತ್ಯದ ಕಡೆಗೆ ಸಾಗುತ್ತಾರೆ. ನಾನು ಮಾತ್ರ ಅಂತ್ಯದಿಂದ ಆರಂಭದ ಕಡೆಗೆ ಸಾಗಿದ್ದೇನೆ!

ಎಂತಹ ವಿಚಿತ್ರ!

ಎಲ್ಲವೂ ದೈವಲೀಲೆ. ದೇವನ ಲೀಲೆ, ಆವನ ಆಟವನ್ನು ಅರಿಯಲು ಯಾರಿಂದಲೂ ಅಸಾಧ್ಯ.

ಅಂತೆಯೇ ಆವನು ಪರಮ ಪುರುಷ. ಪರಮಾತ್ಮ.

ಆದರೆ ಪರಮಾತ್ಮ ಇಂತಹ ಲೀಲೆಯನ್ನೇಕೆ ಮಾಡುವ? ಆಡುವ? ಅದರ ಉದ್ದೇಶವೇನು?

ಯಾರೊಬ್ಬರು ಅಳುತ್ತಾರೆ.

ಯಾರೊಬ್ಬರು ನಗುತ್ತಾರೆ.

ಒಂದೆಡೆಯಲ್ಲಿ ದಯೆ........

ಇನ್ನೊಂದೆಡೆಯಲ್ಲಿ ನೆತ್ತರದ ಕಾವಲು.

ಒಬ್ಬರು ಜ್ಞಾನದ ಭಂಡಾರ.

ಇನ್ನೊಬ್ಬ ಅಕ್ಷರ ಶತ್ರು...

ಒಂದೇ ಘಟನೆಯಿಂದ ಒಬ್ಬರಿಗೆ ಹಿತ. ಇನ್ನೊಬ್ಬರಿಗೆ ಅಹಿತ.

ಒಂದು ವಿಚಾರದಿಂದ ಒಬ್ಬರಿಗೆ ನಗೆ. ಇನ್ನೊಬ್ಬರಿಗೆ ಅಳು.

ಏಕೆ........?........ಏಕೆ....ಈ ಎಲ್ಲ ಆಟ....?

ಸಮಸ್ತ ವಿಶ್ವವೂ ದೇವನ ಸೃಷ್ಟಿ ಎಂದಾಗ ಜಗತ್ತಿನ ಜೀವಜಂತು ಗಳೆಲ್ಲವೂ ದೇವನ ಸಂತತಿ. ಎಲ್ಲರೂ ಅಣ್ಣ ತಂಗಿಯರು, ಅಕ್ಕ ತಮ್ಮಂದಿರು.

ಅಣ್ಣ ತಂಗಿಯರು....! ಅಕ್ಕ ತಮ್ಮಂದಿರು....!!

ಆಹುದು ಅಲ್ಲದೆ ಏನು....?

ಒಂದೇ ತಂದೆಯ ಮಕ್ಕಳು ಬಂಧು ಭಗಿನಿಯರಲ್ಲವೆ...?

ಕುಲಕರ್ಣಿಯವರು ಹೇಳುತ್ತಾರೆ "ದೇವರಿಂದಲೇ ಜಗದ ಜನನ" ಎಂದು. ದೇವರೇ ಜನರ ತಂದೆ ಎಂದು.

ಅದು ನಿಜವಿದ್ದರೆ ಜನರೆಲ್ಲರೂ ಒಂದೇ ಹೊಟ್ಟೆಯ ಮಕ್ಕಳು ಎಲ್ಲರೂ ಅಕ್ಕ ತಮ್ಮಂದಿರು. ಅಣ್ಣ ತಂಗಿಯರು....

ಆದರೆ ಒಂದೇ ಹೊಟ್ಟೆಯ ಮಕ್ಕಳಲ್ಲಿ ಈ ತರದ ಸಂಬಂಧವೇಕೆ ?

ಅಣ್ಣ ತಂಗಿಯರೇ ಗಂಡ ಹೆಂಡಿರಾಗಿ ಬಾಳುವರೇಕೆ ಈ ಜಗದಲ್ಲಿ... ?

ಒಂದೇ ಹೊಟ್ಟೆಯಲ್ಲಿ ಒಬ್ಬನೇ ತಂದೆಯಿಂದ ಓರ್ವ ತಾಯಿಂದ ಜನ್ಮ ತಾಳಿದ ಗಂಡು ಹೆಣ್ಣುಗಳು ಗಂಡ ಹೆಂಡರಾಗಿ ಮಗುವಿಗೆ ಜನ್ಮ ಕೊಡುತ್ತಾರೆ ಇದು ಪಾಪವಲ್ಲವೆ....?

ಬೇರೆ ಬೇರೆ ಗಂಡು ಹೆಣ್ಣುಗಳು ಒಂದಾಗಿ ಕೂಡಿದ್ದಕ್ಕೆ ಜಗತು 'ಪಾಪ' ಎಂದು ಡಂಗುರ ಸಾರಿತು. ಸಾರಿ ನನ್ನ ಅವಹೇಳನೆ ಮಾಡಿತು. ಆದರೆ ಜಗತ್ತಿನ ಮೂಲವೇ ಪಾಪದ ಕೂಪವಾಗಿದೆಯಲ್ಲ. ಜಗತ್ತಿನ ಆರಂಭವೇ ಪಾಪದಿಂದಾಗಿದೆಯಲ್ಲ....?

ಅಂತೆಯೇ ಈ ಜಗದಲ್ಲಿ ಪಾಪದ ತಾಂಡವ ಅವ್ಯಾಹತವಾಗಿದೆ. ಪಾಪ ದಿಂದ ಪಾಪದ ಜನ್ಮ.......ಪಾಪದ ವಂಶವೇ ಜಗತ್ತನ್ನು ವ್ಯಾಪಿಸಿದೆ.

ನಾನು ಪಾಪಿ...ಏಕೆಂದರೆ ನನ್ನ ತಂದೆ ತಾಯಿಗಳು ಪಾಪಿಗಳು. ಅವ ರಿಬ್ಬರೂ ಪಾಪಿಗಳು. ಏಕೆಂದರೆ ಅವರ ತಂದೆ ತಾಯಿಗಳೂ ಕೂಡ ಪಾಪಿ ಗಳು. ಹೀಗೆಯೇ ಜಗತ್ತಿನ ಮೂಲದಿಂದಲೇ ಪಾಪದ ದಾರಿ ಹುಟ್ಟಿಬಂದಿದೆ. ವಿಷದ ಹೊಳೆ ಹರಿದು ಬಂದಿದೆ....

ಪರಮಾತ್ಮ ಆಟಕ್ಕೆಂದು ಜಗತ್ತು ನಿರ್ಮಿಸಿದ ಆದರೆ ಅವನು ನಿರ್ಮಿಸಿದ ಜಗತ್ತೇ ಅವನ ವಿರುದ್ಧವಾಗಿ ವರ್ತಿಸಿತು. ಕಾಮಿನಿ ಹೇಳುವಂತೆ-

"ದೇವ 'ಶಕ್ತಿ' ಎಂದು ಪುರುಷನನ್ನು ನಿರ್ಮಿಸಿದ 'ಸೌಂದರ್ಯ'ವೆಂದು ಸ್ತ್ರೀಯನ್ನು ನಿರ್ಮಿಸಿದ. ಆದರೆ ಇಬ್ಬರನ್ನು ಒಂದೇ ಮನೆಯಲ್ಲಿ ನಿರ್ಮಿಸಿದ. ತಾನೇ ಜನ್ಮ ಕೊಟ್ಟ. ಆದರೆ ಮಗ ಶಕ್ತಿವಂತ, ಉನ್ಮತ್ತನಾಗಿ ಕಾಮಿಯಾಗಿ ಕ್ರೂರನಾಗಿ ಸೌಂದರ್ಯವನ್ನು ಹಾಳು ಮಾಡಿದ. ಹುಡಿಗೂಡಿಸಿದ...."

ಹೀಗೆ ಜಗದ ಮೂಲದಲ್ಲಿಯೇ ಪಾಪವಡಗಿದೆ. ಜಗದ ಆರಂಭದ ಜೊತೆಗೆ ಪಾಪದ ಆರಂಭವೂ ಆಗಿದೆ. ಪಾಪದ ಅನ್ನವನ್ನು ತಿಂದೇ ಜಗ ಮುಂದೋಡುತ್ತಲಿದೆ.

ಪಾಪದಿಂದ ಜನ್ಮ ತಾಳಿ ಪಾಪವನ್ನೇ ತಿಂದು ಬದುಕುವವರು ಜನ್ಮ ಕೊಡುವದು ಪಾಪಕ್ಕೆ ಮಾತ್ರ. ಈ ಜಗತ್ತಿನಲ್ಲಿ ಕಾಣುವದು ಕಾಣದಿರುವದು ಎಲ್ಲವೂ ಪಾಪಮಯ.

ಅಂತೆಯೇ ಜಗದಲ್ಲಿ ಅನ್ಯಾಯ ನಡೆಯುತ್ತಿದೆ ನ್ಯಾಯದ ಹೆಸರಿನಲ್ಲಿ. ಪಾಪದ ಆಚರಣೆಯಾಗುತ್ತಿದೆ ಪುಣ್ಯದ ಮುಸುಕಿನಲ್ಲಿ.

ಇದೆಲ್ಲವೂ ಸತ್ಯ

ಆದರೆ ಕುಲಕರ್ಣಿಯವರ ವಿಚಾರವೇ ಬೇರೆ. ಅವರು ಹೇಳುತ್ತಾರೆ "ಇದೆಲ್ಲ ಅಸತ್ಯ" ಎಂದು.

"ಎಲ್ಲವೂ ಅಸತ್ಯ....ಈ ಜಗದಲ್ಲಿ ನಡೆಯುವದೆಲ್ಲವೂ ಒಳ್ಳೆಯದಕ್ಕೆ ಅನ್ಯಾಯ ಎನ್ನುವದು ಜಗದಲ್ಲಿ ಇಲ್ಲವೇ ಇಲ್ಲ. ಅನ್ಯಾಯ ಎನ್ನುವದು ಇದ್ದರೆ ಅದನ್ನು ತೊಡೆದು ಹಾಕಬೇಕು ಪಾಪಕ್ಕೆ ತಡೆ ಹಾಕಬೇಕು..."

"ಪಾಪವಿಲ್ಲದ ಪುಣ್ಯವಿಲ್ಲ. ಅನ್ಯಾಯವಿಲ್ಲದ ನ್ಯಾಯವಿಲ್ಲ. ಈ ಜಗತ್ತೆಲ್ಲವೂ ಪಾಪದಿಂದ ಜನಿತವಾಗಿದೆ ಎಂದು ಹೇಳುವದು ಶುದ್ಧ ತಪ್ಪು. ಜನಿತವಾದ ಜಗತ್ತು ಪಾಪಾಚರಣೆಯನ್ನು ಮಾಡುತ್ತಿರಬಹುದು. ಆದ ಪಾಪದಿಂದಲೇ ಅದರ ಜನನ ಪಾಪವೇ ಅದರ ತಾಯಿ. ಪಾಪವೇ ಅದರ ತಂದೆ.

ಎಂದು ನಾವು ಹೇಳುವದಾದರೆ ' ಪಾಪವೇ ಪರಮಾತ್ಮ ' ಎಂದು ಹೇಳ ಬೇಕಾದೀತು. "

... " ಪಾಪ ಎಂದರೆ ಪರಮಾತ್ಮ ಎನ್ನಬೇಕಾದೀತು. "

"ಜಗದಲ್ಲಿ ಅನ್ಯಾಯವಿಲ್ಲ ಪಾಪವಿಲ್ಲ ಎಂದು ಹೇಳಲಾಗದು. ಪಾಪವೂ ಇದೆ; ಪುಣ್ಯವೂ ಇದೆ. ನ್ಯಾಯವೂ ಇದೆ. ಅನ್ಯಾಯವೂ ಇದೆ. ಅದಕ್ಕೆ ಪರ ಮಾತ್ಮ ಹೇಳುತ್ತಾನೆ...."

"....ಪಾಪ ಬೆಳೆದಾಗ ಅಧರ್ಮ ಹೆಚ್ಚಿದಾಗ ಅನ್ಯಾಯ ತುಂಬಿದಾಗ ನಾನು ಅದೆಲ್ಲದರ ನಿವಾರಣೆಗೆ ಇಲ್ಲಿ ಅವತಾರ ತಾಳುವೆ " ಎಂದು...."

"...ದೇವನ ಅವತಾರ ಕಾರ್ಯ ಆಗೀಗ ನಡೆಯುತ್ತಲೇ ಇದೆ. ಅಂತೆಯೇ ಇಲ್ಲಿ ಪಾಪವಿಲ್ಲ ಎಂದು ಹೇಳಲಾಗದು. ಇಲ್ಲಿ ಅಧರ್ಮವಿಲ್ಲ ಎಂದು ಸಾರಲಾಗದು. ' ಆದರೆ ಎಲ್ಲವೂ ಒಳ್ಳೆಯದಕ್ಕೆ ' ಎನ್ನುವ ಮಾತಿನಲ್ಲಿ ನಾವು ವಿಶ್ವಾಸ ತಾಳಬೇಕು. ಪಾಪವಾದದ್ದು ಕೂಡ ಪುಣ್ಯವಂತನನ್ನು ಕರೆತರು ವದಕ್ಕೆ........"

"....ಅಧರ್ಮ ಬೆಳೆದದ್ದು ಕೂಡ ಭಗವಂತನ ಅವತಾರಕ್ಕೆ..."

"....ಈ ಸೃಷ್ಟಿಯ ಅಥವಾ ಇಂತಹ ಸೃಷ್ಟಿಯ ನಿರ್ಮಾಣವನ್ನು ಭಗ ವಂತ ಮಾಡಿದ್ದೇಕೆ ? ಎನ್ನುವ ಪ್ರಶ್ನೆಯೇ ಅಲ್ಲ...."

"...ಆದರೆ ಇದುವೇ ಮೂಲ ಪ್ರಶ್ನೆ....! "

"....ಈ ವಿಚಾರ ನಮ್ಮ ಮನದಲ್ಲಿ ಮೂಡಿದಾಗಲೇ ನಾವು ಭಗವಂತ ನನ್ನ ಮಲತಾಯಿಯನ್ನು ಕಾಡಿಸುವಂತೆ ಕಾಡಿಸಲು ಆರಂಭಿಸುತ್ತೇವೆ. ಅವ ನನ್ನು ಕೇಳುತ್ತೇವೆ. "

" ಏಕೆ ಈ ಸೃಷ್ಟಿಯನ್ನು ನಿರ್ಮಿಸಿದೆ...? " ಎಂದು

"...ಆದರೆ ದೇವ ಅದಕ್ಕೆ ಉತ್ತರಿಸುವದೇ ಇಲ್ಲ. ಬರಿ ಮುಗುಳ್ನಗೆ ಯೊಂದನ್ನು ಬೀರುತ್ತಾನೆ. ಅವನು ಉತ್ತರಿಸದೆ ಮುಗುಳ್ನಗೆ ಬೀರಿದ್ದನ್ನು ಕಂಡು ಕೆಲವರು ಆನಂದಿತರಾಗಿ ಸುಮ್ಮನಿದ್ದು ಬಿಡುತ್ತಾರೆ. ಇದೂ ಅವನ

ಹೊಯಿ ಎಂದು. ಇನ್ನು ಕೆಲವರು ಮಾತ್ರ ಅದೇ ಪ್ರಶ್ನೆಯನ್ನು ತಿರುತಿರುಗಿ ಕೇಳುತ್ತಾರೆ........"

" ಏಕೆ ಈ ಸೃಷ್ಟಿಯನ್ನು ನಿರ್ಮಿಸಿದೆ ? " ಎಂದು...."

" ಆಗಲೂ ಅವನು ಉತ್ತರಿಸುವದೇ ಇಲ್ಲ ಕೇಳುವವನ ಹಟ ಹೆಚ್ಚಾ ದಂತೆ ಹೇಳುವವನಲ್ಲಿ ಗಂಭೀರತೆ ಬೆಳೆಯುತ್ತದೆ. ಹಟ ಹೆಚ್ಚಾದರೂ ಉತ್ತರ ದೊರೆಯದೆ ಅನೇಕಸಲ ಕೇಳುವವ ವಿಚಿತ್ರ ಅವಸ್ಥೆಯಲ್ಲಿ ಮುಳುಗಿ ಹೋಗು ತ್ತಾನೆ. ಕೊನೆಗೆ ......."

"...ಕೊನೆಗೆ ಆ ಕೇಳುವವ ದೀನನಾಗುತ್ತಾನೆ. ದೀನನಾಗಿ ಅವ ನನ್ನು ಕರೆಯುತ್ತಾನೆ. ಕರೆದು ಕೇಳುತ್ತಾನೆ " ಏಕೆ ಈ ಸೃಷ್ಟಿಯನ್ನು ನಿರ್ಮಿ ಸಿದೆ ? " ಎಂದು. "

"....ಆಗಲೂ ಅವನಲ್ಲಿ ಉತ್ತರವಿಲ್ಲ ! ಕೇಳುವವನ ಪ್ರಶ್ನೆಗೆ ಹೇಳುವ ವನ ಮುಗುಳ್ನಗೆಯೊಂದೇ ಉತ್ತರ...."

"....ಕರೆದು ಕೇಳುವವನ ದೀನತೆ ಬೆಳದಂತೆ ಕೇಳಿಸಿಕೊಳ್ಳುವವ ಉತ್ತರಿಸಬೇಕಾದವ ಹತ್ತಿರ ಹತ್ತಿರಕ್ಕೆ ಬರುತ್ತಾನೆ...."

"....ತೀರ ಹತ್ತಿರ....ತೀರ ಹತ್ತಿರ....ಇನ್ನೂ...ಹತ್ತಿರ...."

"ಭಗವಂತ ಹತ್ತಿರಕ್ಕೆ ಬರತೊಡಗಿದರಂತೆ ಕೇಳುವವ ಕೇಳುವದನ್ನೇ ನಿಲ್ಲಿಸಿ ಅವನ ಮುಗುಳ್ನಗೆಯಲ್ಲಿ ಮುಳುಗುತ್ತಾನೆ ಕೊನೆಗೆ...."

"....ಹೇಳುವವ ಕೇಳುವವನ ಹೃದಯ ಪ್ರವೇಶಿಸುತ್ತಾನೆ....!..."

"....ಕೊನೆಗೆ ಕೇಳುವದಾರಿಗೆ ?...."

"....ಹೇಳುವವರು ಯಾರು ?...."

"....ಯಾರ ಪ್ರಶ್ನೆಗೆ ಯಾರು ಉತ್ತರ ಕೊಡುವವರು....?"

"....ಪ್ರಶ್ನೆಯೇ ಉತ್ತರ. ಉತ್ತರವೇ ಪ್ರಶ್ನೆ..."

"....ಅದಕ್ಕೇ ಹೇಳುವದು ......."

"....ಭಗವಂತ ಸೃಷ್ಟಿಯನ್ನು ನಿರ್ಮಿಸಿದ್ದೇಕೆ ? ಎನ್ನುವದು ಪ್ರಶ್ನೆಯೇ ಅಲ್ಲ. ?

"...ಪ್ರಶ್ನೆಯೇ ಅಲ್ಲವಾದ್ದರಿಂದ ಆದಕ್ಕೆ ಉತ್ತರವಿಲ್ಲ..."

"...ಆದರೆ ನಮ್ಮಂತಹ ಅಜ್ಞಾನಿಗಳು 'ಇದೆಲ್ಲವೂ ಭಗವಂತನ ಲೀಲೆ' ಮಾಯೆ ಎಂಬ ಉತ್ತರದಿಂದ ಸಮಾಧಾನ ತಾಳಬೇಕು...."

"....ಇದೆಂತಹ ಲೀಲೆ ?..."

"ಅನ್ಯಾಯ ಪಾಪ ಅಧರ್ಮ ಎಲ್ಲವೂ ಭಗವಂತನ ಲೀಲೆಯೇ ? ಭಗವಂತನೆಂದರೆ ಜಗದೋಧ್ಧಾರಕ ಎನ್ನುವಾಗ ಅವನು ಇಂತಹ ಲೀಲೆಯು ನ್ನೇಕೆ ಮಾಡುವ ಎನ್ನುವ ಪ್ರಶ್ನೆಯೂ ಸ್ವಾಭಾವಿಕವಾಗಿ ನಮ್ಮ ಮನದಲ್ಲಿ ಉದ್ಭವಿಸುವದು...."

"....ಆದರೆ ಇದಕ್ಕೆ ಜ್ಞಾನಿಗಳ ಉತ್ತರ "ಇದೆಲ್ಲವೂ ಸ್ವಾಭಾವಿಕ.... ಇದೆಲ್ಲವೂ ಜಗದ ಉದ್ಧಾರಕ್ಕೆ" ಎಂದು..."

"ಇದೆಲ್ಲವೂ ಜಗದ ಉದ್ಧಾರಕ್ಕೆ"

"... ಪಾಪ ಅನ್ಯಾಯ ಅಧರ್ಮ ಎಲ್ಲವೂ ಜಗದ ಉದ್ಧಾರಕ್ಕೆ"

ಹೀಗೆ ಹೇಳುವ ಕುಲಕರ್ಣಿಯವರ ಮಾತು ನನಗೆ ಸಮಾಧಾನ ಕೊಡುವದಿಲ್ಲ. ಆದಕ್ಕೆ ನನ್ನ ಅಜ್ಞಾನವೂ ಕಾರಣವಿದ್ದಿರಬಹುದು.

ಪಾಪ ಅನ್ಯಾಯ ಅಧರ್ಮಗಳು ಜಗದ ಉದ್ಧಾರಕ್ಕೆ ಎನ್ನುವ ಮಾತು ಗಳು ನನಗೆ ಹಿಡಿಸುವದೇ ಇಲ್ಲ.

ಅನ್ಯಾಯದಿಂದಲೇ ಜಗದ ಉದ್ಧಾರವಾಗುತ್ತಿದ್ದರೆ, ಒಳ್ಳೇಯ ಕಾರ್ಯ ವನ್ನು ಮಾಡುವದಾದರೂ ಏಕೆ ?

ನಾವು ಅನ್ಯಾಯವನ್ನು ಮಾಡುವದು ಸ್ವಾರ್ಥಕ್ಕಾಗಿ, ಸ್ವಾರ್ಥದಿಂದ ಸ್ವಾರ್ಥದ ಮೂಲ ವ್ಯಕ್ತಿಯ ಸುಖ.

ಪಾಪದ ಮೂಲವಾದರೂ ವ್ಯಕ್ತಿಯ ಸ್ವಾರ್ಥ, ವ್ಯಕ್ತಿಯ ಸುಖ.

ವ್ಯಕ್ತಿಗೆ ಸುಖದ ಆಶೆಯಿಲ್ಲದಿದ್ದರೆ ಆತ ಆದಾವ ಕಾರ್ಯವನ್ನೂ ಮಾಡುತ್ತಲೇ ಇರುವದಿಲ್ಲ. ಜಗತ್ತಿನ ಯಾವ ಕಾರ್ಯಕ್ಕೂ ಮೂಲ ವ್ಯಕ್ತಿಯ ಸುಖ, ವ್ಯಕ್ತಿಯ ಸ್ವಾರ್ಥ.

ಮೋಕ್ಷ ಬೇಕೆನ್ನುವ ಋಷಿಯ ವಿಚಾರವೂ ಸ್ವಾರ್ಥ.

ಇವರ ಸುಖಕ್ಕಾಗಿಯೇ ಅಲ್ಲವೆ ಮೋಕ್ಷವನ್ನು ಅಪೇಕ್ಷಿಸುವದು ?

ಅದೂ ಸ್ವಾರ್ಥವಲ್ಲವೆ....?

ಸುಖ....! ಸ್ವಾರ್ಥ . .!

ಸ್ವಾರ್ಥಿ ಸುಖಕ್ಕಾಗಿಯೇ ಅಲ್ಲವೆ ನನ್ನ ಅವಸ್ಥೆ ಹೀಗಾದುದು ?

ಮನುಷ್ಯನ ಜೀವನದ ಉದ್ದೇಶವೇ ಸುಖ ಸಂಪಾದನೆ.

ಆ ದಾರಿಯಿಂದ ಮುಂದುವರೆಯುವಾಗ ಅನ್ಯಾಯವಾಗುತ್ತದೆ. ಅಧರ್ಮ ವಾಗುತ್ತದೆ. ಅಧರ್ಮವಾಗುತ್ತದೆ....ಪಾಪಾಚರಣೆಯಾಗುತ್ತದೆ.

ಕುಲಕರ್ಣಿಯವರು ಹೇಳುತ್ತಾರೆ ಪಾಪ-ಅನ್ಯಾಯ ಅಧರ್ಮಗಳೆಲ್ಲವೂ ಜಗದ ಉದ್ಧಾರಕ್ಕೆಂದು.

ನನ್ನ ಪಾಪದಿಂದ ನನ್ನ ಉದ್ಧಾರವಾಗುವದೆ ?

ರಂಗನು ಮಾಡಿದ ಅನ್ಯಾಯದಿಂದ ಅವನ ಉದ್ಧಾರವಾಗಲಿದೆಯೆ ?

ನಾವಿಬ್ಬರೂ ಪಾಪಾಚರಣೆಯಿಂದ ಅಧರ್ಮಿಗಳಾಗಿದ್ದರಿಂದ ನಮ್ಮಿಬ್ಬರ ಉದ್ಧಾರವಾಗಲಿದೆಯೇ....?

ಅಧರ್ಮ ಅನ್ಯಾಯ ಪಾಪದಿಂದ ಜಗದ ಉದ್ಧಾರವಾಗುತ್ತಿದ್ದರೆ ಜನರೆಲ್ಲರೂ ಒಬ್ಬರು ಇನ್ನೊಬ್ಬರನ್ನು 'ಪಾಪಿ' ಎಂದು ಹಳಿಯುವದೇಕೆ ? ಇನ್ನೊಬ್ಬನು ಅನ್ಯಾಯ ಮಾಡುತ್ತಿರುವನೆಂದು ಕೀಸರಿಡುವದೇಕೆ ?

ಇದೆಲ್ಲವೂ ಭಗವಂತನ ಲೀಲೆ ಎಂದು ಹೇಳಿ ಸಮಾಧಾನ ತಾಳಬೇಕು ಏಕೆಂದರೆ ಇದು ಬಿಡಿಸಲಾರದ ಸಮಸ್ಯೆಯಾಗಿರಬಹುದು.

ಕುಲಕರ್ಣಿಯವರ ಸಹವಾಸದಲ್ಲಿದ್ದುಕೊಂಡು ಅನೇಕ ಪ್ರಶ್ನೆಗಳ ಬಗ್ಗೆ ವಿಚಾರ ಮಾಡುವದನ್ನು ಕಲಿತಾಗಿದೆ. ಆದರೆ ಯಾವ ಸಮಸ್ಯೆಗೂ ಪರಿಹಾರ ದೊರಕದಾಗಿದೆ.

ಅವರು ಹೇಳುತ್ತಾರೆ ' ಎಲ್ಲವೂ ಕಲ್ಯಾಣಕ್ಕಾಗಿ ' ಎಂದು.

ನನ್ನ ಅದಃಪತನ ಹೇಗೆ ನನ್ನ ಕಲ್ಯಾಣದ ಮಾರ್ಗ ತೆರೆಯುವದು....?

ಕಲ್ಯಾಣವಾಗಬೇಕಾದರೆ ಒಳ್ಳೆಯ ಮಾರ್ಗವನ್ನು ಹಿಡಿದು ಸಾಗ ಬೇಕು ಒಳ್ಳೆಯ ಮಾರ್ಗದಿಂದಲೇ ಒಳ್ಳೆಯ ಜೀವನ.

ನಾನು ಒಳ್ಳೆಯ ಮಾರ್ಗ ಹಿಡಿದಿದ್ದರೆ...?

ನಾನು ದಾರಿ ತಪ್ಪಿರದಿದ್ದರೆ....?

ಆದರೆ ಹಣೆಯಲ್ಲಿ ಬರೆದದ್ದು ಅನುಭವಿಸಲೇಬೇಕು

ಯಾವುದನ್ನು ಅರಿಯದ ನಾನು ದಾರಿತಪ್ಪಿ ಅಡವಿ ಸೇರಿದಂತಾಯಿತು

ಇದರಲ್ಲಿ ನನ್ನದಾದರೂ ತಪ್ಪು ಏನು ? ಅಜ್ಞಾನಿ ನಾನು. ತಿಳಿಯಿಚ ಹುಂಬ ವಯಸ್ಸು ನನ್ನದು. ಅದರಲ್ಲಿ ಮನೆಯ ವಾತಾವರಣ ಮಾರ್ಗತಪ್ಪಿ ಸಿತು.

ಮನೆ... ....!

ಅದೆಂತಹ ಮನೆ ? ಮನೆ....?

ಮನೆ ಎಂದರೆ ನೆರಳಿದ್ದ ಜಾಗೆಯಲ್ಲ. ನಾಲ್ಕು ಗೋಡೆಗಳನ್ನು ಕಟ್ಟಿ ನೆರಳಿಗೆಂದು ಹಂಚು ಹಾಕಿದರೆ ಮನೆಯಾದೀತೆ ?

ಧರ್ಮಶಾಲೆ........

ಧರ್ಮಶಾಲೆಯಲ್ಲ. ಅದಕ್ಕಿಂತ ಆಚೆಗಿನದು.

ಧರ್ಮಶಾಲೆ ಕಟ್ಟಿಸುವವರ ಮನದಲ್ಲಿ ಧರ್ಮದ ಭಾವನೆ ಇರುತ್ತದೆ. ಕಟ್ಟಿಸಿದ ಮನೆಯಲ್ಲಿ ನಾಲ್ಕು ಜನ ವಾಸಮಾಡಲಿ ಎನ್ನುವ ಬುದ್ಧಿಯಿರು ತ್ತದೆ. ಕಟ್ಟಿಸಿದ ಧರ್ಮಶಾಲೆಯಲ್ಲಿ ನಾಲ್ಕು ಜನ ಬಂದು ತಂಗುತ್ತಾರೆ. ವಿಶ್ರಾಂತಿ ಹೊಂದುತ್ತಾರೆ.

ಆದರೆ ನಾನಿದ್ದ ಮನೆ........?

ಅದು ನೆರಳಿನ ಕೆಳಗಿನ ನೆಲ.

ಅಲ್ಲಿ ಮಮತೆಯಿಲ್ಲ. ಮಮತೆಯಿಲ್ಲದ ಮನೆ ಮನೆಯಲ್ಲ.

ಅದು ಮನೆಯಾಗಿರಲಿಲ್ಲ.

ಅಲ್ಲಿ ನನಗೆ ಜನ್ಮ ಕೊಟ್ಟ ತಾಯಿಯಿದ್ದಳು !

ತಾಯಿ....!

ಅವಳು ತಾಯಿಯಲ್ಲ. ಮಕ್ಕಳನ್ನು ಹೆರುವ ಯಂತ್ರ.

ಯಂತ್ರದಂತೆ ಮಕ್ಕಳನ್ನು ಹೆರುತ್ತಿದ್ದಳು — ಗಿರಣಿ ಬಟ್ಟೆಯನ್ನು ಉತ್ಪಾದಿಸುವಂತೆ. ಮಕ್ಕಳನ್ನು ಹೆತ್ತ ನಂತರ ಅವಳ ಕೆಲಸ ತೀರಿತು. ತನ್ನ ಹೊಟ್ಟೆಯಿಂದ ಹುಟ್ಟಿದ ಮಗು ಇದ್ದರೂ ಒಂದೇ ಸತ್ತರೂ ಒಂದೇ ಆದರ ಕಡೆಗೆ ಅವಳ ಲಕ್ಷ್ಯವಿರಲಿಲ್ಲ

ಅಂತೆಯೇ ಹಿರಿಯಳಾಗಿ ಹುಟ್ಟಿದ ನಾನು ಅವಳು ಹೆತ್ತ ಮಕ್ಕಳಿಗೆಲ್ಲ ನಾನು ತಾಯಿಯಾಗಬೇಕಾಗುತ್ತಿತ್ತು.

ತಿಂದು ಬೀಸಾಕಿದ ಎಂಜಲೆಲೆಗೆ ತಿಪ್ಪೆ ಆಶ್ರಯವಾಗುವಂತೆ ಅವಳ ಹೊಟ್ಟೆಯಿಂದ ಹೊರಕ್ಕೆ ಬಂದ ಕೂಸುಗಳಿಗೆಲ್ಲ ನಾನು ಆಶ್ರಯವಾಗಿರುತ್ತಿದ್ದೆ.

ಒಂದು ....ಎರಡು...ಹತ್ತು........

ಹುಟ್ಟಿದ್ದಕ್ಕಿಂತ ಸತ್ತವೇ ಹೆಚ್ಚು....

ಸತ್ತವರಲ್ಲಿ ನಾನೂ ಒಬ್ಬಳಾಗಿದ್ದರೆ...?

ಈ ವಿಚಾರ ಇಂದಿಲ್ಲ ಅಂದೂ ಬರುತ್ತಿತ್ತು. ಆದರೂ ನಾನು ಸಾಯಲಿಲ್ಲ. ಅಂದೇ ಚಿಕ್ಕವಳಿದ್ದಾಗಲೇ ಸತ್ತು ಹೋಗಿದ್ದರೆ....?

ಹುಟ್ಟಿದ ಕ್ಷಣದಲ್ಲಿಯೇ ಸತ್ತಿದ್ದರೆ...?

ತಾಯಿ ಕೂಡ ಇದೇ ಮಾತನ್ನು ಆಗಾಗ ಹೇಳುತ್ತಿದ್ದಳು.

'ನೀನು ಹುಟ್ಟಿದ ಕೂಡಲೆ ಸತ್ತು ಹೋಗಿದ್ದರೆ ನಿಶ್ಚಿಂತಳಾಗುತ್ತಿದ್ದೆ' ಎಂದು ತಂದೆಯೂ ಇಂತಹ ಮಾತನ್ನು ಹೇಳುತ್ತಿದ್ದ.

" ಇವಳು ಸತ್ತಿದ್ದರೆನೇ ಒಳ್ಳೆಯದಿತ್ತು " ಎಂದು

ಆದರೆ ಅವೆಲ್ಲ ಮಾತುಗಳು ನನಗೆ ಆಶೀರ್ವಾದವಾಗಿದ್ದವು. ಹರಕೆಯಾಗಿದ್ದವು. ನಾನು ಸತ್ತು ಹೋಗದಂತೆ ಕಾಯುತ್ತಿದ್ದವು.

ಆದರೂ ಅವು ತಾಳಲಸಾಧ್ಯವಾಗಿರುತ್ತಿದ್ದವು. ಅವರು ಕೋಪಿಸುವದು ಕೂಗುವದು ಶಾಪಿಸುವದು, ನನ್ನ ತಪ್ಪಿಗಾಗಿ ಅಲ್ಲ. ನನ್ನ ಅಪರಾಧಕ್ಕಾಗಿ ಅಲ್ಲ !

ತಮ್ಮ ತಪ್ಪಿಗಾಗಿ, ತಾನು ಹೆತ್ತ ತನ್ನ ಮಗುವನ್ನು ತಾನು ಸಮಾಧಾನ ಪಡಿಸಲಾಗದ್ದಕ್ಕಾಗಿ !

ಮಕ್ಕಳು ಎಚ್ಚರಾದಾಗಿನಿಂದ ಮಲಗುವವರೆಗೆ ನನ್ನ ಕೆಲಸ ಅವರ ಆರೈಕೆ. ಅವು ಅಳದಂತೆ ನೋಡುವದು. ಅವುಗಳ ಬಟ್ಟೆ ಬರೆ ಸರಿಮಾಡುವದು ಅವುಗಳ ಊಟ ಉಪಚಾರ ನೋಡುವದು....

ತಾಯಿಯ ಎಲ್ಲ ಕಾರ್ಯಗಳನ್ನು ನಾನು ಮಾಡಬೇಕಾಗುತ್ತಿತ್ತು. ಏಕೆಂದರೆ ತಾಯಿಯ ಸಮಸ್ತ ಶಕ್ತಿ ಹರಿದು ಮಕ್ಕಳ ದೇಹದಲ್ಲಿ ರಕ್ತವಾಗಿದ್ದಿತು. ಮಾಂಸವಾಗಿದ್ದಿತು.

ತಾಯಿ ಎಂದರೆ ಎಲುಬಿನ ಹಂದರಕ್ಕೆ ತೊಗಲಿನ ಬಟ್ಟೆಸುತ್ತಿ ಮಾಡಿದ ಗೊಂಬೆ. ಅಂತಹ ದೇಹದಿಂದ ಮಕ್ಕಳಿಗೆ ಹೇಗೆ ಜನ್ಮ ಕೊಡುತ್ತಿದ್ದಳೊ ?

ನನ್ನನ್ನು ಅವಳು ಹೆತ್ತಿದ್ದಳು ಆದರೆ ನಾನು ಹೆತ್ತವಳ ಪ್ರೀತಿ ಕಂಡಿರಲಿಲ್ಲ; ಆದರಿಂದ ನಾನು 'ತಾಯಿಯ ಮಗಳೆ ? ' ಎಂಬ ವಿಚಾರ ಆಗಾಗ ನನ್ನಲ್ಲಿ ಬರುತ್ತಿತ್ತು.

ನನ್ನ ದೇಹಕ್ಕೆ ವಿಶ್ರಾಂತಿ ಎಂಬುದಿರಲಿಲ್ಲ. ವಿಶ್ರಾಂತಿಯಿಲ್ಲದೆ ಅಖಂಡವಾಗಿ ಕೆಲಸ ಮಾಡಿ ಎಲ್ಲಿಯಾದರೂ ಕೊಂಚ ತಪ್ಪಿದರೆ ತೀರಿತು....

ಅಂದು ತಂದೆಯಲ್ಲಿ ವಿಶ್ವಾಮಿತ್ರ ದೂರ್ವಾಸರು ಒಂದುಗೂಡುತ್ತಿದ್ದರು.

ತಂದೆ....!

ಅವನದೂ ಒಂದು ರೀತಿ. ಮಕ್ಕಳಿಗೆ ಜನ್ಮ ಕೊಡುವದು. ಜನ್ಮ ಕೊಟ್ಟ ಮಕ್ಕಳ ಹೊಣೆಗಾರಿಕೆಯನ್ನು ಪೂರ್ಣ ಮಾಡುವದಕ್ಕಾಗಿ ದುಡಿಯುವದು. ಹಗಲೆಲ್ಲ ಹೊರಗೆ- ದುಡಿದ ಬಂದ ಆತನಿಗೆ ತನ್ನ ಮಕ್ಕಳ ಕಿರಿ ಕಿರಿ ಸಹನವಾಗುತ್ತಿರಲಿಲ್ಲ.

ಆದಕ್ಕಾಗಿ ಶಿಕ್ಷೆ ನನಗೆ...!

ಇದೆಲ್ಲದರ ಜೊತೆಗೆ ನಾನು ಶಾಲೆಗೂ ಹೋಗಬೇಕಾಗುತ್ತಿತ್ತು. ಏಕೆಂದರೆ ಕಲಿಯದ ಹುಡುಗಿಯನ್ನು ಮದುವೆ ಮಾಡಿಕೊಳ್ಳುವವರಾರು ?

ಮಮತೆಯಿಲ್ಲದ ಮನೆ. ಮಮತೆ ಮಾಡದ ತಾಯಿ. ಮಮತೆಯ ಹೆಸರನ್ನೇ ಅರಿಯದ ತಂದೆ....

ನಾನು ಮಮತೆಗಾಗಿ ಹಸಿದಿದ್ದೆ

ಮಮತೆಯಿಲ್ಲದ ಮನೆಯಲ್ಲಿರುವದು ಮುಳ್ಳಿನ ಹಾಸಿಗೆ ಮೇಲೆ ನಡೆಯುವದಕ್ಕಿಂತ ಕಷ್ಟದಾಯಕವಾಗಿತ್ತು.

ಈ ಕಷ್ಟದಿಂದ ಮುಕ್ತಿ ದೊರಕುವದು ಮನೆಯ ಹೊರಗಿದ್ದಾಗ ಮನೆಯ ಹೊರಗಿನವರು ಮಮತೆಯಿಂದ ಕರೆದಾಗ ......

ಮನೆಯಲ್ಲಿ ಮಮತೆಯಿರಲಿಲ್ಲ. ಬೇರೆ ಮನೆಯ ಮಮತೆ ನನ್ನನ್ನು ಎಳೆಯುತ್ತಿತ್ತು......

ಮಮತೆಯ ಮನೆ....

ಅದೇ ಎದುರಿನ ಮನೆ....

ಅದೇ ರಂಗನ ಮನೆ....

ರಂಗನ ತಾಯಿ ಕರೆಯುತ್ತಿದ್ದಳು.

“ಅಯ್ಯೋ ಪಾಪ .. ಎಷ್ಟೊಂದು ದುಡಿಯುವಿಯಲ್ಲ ಮಗಳೆ......” ಎಂದಾಗ ತಡೆಯದೆ ನನ್ನ ಕಂಗಳಲ್ಲಿ ನೀರು ತುಂಬುತ್ತಿದ್ದವು.

“ಬಿಡು....ಹಾಗೆಲ್ಲ ಕಣ್ಣೀರಿಡಬೇಡ. ಹೆಂಗಸಿನ ಹೆತ್ತಮನೆಯೇನೋ ಕಡೆಯವರೆಗಿರುವದಿಲ್ಲ” ಎಂದು ಕಣ್ಣೀರು ಒರೆಸಿದಾಗ ನಾನು ಈ ಲೋಕವನ್ನೇ ಮರೆಯುತ್ತಿದ್ದೆ.

ಅಂತಹವೇ ನುಡಿಗಳು ಮಮತೆಯ ಮಾತುಗಳು ಮನೆಯಲ್ಲಿ ದೊರೆತಿದ್ದರೆ......?

ದೊರೆತಿದ್ದರೆ........?

ಸತ್ತ ಸಂಗತಿ ಸತ್ತಿರದಿದ್ದರೆ....ಎಂದಂತೆ...

ರಂಗನ ತಾಯಿಯ ಮಮತೆ ನನ್ನನ್ನು ಎಳೆಯುತ್ತಿತ್ತು. ಬಿಡುವು ದೊರೆತಾಗ ಹೋಗುವ ನಾನು ಬಿಡುವು ಮಾಡಿಕೊಂಡು ಹೋಗತೊಡಗಿದೆ. ರಂಗನ ತಾಯಿಯ ಮನೆಗೆ.

ಅದೇ ವೇಳೆಗೆ ನನ್ನ ಬಟ್ಟೆ ಬರೆಯಲ್ಲಿ ಬದಲಾವಣೆಯಾಗಿತ್ತು. ಚಿಕ್ಕ ವಳಿದ್ದಾಗ ತೊಡುವ ಬಟ್ಟೆಗಳು ದೇಹಕ್ಕೆ ಒಗ್ಗುತ್ತಿರಲಿಲ್ಲ. ದೇಹ ಬೆಳೆದಿತ್ತು. ಕ್ಷಣ ಕ್ಷಣಕ್ಕೂ ಬೆಳೆಯುತ್ತಿತು.

ಆ ಕ್ಷಣಕ್ಷಣಕ್ಕೂ ಬೆಳೆಯುವ ದೇಹ ಅರಿಷ್ಟಕ್ಕೆ ಆಮಂತ್ರಣ ಕೊಡುತ್ತಿತ್ತು.

ಆದರೆ ಆದರ ಅರಿವು ಅಂದು ಇರಲಿಲ್ಲ.

ದೇಹ ಕಸುವಿನ ರಾಕ್ಷಸ. ಮನ ಅದರ ಸಾರಥಿ.

ಸಾರಥಿ ಇಲ್ಲದಾಗ ತಿಂದು ಬೆಳೆದ ಗೂಳಿಯಾದ ದೇಹ ನಿಂತಲ್ಲಿ ನಿಲ್ಲದೆ ನೆಗೆದು ಬೀಳುತ್ತದೆ. ಜಿಗಿಯುತ್ತದೆ.

ಹಾಗೆಯೇ ಇತ್ತು ನನ್ನ ಪರಿಸ್ಥಿತಿ.

ಅಂತಹ ವೇಳೆಯಲ್ಲಿ ಮಂಗ ಮನವು ಸಾರಥಿಯ ಪಟ್ಟಕ್ಕೆ ಬಂದಿತು. ಡೇಹ ರಥದ ಸೂತ್ರಗಳು ಮನದ ಅಧಿಪತ್ಯಕ್ಕೆ ಬಂದವು.

ಮುಗುದಾಣವಿಲ್ಲದ ಬೆಳೆದ ಗೂಳಿಗೆ ಮಂಗಮನ ಮಾಲಕ.

ನುಗ್ಗಿತು ಕಂಡಲ್ಲೆಲ್ಲ. ತನ್ನದಿಲ್ಲ ಇನ್ನೊಬ್ಬರದಿಲ್ಲ. ಎದುರಿಗೆಕಂಡದ್ದು ತನ್ನದು ಎನ್ನುವ ರೀತಿಯಲ್ಲಿ ಧಾವಿಸುತ್ತಿತ್ತು ದೇಹ ಮನದ ಸಾರಥಿಯ ಆಧಿಪತ್ಯದ ಕೆಳಕ್ಕೆ.

ಮಮತೆಯಿಲ್ಲದ ಮನೆ.

ಮಮತೆಯಿಂದ ಕರಯುವ ಮನೆ.

ಕರೆಯುವ ಮನೆಯಲ್ಲಿ ಈಗ ಮಮತೆಯೊಂದೇ ಇದ್ದಿರಲಿಲ್ಲ ಈಗ ಅದರ ಜೊತೆಗೆ ಆಕರ್ಷಣವೂ ಇತ್ತು.

ಆ ಆಕರ್ಷಣೆ... ಅವರ ಮಗ.

ಅವರ ಮಗ ರಂಗ.

ನಾನು ಅವರ ಮನೆಗೆ ಹೋಗಿರದಿದ್ದರೆ...?

ಅವರು ನನ್ನನ್ನು ಪ್ರೇಮದಿಂದ ಕರೆಯದೆ ಇದ್ದರೆ....?

ನನ್ನ ಮನೆಯಲ್ಲಿಯೇ ಪ್ರೇಮವಿದ್ದರೆ....?

ಎಲ್ಲವೂ ಮುಗಿದು ಹೋದ ಪ್ರಶ್ನೆಗಳು. ಯಾವ ಪ್ರಶ್ನೆಯಿಂದಲೂ ಇಂದು ಸಮಾಧಾನವಾಗುವಂತಿಲ್ಲ. ಯಾವ ಉತ್ತರದಿಂದಲೂ ಹಿಂದಿನ ಅವಿಚಾರ ಸುವಿಚಾರವಾಗುವದಿಲ್ಲ....ಎಂದೆಂದಿಗೂ ಇಲ್ಲ.

ಅವಿಚಾರ ಸುವಿಚಾರವಾಗಬಹುದು. ಆದರೆ ಅದಕ್ಕೆ ಮೊದಲು ಅವಿಚಾರಿಯಾದವ ಸುವಿಚಾರಿಯಾಗಿ ಬರಬೇಕು.

ರಂಗ ಸುವಿಚಾರಿಯಾಗಬೇಕು.

ರಂಗ.......

ನಿಜವಾಗಿಯೂ ರಂಗ ಆಕರ್ಷಕ.

ಸಿರಿವಂತ ತಂದೆ ತಾಯಿಗಳ ಸಲಿಗೆಯಿಂದ ಬೆಳೆದ ಮಗ. ಬೇಡಿದ್ದಕ್ಕೆ ಅವನ ತಾಯಿ ಇಲ್ಲವೆನ್ನುತ್ತಿರಲಿಲ್ಲ · ತಾಯಿಯ ಮಾತನ್ನು ತಂದೆ ತೆಗೆದು ಹಾಕುತ್ತಿರಲಿಲ್ಲ.

ನನ್ನ ತಂದೆ ತಾಯಿಗಳು ಅವನ ತಂದೆ ತಾಯಿಗಳಂತಿದ್ದರೆ....?

ಅವನ ತಂದೆ ತಾಯಿಗಳೇ ನನ್ನ ತಂದೆ ತಾಯಿಗಳಾಗಿದ್ದರೆ...?

ಅವನ ತಂದೆ ತಾಯಿಗಳು ನನ್ನ ತಂದೆ ತಾಯಿಯಾಗಿದ್ದರೆ ನಾನು ಹಾಳಾಗುತ್ತಲೇ ಇರಲಿಲ್ಲ ಏಕೆಂದರೆ ರಂಗ ನನ್ನ ಅಣ್ಣನಾಗುತ್ತಿದ್ದ. ಅಣ್ಣ ತಂಗಿಯರ ನಡುವೆ ಗಂಡ ಹೆಂಡಿರ ಸಂಬಂಧ ಬೆಳೆಯುವದಾದರೂ ಹೇಗೆ ?

ನಾನು ರಂಗ — ಅಣ್ಣ ತಂಗಿ...

ಅಹುದು ಆಗೀಗ ರಂಗನ ತಾಯಿ ಹಾಗೆ ಹೇಳುತ್ತಿದ್ದರು. ರಂಗ ಕಾಲೇಜಿನಿಂದ ಬಂದಕೂಡಲೇ ನಾನು ಲಜ್ಜೆಯಿಂದ ಎದ್ದುಹೋಗಲು ಯತ್ನಿಸಿದಾಗ ಅವನ ತಾಯಿ—

" ಅವನಿಗೇಕೆ ಅಷ್ಟು ನಾಚುವಿ ? ಅವ ನಿನ್ನ ಅಣ್ಣನಿದ್ದಂತೆ ." ಎನ್ನುತ್ತಿದ್ದರು.

ಆದರೆ ಅಂದು ಅವನ ತಾಯಿ ' ರಂಗನು ಅಣ್ಣ ಎಂದರೆ ನನಗೆ ಹಿತವೆನ್ನಿಸುತ್ತಿರಲಿಲ್ಲ. ನೋವಾಗುತ್ತಿತ್ತು. ಚಳಿ ಜ್ವರ ಬಂದಾಗ ಸೇವಿಸುವ ಔಷಧವಾಗುತ್ತಿತ್ತು. ಅವರ ಮಾತುಗಳು.

ಅಂದಿನ ಮಾತುಗಳು ಹಿತವಾಗಿದ್ದರೆ... ....?

ಅವರ ಅಂದಿನ ಮಾತಿನಂತೆ ನಾನು ರಂಗನ ತಂಗಿಯಾಗಿಯೇ ಉಳಿದಿದ್ದರೆ....?

ರಂಗನು ನನ್ನನ್ನು ತಂಗಿಯಂತೆ ಕಂಡಿದ್ದರೆ....?

ತಂಗಿಯಂತೆ....!

ಯಾರು ಯಾರನ್ನು ತಂಗಿಯಂತೆ ಕಾಣತ್ತಾರೆ......? ಅದರಿಂದ ದೊರಕುವ ಲಾಭವೇನು ? ದಾರಿಯಿಂದ ಸಾಗುವ ಹೆಣ್ಣು ತಮಗೆ ದೊರಕ ಬೇಕೆಂದು ಮನದಲ್ಲಿ ಮಂಡಿಗೆ ಹಾಕುತ್ತ ಕಾಡುಮೃಗದಂತೆ ಮೊಗ ನೋಡುತ್ತ ಕುಳಿತವರಿಂದಲೇ ತುಂಬಿದ ಈ ಜಗದಲ್ಲಿ ಅಂತಹ ಭಾವನೆಗೆ, ಸದ್ಭಾವನೆಗೆ ಆಸ್ಪದವೆಲ್ಲಿ.?

ಕಾಮಿನಿ ಹೇಳುವಂತೆ "ಗಂಡಸರೆಲ್ಲ ಒಂದೇ. ಹಿರಿಯರಿಂದ ಕಿರಿ ಯರವರೆಗೆ ದೇವನಿಂದ ದಾನವನವರೆಗೆ ಎಲ್ಲರೂ ಹೆಣ್ಣಿನ ಮಾನ ಹರಣಕ್ಕೆ ಸಿದ್ಧರಾದವರೇ..." ಅಣ್ಣ, ತಂಗಿ, ತಾಯಿ ಎನ್ನುವ ವಿಚಾರ ಭಾವನೆ ಯಾರೂ ತಪ್ಪಿ ಕೂಡ ಮಾಡುವದಿಲ್ಲ. ತರುಣಿ ತನಗೆ ದೊರೆಯಬೇಕು ಎಂದು ಅವಳ ಹಿಂದಿನ ನೆರಳಾಗಿ ತಿರುಗುವ ಗಂಡುಗಳಲ್ಲಿ ಹೆಣ್ಣಿಗಾಗಿ ಮಾತೃಭಾವನೆ ಮೂಡಿದರೆ ಸ್ವರ್ಗದಲ್ಲಿ ಇರುವದಕ್ಕೆ ಜಾಗೆ ಸಾಲದಾದೀತು. ನರಕಕ್ಕೆ ಬರುವವರು ಯಾರೂ ಇಲ್ಲದ್ದರಿಂದ ನರಕವನ್ನು ಶುಚಿಗೊಳಿಸಿ ಸ್ವರ್ಗದ ವಿಸ್ತರಣೆ ಮಾಡಬೇಕಾದೀತು !

ಆದರೆ ಅಂತಹ ಭಾವನೆ ಮೂಡುವದು ಸಾಧ್ಯವೆ....?

"ಅಸಾಧ್ಯವಲ್ಲ" ಎಂದು ಕುಲಕರ್ಣಿಯವರ ವಿಚಾರ.

'ಸಾವಿರ ಯುಗಕ್ಕೂ ಸಾಧ್ಯವಿಲ್ಲ' ಎಂದು ಹೇಳುವಳು ಕಾಮಿನಿ.

ಇಬ್ಬರೂ ಅವರವರ ವಿಚಾರದಲ್ಲಿ ಸರಿ.

ಸಾವಿರ ಯುಗಕ್ಕೂ ಸಾಧ್ಯವಿಲ್ಲವಾದರೆ ಹಾಳಾದ ಹೆಣ್ಣುಗಳ ಕಣ್ಣೀ ರಿನಲ್ಲಿ ಭೂಲೋಕವೆಲ್ಲ ಹರಿದು ಹೋದೀತು. ಪ್ರಳಯವಾದೀತು. ಕಲಿ ಯುಗದ ಅಂತ್ಯವಾದೀತು. ಮತ್ತೆ ಭಗವಾನ ವಿಷ್ಣು ಸೃಷ್ಟಿಗಾಗಿ ಆಲ ದೆಲೆಯ ಮೇಲೆ ಮಲಗಿ ನೆಲದ ನೆಲೆಯಿಲ್ಲದೆ ತೇಲಾಡಬೇಕಾದೀತು.

ಸಾಧ್ಯವಿದ್ದರೆ ಜಗತ್ತು ಸುಂದರವಾದೀತು. ಮಲ್ಲಿಗೆಯ ಹಂದರದಲ್ಲಿಯ ಹೂವು ಬಾಡುವದು ನಿಜವಾದರೂ ಅರಳುವ ಪೂರ್ವದಲ್ಲಿ ಕಿತ್ತು ಕಾಲ್ಕೆ ಳಕ್ಕೆಸೆಯುವದು ಅದಾವ ನ್ಯಾಯ....? ಬಳಿಯಲ್ಲಿ ಮೊಗ್ಗಾಗಿ ಅರಳಿ ಹೂವಾಗಿ ಸುಗಂಧವನ್ನು ಬೀರುವದು ಮಲ್ಲಿಗೆ. ಹಾಗೆ ಮಾಡಿದರೆ ಅದರ ಜೀವನದ ಸಾರ್ಥಕತೆ ಅದರಿಂದ ಜೀವಗಳ ಸಾರ್ಥಕತೆ.

ಅಂತಹ ಹೂಗಳು ತನ್ನ ಆಪಾದ ಮಸ್ತಕದಲ್ಲಿ ಬಂದು ನೆಲೆಸಿದಾಗ ಭಗವಂತನಿಗೆ ತೃಪ್ತಿ ಆನಂದ ಉಲ್ಹಾಸ. ಆತ ತೃಪ್ತಿಯಿಂದ ಹರಿಸುವನು. ಹೂಗಳನ್ನು ಆತನ ಹರಿಕೆಯಿಂದ ಒಂದಕ್ಕೆ ಹತ್ತಾಗಿ ಹತ್ತಕ್ಕೆ ಸಾವಿರಾಗಿ ಬೆಳೆಯುವದು ಮಲ್ಲಿಗೆಯ ಸಂತತಿ. ಅದರಿಂದ ಜನಕ್ಕೆ ತೃಪ್ತಿ, ಜಗಕ್ಕೆ ತೃಪ್ತಿ, ಆನಂದ, ಉಲ್ಹಾಸ.

ಮಲ್ಲಿಗೆಯ ಬಾಳಿನಂತಿದೆ ಹೆಣ್ಣಿನ ಜೀವನ.

ದೇವನಂತಹ ಪತಿಯ ಅರ್ಧಾಂಗಿಯಾದಾಗ ಅದರಿಂದ ಪತಿಗೆ ಆನಂದ. ಆ ಪತಿಯು ಆನಂದದಿಂದ ಅವಳ ಜೀವನದ ಸಾರ್ಥಕತೆ ಅದರಿಂವ ಜಗದ ಕಲ್ಯಾಣ.

ಆನಂದ, ಉಲ್ಹಾಸ, ತೃಪ್ತಿಯಿಂದಿದ್ದ ಸತಿಪತಿಗಳು ಮಲ್ಲಿಗೆಯಂತೆ ಮಧುರ ಸುಗಂಧವನ್ನು ಹರಡುವರು. ಜಗದಲ್ಲಿ ಅದರ ಆನಂದ ಅವರಿಬ್ಬರಿ ಗಾಗಿ ಅಲ್ಲ. ಅನಂತ ಜನರಿಗೆ, ಅಲ್ಲಿ ವಾಸಿಸುವವರಿಗೆ.

ಆದರೆ ದೇವರಂತಹ ಪತಿಯಾಗಬೇಕಾದವನು ದೈತ್ಯನಂತಾಗಿ ಜಗ ತ್ತಿಗೆ ಸಂತಸ ಬೀರಲಿರುವ ಭವಿತವ್ಯವನ್ನು ಉದ್ವಸ್ತಮಾಡುವನು.

ಆದರಿಂದ ಕಲ್ಯಾಣ ಯಾರಿಗೆ...?

ಅವನಿಗೆ ಅವನಿಂದ ಉಧ್ವಸ್ತಳಾದವಳಿಗೆ ಅವರಿಬ್ಬರಿಂದ ಅವರಿಬ್ಬರ ಸುತ್ತಮುತ್ತು ಇರುವವರಿಗೆ ಅವರು ವಾಸಿಸುವ ಜಗಕ್ಕೆ

ಬೆಂಕಿಯಿಂದ ಹಾರಿದ ಒಂದೇ ಒಂದು ಕಿಡಿಯಿಂದ ಜಗತ್ತು ಉರಿದೇಳ ಬಹುದು. ಹಾಲಾಹಲದ ಒಂದೇ ಒಂದು ಹನಿಯಿಂದ ಜಗತ್ತು ನಾಶ ವಾಗುವದು.

ಬೆಂಕಿಯ ಕಿಡಿ ಎಂದರೆ ಗಂಡಸು.

ಅಹುದು ಗಂಡಸು, ಹೆಂಗಸಲ್ಲ.

ಆದರೆ ಕುಲಕರ್ಣಿಯವರು ಹೇಳುವರು "ಗಂಡಸೊಬ್ಬನೇ ಅಲ್ಲ, ಆವನ ಜೊತೆಗೆ ಹೆಂಗಸು ಕೂಡಿದಾಗ, ಅವನ ರಾಗಕ್ಕೆ ಸ್ತ್ರೀ ತಾಳಹಾಕಿದಾಗಲೇ ಅನಾಹುತ ಅತ್ಯಾಚಾರ, ಅವಿಚಾರ, ಸಂಭವಿಸುವದು.

ಕಾಮಿನಿಯ ವಿಚಾರ ಇದಕ್ಕೆ ವಿಪರೀತ. ಅವಳು ಹೇಳುವಳು—

"ಹೆಣ್ಣು ಹಾವಿನಂತೆ, ಹಾವು ಹೆದರುವಂತೆ ಹೆಣ್ಣು ಸರ್ವಕಾಲದಲ್ಲಿಯೂ ಒಂದಿಲ್ಲೊಂದು ಹೆದರಿಕೆಯಿಂದಲೇ ಬಾಳುತ್ತಾಳೆ. ಹಾವು ತಾವಾಗಿ ಹೋಗಿ ಎಂದೂ ಕಚ್ಚುವದಿಲ್ಲ. ಅದು ಕಚ್ಚುವದು ಕೂಡ ಕ್ರೂರತೆಯಿಂದಲ್ಲ ಹೆದರಿಕೆಯಿಂದ. ಹಾವು ಉಲ್ಹಾಸಿತ ಜೀವ, ಎಲ್ಲಿಯಾದರೂ ಪುಂಗಿಯ ಮಧುರ ನಾದ ಅದರ ಕಿವಿಗೆ ಬಿದ್ದೊಡನೆ, ಅದು ತನ್ನನ್ನು ತಾನೇ ಮರೆತು ಅಲ್ಲಿಯೇ ಇದ್ದಲ್ಲಿಯೇ ನಲಿಯುವದಕ್ಕೆ ಅಲ್ಲಾಡುವದಕ್ಕೆ ಪ್ರಾರಂಭಿಸುವದು. ಆದರೆ ಹಾವುಗಾರ ಮಾತ್ರ ಸ್ವಾರ್ಥಕ್ಕಾಗಿ ತನ್ನ ಪುಂಗಿಯ ಉನ್ಮಾದಕಾರಿ ನಾದದಿಂದ ಅದನ್ನು ಮರುಳುಗೊಳಿಸಿ ಅದನ್ನು ಮುಗ್ಧಗೊಳಿಸಿ ಎಚ್ಚರ ತಪ್ಪಿಸಿ, ತನ್ನ ವಶಕ್ಕೆ ತೆಗೆದುಕೊಳ್ಳುವನು ನಂತರ ಅದನ್ನೇ ಅನನ್ವಿತ ಅತ್ಯಾಚಾರಕ್ಕೆ ಬಲಿಮಾಡುವನು. ಅದರ ಹಲ್ಲು ಕಿತ್ತಿ ಹಾಕುವನು. ಅದನ್ನು ಹೊಟ್ಟೆಗಿಲ್ಲದೆ ಬಳಲಿಸುವನು. ತನ್ನ ಸುಖ ಸಾಧನೆಗೆ ಉಪಯೋಗಿಸಿಕೊಳ್ಳುವನು."

"ಹಾವಿನಂತೆಯೇ ಹೆಣ್ಣು"

"ತಮ್ಮ ಸವಿಮಾತಿನ ಪುಂಗಿಯ ನಾದಕ್ಕೆ ಮುಗ್ಧಳಾದಾಗ ಮರುಳಾದಾಗ ಆವರನ್ನು ಎಚ್ಚರದಪ್ಪಿಸಿ ವಶಪಡಿಸಿಕೊಳ್ಳುವರು ಗಂಡಸರು. ತಮ್ಮ ಸುಖಸಾಧನೆಗೆ ಉಪಯೋಗಿಸಿಕೊಳ್ಳುವರು. ಹೆಣ್ಣು....ಏನನ್ನೂ ಅರಿಯದ ಮುಗ್ಧಜೀವಿ. ಅವಳು ತೀವ್ರ ಮರುಳಾಗುವಳು. ಅವಳು ತೀವ್ರ ಮೋಸ ಹೋಗುವಳು. ತೀವ್ರ ಎಚ್ಚರದಪ್ಪುವಳು...."

"ಕ್ರೂರ ಗಂಡಸು. ಸ್ವಾರ್ಥಿಗಂಡಸು...."

"ಕೊಂಚ ಕನಿಕರವೂ ಇಲ್ಲದೆ ತನ್ನನ್ನು ತಾನರಿಯದಂತೆ ಬಂದು ನಂಬಿದ ಹೆಣ್ಣನ್ನು ಸಹಜವಾಗಿ ಹಾಳುಮಾಡುವರು "

ಹಾಳಾಗುವವಳು ಹೆಂಗಸು. ಹಾಳು ಮಾಡುವವರು ಗಂಡಸರು ಗಂಡಸು ನೆಲವಿದ್ದಂತೆ. ಹೆಂಗಸು ನೆಲದ ಮೇಲೆ ಕಟ್ಟಿದ ಸುಂದರವಾದ ಮನೆಯಿದ್ದಂತೆ. "

"....ನಿಜವಾದ ಪುರುಷ ನೆಲದಂತೆ ಗಂಭೀರವಾಗಿಬೇಕು. ಮಳೆಯಿರಲಿ ಚಳಿಯಿರಲಿ ಬಿಸಿಲಿರಲಿ ಎಲ್ಲವನ್ನೂ ಗಂಭೀರತೆಯಿಂದ ಅಚಲ ಧೈರ್ಯ ದಿಂದ ಎದುರಿಸಿ ತನ್ನನ್ನು ಅವಲಂಬಿಸಿದ, ತನ್ನಮೇಲೆ ನೆಲಸಿದ ಆಸ್ತಿಗೆ ಸ್ಥಿರತೆ ಕೊಡಬೇಕು. "

" ಆದರೆ ನೆಲವೇ ಎದ್ದು ನಲಿಯತೊಡಗಿದರೆ ಮನೆಗೆ ಅಸ್ತಿತ್ವವೆಲ್ಲಿ ? "

" ಸ್ತ್ರೀಯನ್ನು ಕಾಪಾಡಬೇಕಾದುದು ಪುರುಷನ ಧರ್ಮ "

"...ಅದುವೇ ಪುರುಷ ಧರ್ಮ........"

" 'ನಾವೂ ಸ್ವತಂತ್ರರು ನಮಗೂ ಸ್ವಾತಂತ್ರ್ಯಬೇಕು ' ಎಂದು ಅದೆಷ್ಟು ನಾವು ಸ್ತ್ರೀ ಸಮಾಜ ಕುಣಿದಾಡಿದರೂ ಅವಳು ನಿಸರ್ಗಸಿದ್ಧಳಾ ಗಿಯೇ ಅಸ್ವತಂತ್ರಳು ಜಗತ್ತನ್ನು ಹೆರುವ ಹೆಚ್ಚಿನ ಹೊಣೆಗಾರಿಕೆಯನ್ನು ನಿಸರ್ಗ ಸ್ತ್ರೀಮೇಲೆ ಹೇರಿ ಅವಳನ್ನು ಅಸ್ವತಂತ್ರ ಮಾಡಿದೆ...."

" ಸ್ತ್ರೀ ಮಗನಾದ ಗಂಡಸು ಅಸ್ವತಂತ್ರ ಸ್ತ್ರೀಗೆ ನೆರವಾಗಬೇಕು. ಅವಳ ರಕ್ಷಣೆಯನ್ನು ಮಾಡಬೇಕು. ಆದರೆ...."

"....ಆದರೆ ಮಗನಾದ ಗಂಡಸು ತಾಯಿಯ ಗಂಡನಾಗಲು ಇಚ್ಛಿಸು ತ್ತಾನೆ. ಗಂಡನಾಗುತ್ತಾನೆ. "

" ಅವಳ ಅಸ್ವತಂತ್ರತೆಯ ಅಸಹಾಯಕತೆಯ ಲಾಭ ತೆಗೆದುಕೊಂಡು ಅಂಥವಳ ಗಂಡನಾಗುತ್ತಾನೆ. " ಅವಳನ್ನು ಆಳುತ್ತಾನೆ. ಅವಳನ್ನು ಅಳಿಸುತ್ತಾನೆ. "

" ಅಸಹಾಯಕ ಅಸ್ವತಂತ್ರ ಸ್ತ್ರೀಯನ್ನು ಸುತ್ತಲಿನಿಂದ ಮುಕ್ತಿದೊರೆಗ ಅವಳು ಕೊಳ್ಳಕ್ಕೆ ಬೀಳದೆ ಇನ್ನೇನು ಮಾಡಬೇಕು...? " ಎಂದೂ ಅವಳು ಕೇಳುತ್ತಾಳೆ.

ಇದಕ್ಕೆ ಯಾರೊಬ್ಬರು ಕೊಡುವ ಉತ್ತರವೇನು ?

ಇದಕ್ಕೆ ಉತ್ತರವೂ ನಾನೇ ಇರುವೆ.

ನಾನು ಹಾಳಾಗುವದಕ್ಕೆ ಕಾರಣವೇನು ? ನನಗೆ ಹಣ ಬೇಕಿತ್ತೆಂದು ರಂಗನಿಗೆ ದೇಹ ಮಾರಲು ಸಿದ್ಧಳಾಗಿದ್ದೇನೆ...? ಅಥವಾ ಕಾಮದ ಉನ್ಮತ್ತತೆ ತಡೆಯಲಾರದೆಯೇ ರಂಗನ ಕೈಹಿಡಿದು ನಾನೇ ಎಳೆದಿದ್ದೇನೇ... ?

ಆದುವೇ ನಾನಿನ್ನೂ ಬಳ್ಳಿಯಲ್ಲಿ ಕರಕು ಮೊಗ್ಗಿಯಾಗಿದ್ದೆ. ನಾನು ಅರಳಿ ಮೊಗ್ಗಾಗಲೂಕೂಡ ಇನ್ನೂ ದಿನಗಳು ಬೇಕಿದ್ದವು ಅಂತಹ ಅವಸ್ಥೆಯಲ್ಲಿಯೇ ರಂಗನ ದೃಷ್ಟಿಗೆ ಬಿದ್ದೆ.

ಆತ ಕಿತ್ತುಕೊಂಡ. ನನ್ನ ಬೇಕು ಬೇಡಗಳ ವಿಚಾರವೇ ಅವನಲ್ಲಿರಲಿಲ್ಲ. ಹಾವಾಡಿಗ ಪುಂಗಿಯನ್ನೂದುವಂತೆ ಆತ ಹಗಲಿರುಳು ಸವಿಮಾತಿನಿಂದ ಸವಿ ಆಚಾರದಿಂದ ನನ್ನನ್ನು ಎಚ್ಚರದಪ್ಪುವಂತೆ ಮಾಡಿದ.

ತಿರು ತಿರುಗಿ—

" ನಿರ್ಮಲಾ... ನೀನೆಷ್ಟು ಸುಂದರ....? ಯಾವುದೇ ಫಿಲ್ಮ ಕಂಪನಿಯ ಡಾಯರೆಕ್ಟರನ ಕಣ್ಣಿಗೆ ನೀನು ತಪ್ಪಿಬಿದ್ದರೂಕೂಡ ಆತ ನಿನ್ನನ್ನು ಎತ್ತಿಕೊಂಡು ಹೋಗುವ....ಆದರೆ ನಾನು... ನಾನು ನಿನ್ನನ್ನು ಎಲ್ಲಿಯೂ ಹೋಗಗೊಡುವದಿಲ್ಲ.... ನೀನು ನನ್ನವಳು. ನಿನ್ನ ಜನ್ಮ ನನಗಾಗಿ. ಅವತಾರದಲ್ಲಿ ನಿನ್ನ ನಂಬಿಗೆಯಿರುವದಾದರೆ ನಿನಗಾಗಿ ನಿನ್ನ ಕಲ್ಯಾಣಕ್ಕಾಗಿ ನನ್ನ ಅವತಾರ ಶಿವನಿಗಾಗಿ ಪಾರ್ವತಿ ಸಾವಿರ ವರ್ಷ ತಪಶ್ಚರ್ಯ ಮಾಡಿದಳಂತೆ! ಆದರೆ... ಈ ಪಾರ್ವತಿಗಾಗಿ ಈ ಶಿವ ಸಾವಿರ ವರ್ಷ ತಪಶ್ಚರ್ಯ ಮಾಡಿರಬಹುದು.... ವರ್ಲ್ಡ ಬ್ಯೂಟಿ ಕಾಂಟೆಸ್ಟಿನಲ್ಲಿ ನೀನೇ ಮಿಸ್ ಫಿಫ್ಟಿಫಾಯಿವ್... ನಿಮ್ಮ.... "

ಇಂತಹ ಮಾತುಗಳು ! ಯಾವಾಗಲೂ....

ಮನೆಯಲ್ಲಿ ಸವಿ ಮಾತಿನ ಸವಿ ಗೊತ್ತಿರದಿದ್ದ ನನ್ನ ಕಿವಿಗಳು ಇಂತಹ ಮಾತಿಗಾಗಿ ಯಾವಾಗಲೂ ಕಾತರವಾಗಿರುತ್ತಿದ್ದವು. ತಿರು ತಿರುಗಿ ಅಂತಹ ಮಾತನ್ನು ಕೇಳಬೇಕು. ಎನ್ನಿಸುತ್ತಿತ್ತು. ಇವೇ ಮಾತಿನಿಂದ ನಾನು ಎಚ್ಚರ ತಪ್ಪುತ್ತಿದ್ದೆ.

ಇಂತಹ ಮಾತುಗಳನ್ನು ರಂಗನೇ ಏಕೆ ಯಾರೂ ಹೇಳಿದ್ದರೂ ಎಚ್ಚರದಪ್ಪುತ್ತಿತ್ತು. ನನಗೊಬ್ಬಳಿಗೇ ಅಲ್ಲ, ಯಾವ ಹೆಣ್ಣಿನೆದುರು ಕೂಡ ಅವಳ ರೂಪದ ವರ್ಣನೆ ಮಾಡಿದರೆ ಅವಳು ಮುಗ್ಧಳಾಗುವಳು. ಮರುಳಾಗುವಳು.

ಆದರೆ ರಂಗ ಕೊಂಚವಾದರೂ ವಿಚಾರ ಮಾಡಿದ್ದರೆ....?

ಆಹುದು. ಆವನು ವಿಚಾರದಿಂದಲೇ ಹಾಗೆಲ್ಲ ಮಾತನಾಡುತ್ತಿದ್ದ. ಆವನು ನಡೆಯುವ ದಾರಿಯನ್ನು ಕುರಿತು ಆತ ವಿಚಾರಿಸುತ್ತಿದ್ದ. ತಾನು ನಡೆಯುವ ದಾರಿಯ ವಿಚಾರ ಆತ ಮಾಡುತ್ತಿದ್ದ.

ಜಗದ ವಿಚಾರದಿಂದ ಆತನಿಗೇನು ಆಗಬೇಕಾಗಿದೆ .. ?

ಜಗದ ವಿಚಾರ ಮಾಡುವ ವ್ಯಕ್ತಿಗೆ ವೈಯಕ್ತಿಕ ಸುಖ ದೊರಕುವದು ಎಂದಿಗಾದರೂ ಸಾಧ್ಯವೆ?

ಜಗತ್ತಿಗೆ ಬೆಳಕು ಕೊಡಬೇಕಾದರೆ ದೀಪ, ಜ್ಯೋತಿ, ತನ್ನನ್ನು ತಾನು ಸುಟ್ಟುಕೊಳ್ಳಲೇಬೇಕು.

ತನ್ನನ್ನು ತಾನು ಸುಟ್ಟುಕೊಳ್ಳುವ ವ್ಯಕ್ತಿ ರಂಗನಾಗಿರಲಿಲ್ಲ. ಇನ್ನೊಬ್ಬರನ್ನು ಸುಟ್ಟು ತನ್ನ ಮನೆ ಬೆಳಗಿ ಕೊಳ್ಳುವವ ಆತ. ನೆರೆಮನೆಗೆ ಬೆಂಕಿ ಕೊಟ್ಟು ಅದರ ಬೆಳಕಿನಲ್ಲಿ ಊಟ ಮಾಡುವವ ಆತ. ನೀತಿ ನಿಯಮಗಳೊಂದೂ ಅವನಿಗೆ ಅರಿಯವು.

ಸ್ವಾರ್ಥೀ ವ್ಯಕ್ತಿಗಳ ಜೀವನವೇ ಹಾಗೆ.

ಅವರ ಜೀವನ ಹಾಗಿರುವದೆಂದೇ ಅವರಿಗೆ ಸ್ವಾರ್ಥಿಗಳೆನ್ನುವರು.

ಇನ್ನೊಬ್ಬರ ವಿಚಾರ ಮಾಡುವವ ಸ್ವಾರ್ಥಿಯಲ್ಲ. ಇನ್ನೊಬ್ಬರ ವಿಚಾರ ಮಾಡುವವನಿಂದ ಕೆಲವೊಂದು ಸಲ ತಪ್ಪಿ ಅವಿಚಾರವಾಗಬಹುದು ಆದರೆ

ಮರುಕ್ಷಣದಲ್ಲಿ ಆತ ಅದಕ್ಕಾಗಿ ಮರಗುವ ಕೆಡಕೆನಿಸಿಕೊಳ್ಳುವ ಇನ್ನು ಮುಂದೆ ಹಾಗಾಗದಂತೆ ನೋಡಿಕೊಳ್ಳುವ ಮುಂದಿನ ಹೆಜ್ಜೆಯನ್ನು ಎಚ್ಚರದಿಂದ ಇಡುವ

ಅಂತಹ ಜೀವಕ್ಕೂ ರಂಗನಿಗೂ ಸಾವಿರ ಹರದಾರಿ ಅಂತರ ರಂಗ ತನಗಾಗಿ ತಾನು ತನ್ನ ಸುಖಕ್ಕಾಗಿ ಸಾವಿರ ಜನ ಸತ್ತು ಮಣ್ಣಾಗಬೇಕು. ಆ ಮಣ್ಣಿನಿಂದ ತನ್ನ ಮಹಲನ್ನು ಕಟ್ಟಿಕೊಂಡು ಬಾಳ ಬಯಸುವ .. ಬಾಳುವವ.

ಅಂತಹ ವಿಚಾರದ ನೇಣು ನನ್ನ ಕತ್ತಿಗೆ ಬಿದ್ದಿತು. ನಾನು ಉಸಿರು ಕಟ್ಟಿ ಚಡಪಡಿಸುವದನ್ನು ನೋಡಿ ಆತ ಹರುಷಪಡುತ್ತಿದ್ದ.

ಏಕೆಂದರೆ ಆತ ಗಂಡಸು. ಹೆಣ್ಣನ್ನು ಮಣ್ಣುಗೂಡಿಸುವದೇ ಅವನ ಕೆಲಸ. ಅವನಿಂದಾಗಿ ನಾನು ಹಾಳಾಗಿ ಹೋದೆ. ನನ್ನ ಆಯುಷ್ಯ ಬರಿದಾಯಿತು. ಚಿಗಿತು ಬಾಳಬೇಕೆಂದಿರುವ ಬಳ್ಳಿಯ ಕುಡಿಯನ್ನು ತುಳಿದೊಗೆದ -ಆತ—ರಂಗ.

ರಂಗನಿಂದಾಗಿ ನಾನು ಹಾಳಾದೆ.

ಆದರೆ ಕುಲಕರ್ಣಿಯವರ ವಿಚಾರದಲ್ಲಿ ನಾನು ಹಾಳಾದುದಕ್ಕೆ ಕಾರಣ ರಂಗ ಅಲ್ಲ. ನನ್ನಿಂದಲೇ ನಾನು ಹಾಳಾದುದು. ನನ್ನ ಜೀವನವನ್ನು ನಾನೇ ನಾಶಮಾಡಿಕೊಂಡವಳು.

‘ ಈ ಜಗದಲ್ಲಿ ಯಾರೂ ಯಾರನ್ನು ಹಾಳು ಮಾಡುವದಿಲ್ಲ ’ ವಂತೆ.

ರಂಗ ನನ್ನ ಜೀವನದಲ್ಲಿ ಸೇರಿ ವಿಷ ಬಿತ್ತಲಿಲ್ಲವೆ? ರಂಗ ತನ್ನ ದೈಹಿಕ ಭೋಗಕ್ಕಾಗಿ ನನ್ನನ್ನು ಉಪಯೋಗಿಸಿಕೊಳ್ಳಲಿಲ್ಲವೆ ?

ಅಜ್ಞಾನಿಗಳ ಅಜ್ಞಾನವನ್ನು ತಮ್ಮ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳುವದು ಮನುಷ್ಯತ್ವವೆ?

ಮನುಷ್ಯತ್ವದ ಮೂಲತತ್ವ —

‘ ನಿನ್ನೊಬ್ಬನನ್ನೂ ಮನುಷ್ಯನೆಂದು ತಿಳಿದುಕೊಳ್ಳುವದು. ತನ್ನ ನೆರೆಮನೆಯವನೂ ತನ್ನಂತೆಯೇ ಬಾಳಬೇಕೆಂದು ಇಚ್ಛಿಸುವದು. ಆದಕ್ಕೆ ತನಗೆ ಸಾಧ್ಯವಿದ್ದ ನೆರವನ್ನು ಕೊಟ್ಟು ಬಾಳಿಸುವದು ’

ಮನುಷ್ಯ ತತ್ವದ ಪ್ರಥಮ ಪಾಠಗಳನ್ನು ಕೂಡ ರಂಗ ಆಚರಿಸಲಿಲ್ಲ.

ಜೀವವಿದ್ದ ದೇಹಗಳೆಲ್ಲ ಜ್ಞಾನಿಗಳಾಗಿರಲು ಸಾಧ್ಯವೆ?

‘ ಆತ್ಮ ಪರಮಾತ್ಮನಾಗುವ ದಿನ ಬರುವದು ’ ಎಂದು ಕುಲಕರ್ಣಿಯವರು ಹೇಳುತ್ತಿದ್ದರೂ ಅದು ಯಾವದೋ ಯುಗದ ಮಾತು ಇದ್ದಿರಬಹುದು. ಯಾವುದೋ ಯುಗದ ವಿಚಾರದಿಂದ ಈ ಕ್ಷಣದಲ್ಲಿ ಬಾಳುವವರ ಸಾಯುವವರ ಉದ್ಧಾರ ಹೇಗೆ?

ಇಂದಿನ ಸಾವು ಬದುಕುಗಳು ಇಂದಿನ ನೀತಿಯ ನಿಯಮಗಳಿಗೆ ಅನುಸರಿಸಿ ಮುಂದುವರಿಯುತ್ತದೆ, ಇಂದಿನ ನೀತಿ ಕೊಲೆಮಾಡಿ ಬಾಳುವದು. ಅಲ್ಲದೆ ಸಾಯುವರನ್ನು ಬಾಳಿಸುವದಲ್ಲ. ಅಂತಹ ವಿಚಾರ ಇಂದಿನ ಜನಕ್ಕೆ ಹಿಡಿಸುವದೇ ಇಲ್ಲ,

ಏಕೆಂದರೆ ಸಾಯುವವರನ್ನು ಬಾಳಿಸಬೇಕಾದರೆ ಬಾಳಿಸಬೇಕಾದವ ಮೊದಲು ತಾನು ಸಾಯುವದಕ್ಕೆ ಸಿದ್ಧನಾಗಬೇಕು. ತಾನು ಸತ್ತು ಇನ್ನೊಬ್ಬರನ್ನು ಬದುಕಿಸುವದು ಸಾಮಾನ್ಯರಿಂದ ಸಾಧ್ಯವಿಲ್ಲ.

ಅಂತಹ ಆಚರಣೆ ಅಸಾಮಾನ್ಯರಿಂದ ಮಾತ್ರ ಸಾಧ್ಯ.

ಒಂದು ವೇಳೆ ಕುಲಕರ್ಣಿಯವರಿಗೆ ಅದು ಸಾಧ್ಯವಿರಬಹುದು ಆದರೆ ರಂಗನಿಗೆ ಅದು ಅಸಾಧ್ಯ.

ರಂಗನಿಗೆ ಬೇಕಿದ್ದುದು ತನ್ನ ಸುಖ ಅದಕ್ಕಾಗಿ ಜಗ ಅವನೆಡೆಗೆ ಧಾವಿಸಿ ಬರಬೇಕು. ಇಲ್ಲದಿದ್ದರೆ ಆತ ಎಳೆದು ತರುವ. ಎಳೆದು ತಂದು ಕೊನೆಗೆ ಕಬ್ಬಿನ ಸೊಪ್ಪೆಯಂತೆ ಬೀದಿಗೆ ಬೀಸಾಕುವ.

ಆತ ನನಗೆ ಮಾಡಿದ್ದೂ ಅಷ್ಟೆ.

ಕುಲಕರ್ಣಿಯವರು ಹೇಳುತ್ತಾರೆ—

“ ಯಾರೂ ನನ್ನನ್ನು ಹಾಳು ಮಾಡುವದಿಲ್ಲವಂತೆ! ”

ಅದನ್ನು ನಂಬುವದಾದರೂ ಹೇಗೆ?

ಆದರೆ ಕುಲಕರ್ಣಿಯವರ ಮಾತಿನಲ್ಲಿ ಅವಿಶ್ವಾಸ ತಾಳಲೂ ಕೂಡ ಆಗದು. ಅವರು ಹೇಳುವ ಕೆಲವೊಂದು ಅರ್ಥ ಕೂಡ ಆಗುವದಿಲ್ಲ.

" ಯಾರೂ ಯಾರನ್ನೂ ಹಾಳು ಮಾಡುವದಿಲ್ಲ "

ಎಂದು ಅವರು ಹೇಳಿದಾಗ ಅದೂ ಸತ್ಯ ಎನ್ನಿಸುತ್ತದೆ ಆ ಕ್ಷಣದಲ್ಲಿ.

" ಸುಮಿತ್ರಾ...ಯಾರೂ ಈ ಜಗದಲ್ಲಿ ಯಾರನ್ನೂ ಹಾಳು ಮಾಡುವದಿಲ್ಲ" ಎಂದು ನಾನು ಹೇಳಿದರೆ ನಿಮಗೆ ಆಶ್ಚರ್ಯವಾಗಬಹುದು ಅಲ್ಲವೆ ? ಅಹುದು ಆಶ್ಚರ್ಯವಲ್ಲದೆ ಮತ್ತೇನು ?

ಆದರೆ ವಿಚಾರಾಂತ್ಯದಲ್ಲಿ ಅದು ನಿಜವೂ ಎಂದು ಕಾಣುತ್ತದೆ ಮನುಷ್ಯ ಸಮಾಜ ಜೀವಿ. ಅಂತೆಯೇ ಆತನಿಗೆ ಸಮಾಜದಲ್ಲಿ ತನ್ನಂತಿರುವ ಇತರರೊಡನೆ ಒಂದುಗೂಡಿ ಬಾಳಬೇಕಾಗುತ್ತದೆ.

ಈ ಜಗದಲ್ಲಿ ಒಳ್ಳೆಯವರೂ ಇರುವರು. ಒಳ್ಳೆಯವರು ಇರುವರು ಎಂಬುದನ್ನು ನಾವು ಒಪ್ಪಿದರೆ ಅವರ ವಿರುದ್ಧವಾದವರೂ ಇರುವರೆಂದು ಸ್ಪಷ್ಟ ಅಲ್ಲವೆ? ಆದರೆ ಅದು ಹಾಗೆ ಅಲ್ಲ.

' ಒಳ್ಳೆಯದು ಇದೆ ' ಎಂದಾಗ ಕೆಟ್ಟದ್ದೂ ಇದೆ ಎಂದು ನಾವು ಒಪ್ಪಿಕೊಳ್ಳಲೇಬೇಕು. ಆದರೆ ' ಕೆಡಕು ' ಎಂದರೆ ಏನು ?

' ಕೆಡಕು 'ಎನ್ನುವದನ್ನೇ ಜಗತ್ತಿಗೆ ಸಾರಿ ಹೇಳಲು ಕೆಲವರು ಅವತಾರು ತಾಳಿರುವರೆ? ಕೆಡಕಿನಲ್ಲಿಯೇ ಹುಟ್ಟಿ ಅದರಿಂದಲೇ ಜೀವನ ಸಾಗಿಸಿ ಕೊನೆಗೆ ಅದರಿಂದಲೇ ತಮ್ಮ ಜೀವನ ಅಂತ ಮಾಡಿಕೊಳ್ಳುವವರು ಈ ಜಗದಲ್ಲಿ ಇರುವರೇ ?

ಇಲ್ಲ.

ರಾವಣನಿಗೆ ಜಗತ್ತೇ ರಾಕ್ಷಸ ಎಂದು ಹಳಿದಿತು. ಅಲ್ಲವೆ? ಆತ ಸೀತಾದೇವಿಯನ್ನು ಎತ್ತಿಕೊಂಡ ಹೋದ.

ಇದು ಆತ ಮಾಡಿದ ಅತ್ಯಂತ ಹೇಯಕೃತಿ ಅಲ್ಲವೆ ?

ದೇವ ದೇವತೆಗಳ ವಿಚಾರವನ್ನು ಬದಿಗಿಟ್ಟ ಸೀತೆ- ರಾವಣ ಇಬ್ಬರೂ ಸಾಮಾನ್ಯ ಮನುಷ್ಯರು ಎಂದು ನಾವು ಮುಂದುವರೆದರೆ ನಮಗೆ ಕಾಣುವ ದೇನು ?

ಸೀತೆಯನ್ನು ಆತ ಎತ್ತಿಕೊಂಡು ಹೋದದ್ದು ಕಾಮಿಯಾಗಿ ಅಲ್ಲ ಸೀತೆಯ ಸೌಂದರ್ಯಕ್ಕೆ ಮರುಳಾಗಿ ಅಲ್ಲ.

ಸೇಡಿನಿಂದ, ಸೇಡಿಗಾಗಿ. ತನ್ನ ತಂಗಿ ಶೂರ್ಪನಖಿಯ ಮೇಲೆ ರಾಮ-ಲಕ್ಷ್ಮಣರು ಕೂಡಿ ಮಾಡಿದ ಅತ್ಯಾಚಾರದ ಪ್ರತೀಕಾರವಾಗಿ.

ರಾಮನಂತಹ ಗುಣಿ, ಸುದ್ರೂಪಿ ತರುಣರಿಗೆ ಮರುಳಾಗದ ಸ್ತ್ರೀ ಜಗದಲ್ಲಿ ಯಾವ ಕಾಲಕ್ಕೂ ಜನ್ಮ ತಾಳಬಹುದೆ? ಅವಿವಾಹಿತ ಯಾವದೇ ಕನ್ಯೆಗೆ ' ನೀನು ರಾಮನನ್ನು ಲಗ್ನವಾಗುವಿಯೋ ? ' ಎಂದು ಕೇಳಿದರೆ, ಯಾವಕಾಲದಲ್ಲಾದರೂ ' ಇಲ್ಲ ' ಎಂದು ಉತ್ತರಿಸಬಹುದೆ ?

ಶೂರ್ಪನಖಿ ತಾಮಸಿ. ರಾಮನಿಗೆ ಮರುಳಾಗಿ ಅವನಿಗೆ ' ವಿವಾಹ ಮಾಡಿಕೋ ' ಎಂದು ಕಾಡಿದ್ದಕ್ಕೆ ಅವನಾದರೂ ಅವಳ ಮೂಗು, ಕಿವಿ, ಕೊಯಿಸಿ ಹಾಕಿದ್ದು ಅನ್ಯಾಯವಲ್ಲವೆ ?

ರಾಮ ಲಕ್ಷ್ಮಣರು ತನ್ನ ತಂಗಿಗೆ ಮಾಡಿದ ಅನ್ಯಾಯದ ಅತ್ಯಾಚಾರದ ಸೇಡಿಗಾಗಿ, ಪ್ರತೀಕಾರಕ್ಕಾಗಿ ಆತ ಸೀತೆಯನ್ನು ಹೊತ್ತುಕೊಂಡು ಹೋದ.

ಇದು ಒಂದೇ ಕಾರಣಕ್ಕಾಗಿ ರಾವಣನಿಗೆ ನಾವು ಪಾಪಿ ಎಂದು ಹೇಳಲು ಬಂದೀತೆ ?

ಶ್ರೀರಾಮ ಕೂಡಾ ಅಂತಹ ಮಾತನ್ನು ಹೇಳಲಾರ.

ಹದಿನಾಲ್ಕು ವರುಷ ಸೀತೆಯಂತಹ ಸೌಂದರ್ಯದ ಖಣಿ ರಾವಣನ ಸೆರೆಯಲ್ಲಿದ್ದರೂ ಅವಳು ಪತಿವ್ರತೆಯಾಗಿಯೇ ಉಳಿಯಲಿಲ್ಲವೇ ?

ಪತಿವ್ರತೆಯಾಗಿ ಉಳಿದುದು ಸೀತೆಯ ಶಕ್ತಿಯಿಂದ ಎಂಬ ಮಾತನ್ನು ನಾವು ಒಪ್ಪುವದಾದರೂ ಅವಳು ಪಾತೀವ್ರತ್ಯದಿಂದ ಬದುಕುವದಕ್ಕೆ ರಾವಣನೂ ಕಾರಣ. ಎಂಬ ಮಾತನ್ನು ಅಲ್ಲಗಳೆಯಲು ಸಾಧ್ಯವೆ ?

ರಾವಣ ತಾಮಸಿ. ರಾಕ್ಷಸ.

ಆದರೂ ಸೀತೆ ಪತಿವ್ರತೆಯಾಗಿ ಉಳಿದಳು. ಬಾಳಿದಳು.

ಸೀತೆ ತಾಯಿ. ಅವಳು ಅವತಾರಿ. ಅವಳು ಪತಿವ್ರತೆಯಾಗಿ ಉಳಿದುದು ಆಶ್ಚರ್ಯವಲ್ಲ. ಅದ್ಭುತವೂ ಅಲ್ಲ.

ಆಕೆಯನ್ನು ಪತಿವ್ರತೆಯಾಗಿ ಉಳಿಸಿದ ರಾಕ್ಷಸ ರಾವಣನ ಸಹನೆ ನಿಜಕ್ಕೂ ಅದ್ಭುತ.

ರಾವಣನ ನಾಶಕ್ಕೆ 'ಸೀತಾಪಹರಣವೇ' ಕಾರಣವಲ್ಲ. ಅದೂ ಒಂದು ನೆವಮಾತ್ರ ರಾವಣನ ನಾಶಕ್ಕೆ ಕಾರಣ. ಆತನ ಉದ್ಧಾಮತಿ ಅಹಂಕಾರ...ಪರಪೀಡನೆ ನಿಜ. ಆತ ಸಾವಿರ ವರುಷ ತಪಶ್ಚರ್ಯ ಮಾಡಿ ಶಿವನನ್ನು ಒಲಿಸಿಕೊಂಡ, ಆದರೆ ತಪಶ್ಚರ್ಯ ಸಾತ್ವಿಕವಾದರೆ ದೇವನೂ ಸಾತ್ವಿಕನಾಗಿ ವರಕೊಡುವ, ಸಾತ್ವಿಕ ವರದಾನಮಾಡುವ ತಪಶ್ಚರ್ಯ ತಾಮಸವಾದರೆ ವರವೂ ತಾಮಸವಾಗುತ್ತದೆ. ಅದಕ್ಕೇ ಹೇಳುವದು ತಪಸ್ವಿ ಮೊದಲು ಸಾತ್ವಿಕನಾಗಬೇಕೆಂದು.

ರಾಕ್ಷಸ ಕುಲದ ಮೂಲವಾದ ತಾಮಸಿವೃತ್ತಿಯು ಆತನಲ್ಲಿ ಉಳಿದೇ ಹೋಯಿತು. ಈಶ್ವರನ ವರದಿಂದ ಆತ ಮತ್ತಿಷ್ಟು ಮದಾಂಧನಾಗಿ ಪ್ರಬಂಧನಾದ, ಉದ್ಧಾಮನಾದ. ರಾಕ್ಷಸಿವೃತ್ತಿಯ ಮೂಲವಾದ ಪರಪೀಡನೆಯೇ ಆತನ ನಿತ್ಯ ಉದ್ಯೋಗವಾಯಿತು.

ಕೆಡಕಿನ ನೆಲದಲ್ಲಿ ಕೆಡಕಿನ ಬಳ್ಳಿಗೆ ಕೆಡಕಿನ ನೀರೆರೆದರೆ ಹೂಕಾಯಿ ಬಿಡುವದು ಕೆಡಕೇ ಅಲ್ಲದೆ ಬೇರೆ ಯಾವುದೂ ಅಲ್ಲ

ಆ ಅತ್ಯಾಚಾರ ಅಹಂಕಾರ ಅವನ ನಾಶಕ್ಕೇ ಕಾರಣ. ಅಲ್ಲದೆ ಸೀತಾಪಹರಣವಲ್ಲ ರಾವಣನ ನಾಶದ ಸಿದ್ಧತೆ ರಾಮಜನ್ಮದ ಪೂರ್ವದಿಂದಲೇ ಆರಂಭವಾಗಿತ್ತು ಅವನ ನಾಶಕ್ಕಾಗಿ ರಾಮನ ಜನ್ಮವಾಗಿತ್ತು. ಇನ್ನು ಕೊನೆಯಲ್ಲಿ ರಾಕ್ಷಸ ರಾವಣ ಸೀತೆಯನ್ನು ಹಾಳು ಮಾಡಿದ್ದರೆ...?

ಈ ವಿಚಾರ ವಿಚಾರವೇ ಅಲ್ಲ ಅವಿಚಾರ, ಏಕೆಂದರೆ ಸ್ತ್ರೀ ಹಾಳಾಗುವದು ಗಂಡಸಿನಿಂದಲ್ಲ. ತನ್ನಿಂದ ಮಾತ್ರ. ಸ್ತ್ರೀ ಸ್ವಸ್ಥಳಾದರೆ ಮಾತ್ರ ಗಂಡಸಿನ ಅತ್ಯಾಚಾರ ಅವಳ ಮೇಲೆ ಸಾಗುವದು. ಅಲ್ಲದೆ ಈ ಜಗದಲ್ಲಿ

ಯಾವೂ ಯಾರನ್ನೂ ಹಾಳು ಮಾಡುವದಿಲ್ಲ. ಯಾರೂ ಯಾರ ಮೇಲೂ ಅತ್ಯಾಚಾರ ಮಾಡುವದಿಲ್ಲ

ಪ್ರತಿಯೊಂದು ವ್ಯಕ್ತಿಗೂ ತನ್ನನ್ನು ಕಾಯುವ ತನ್ನದೇ ಆದ ಒಂದು ಶಕ್ತಿಯಿರುತ್ತದೆ.

" ಆತ್ಮ ಶಕ್ತಿ "

" ಆತ್ಮ ಶಕ್ತಿಯೇ ದೇವಶಕ್ತಿ "

" ಆ ದೇವಶಕ್ತಿಯ ವಿರುದ್ಧ ಜಯಗಳಿಸಲು ಯಾರಿಗೆ ಸಾಧ್ಯ ? ದೇವರ ವಿರುದ್ಧ ಹೋರಾಡಿ ಬಾಳಿದವರುಂಟೇ ? "

" ಆದರೆ ದೇವಶಕ್ತಿಯನ್ನು ಪ್ರಜ್ವಲಿಸಿ ತೇಜಸ್ವಿ ಮಾಡುವದಕ್ಕೆ ದೇಹ ವನ್ನು ಮನವನ್ನು ಸಿದ್ಧಗೊಳಿಸಬೇಕು ಪ್ರತಿಯೊಂದು ವ್ಯಕ್ತಿಯ ಹೃದಯ ದಲ್ಲಿ ಆದೇ ಶಕ್ತಿ ಮೂಲಶಕ್ತಿಯಾಗಿ ಸುಪ್ತವಾಗರುತ್ತದೆ. ಆದರೆ ಅಜ್ಞಾನ ದಿಂದ ಮೂಲ ಶಕ್ತಿಯನ್ನು ಕಡೆಗೆಣಿಸಿ ಜಗದ ವಿಚಾರದಲ್ಲಿ ತೊಡಗುತ್ತಾರೆ ಜಗದ ಇಚ್ಛೆಗಳಲ್ಲಿ ಮಗ್ನರಾಗುತ್ತಾರೆ ಅಂತೆಯೇ ದೇವಶಕ್ತಿ ವ್ಯಕ್ತಿಯ ಆಪತ್ಕಾಲದಲ್ಲಿ ಆವನ ಸಹಾಯಕ್ಕೆ ಸಿದ್ಧವಾಗುವದಿಲ್ಲ..."

"... ಏಕೆಂದರೆ ಆಶಕ್ತಿ ಸುಪ್ತಾವಸ್ಥೆಯಲ್ಲಿರುತ್ತದೆ. ಆತ್ಮ ಶಕ್ತಿ ಜಾಗೃತ ವಿದ್ದವನಿಂದ ಎಂದಿಗೂ ಕೆಡಕು ಕೆಲಸಗಳಾಗುವದಿಲ್ಲ. ಅಲ್ಲದೆ ಯಾರಿಂದಲೂ ಆವನಿಗೆ ಕೆಡಕಾಗುವದಿಲ್ಲ. ಕೆಡಕಿನಿಂದ ಆ ಶಕ್ತಿ ಅವರನ್ನು ರಕ್ಷಣೆ ಮಾಡುತ್ತದೆ."

" ಹಾಗೆ ರಕ್ಷಿತರೆಲ್ಲರೂ ಒಳ್ಳೆಯವರು ಆದರೆ ಅರಕ್ಷಿತರು ದುಷ್ಟರಲ್ಲ !

"ಇದರಲ್ಲಿ ಆಶ್ಚರ್ಯಪಡುವದೇನೂ ಇಲ್ಲ ಈ ಜಗದಲ್ಲಿ ಕೆಡಕೆನ್ನು ವದು ಇದೆಯಾದರೂ ಕೆಡಕಿನ ಮೂರ್ತಿಯಾಗಿ ಯಾರೂ ಇಲ್ಲ. ಪ್ರತಿ ವ್ಯಕ್ತಿಯಲ್ಲಿ ನಷ್ಟ, ದುಷ್ಟ, ಒಳ್ಳೆ, ಕೆಟ್ಟ ಎರಡೂ ಭಾವನೆಗಳು, ಗುಣಗಳು ಇದ್ದೇಇವೆ. ಹಾಗಿಲ್ಲದ ವ್ಯಕ್ತಿ, ವ್ಯಕ್ತಿ ಅಲ್ಲವೇ ಅಲ್ಲ. ದುಷ್ಟಬುದ್ಧಿ ಇಲ್ಲದವ ಮನುಷ್ಯನೇ ಅಲ್ಲ. ಬ್ರಹ್ಮರ್ಷಿಯಲ್ಲಿ ಕೂಡ ದುಷ್ಟ ಶಕ್ತಿ ಕೆಲವೊಂದು ಅಂಶದಿಂದ ಸಮಯಕ್ಕಾಗಿ ಕಾದುಕೊಂಡು ಕುಳಿತಿರುತ್ತದೆ. ಅದೇರೀತಿ

ಒಳ್ಳೇ ಶಕ್ತಿ, ಬುದ್ಧಿ ತಾಮಸಿವೃತ್ತಿಯವನಲ್ಲಿಯೂ ಇರುತ್ತದೆ. ಜ್ಞಾನದ ಸಂಪರ್ಕವಾಗದವರಿಗೆ ದುಷ್ಟಬುದ್ಧಿ, ದುಷ್ಟಶಕ್ತಿಗಳು ಮನುಷ್ಯನ ಮೇಲೆ ಪ್ರಭುತ್ವ ಸ್ಥಾಪಿಸಿರುತ್ತವೆ. ಜ್ಞಾನದ ಬೆಳಕು ಹೃದಯವನ್ನು ಪ್ರವೇಶಿಸಿದಾಗ ಕೆಲವು ವೇಳೆ ಅಲ್ಲಿ ತುಮುಲವೇ ಆರಂಭವಾಗುತ್ತದೆ. ಕೊನೆಗೆ ಅವು ಕಳ್ಳರ ರೀತಿಯಲ್ಲಿ ಅಡಗಲು ಪ್ರಾರಂಭಿಸುತ್ತವೆ. ಬಲಿಷ್ಠನಿಗೆ ಯುದ್ಧದಲ್ಲಿ ಜಯವು ಖಂಡಿತ.

" ...... ಅಂತೆಯೇ ಸುಮಿತ್ರಾ ನಾನು ಹೇಳುವೆ ಯಾರಿಂದಲೂ ಯಾರಿಗೂ ಕೆಡಕಾಗದು ನಿನಗೆ ಕೆಡಕಾಗಿದ್ದರೆ ಅದು ನಿನ್ನಲ್ಲಿರುವ ದುಷ್ಟ ಶಕ್ತಿಯ ಗೆಲವು ಮಾತ್ರ......"

" ಇನ್ನೊಬ್ಬನಿಂದ ನನಗೆ ಕೆಡಕಾಯಿತು ಎಂದು ನಾನು ಹೇಳುವದಾದರೆ ನಾನು ಕೆಡಕಿನ ಸ್ವಾಗತಕ್ಕೆ ಸಿದ್ಧನಾಗಿದ್ದೆ ಎಂದು ಹೇಳಿದ ಹಾಗಲ್ಲವೆ ? ಎದುರು ನುಗ್ಗಿಕೊಂಡು ಬರುವ ಪ್ರಚಂಡ ಗಾಳಿಯನ್ನು ಎದುರಿಸುವ ಸ್ಥೈರ್ಯ, ಧೈರ್ಯ ಶಕ್ತಿ ನನ್ನಲ್ಲಿದ್ದರೆ ನಾನು ಗಾಳಿಗೆ ಹೆದರಬೇಕಿಲ್ಲ. ಸರ್ವ ಕಾಲವೂ ನಾವು ನಮಗಾಗಿ ಜಾಗೃತರಿದ್ದುಕೊಂಡರೆ ಯಾರೇನು ಮಾಡುವರು ? ಯಾವ ಶಕ್ತಿಯಿಂದ ನಮಗೇನಾಗಬೇಕಾಗಿದೆ ? ಯಾವ ವ್ಯಕ್ತಿಯಿಂದ ನಮಗೆ ಹಾನಿಯಾಗಬೇಕಾಗಿದೆ ? ಮನುಷ್ಯ ತನ್ನ ವ್ಯಕ್ತಿತ್ವವನ್ನು ತಾಳಿಸಿಕೊಂಡು ಬಾಳಿಸಿಕೊಂಡು ಬದುಕಬೇಕಾದರೆ ಕಲ್ಲಿನ ವಿಗ್ರಹದಂತಿರಬೇಕು. ವಿಗ್ರಹದಂತಾಗಬೇಕು...."

" ...ಆದರೆ ಅದು ಸರ್ವರಿಗೂ ಸಾಧ್ಯವಿಲ್ಲ. ಅದು ಅಸಾಧ್ಯವಾದಾಗ ಹೆದರಿಕೊಂಡಾದರೂ ಇರಬೇಕು..."

" ಒಳಿತು ಕೆಡಕು, ಸುಖ ದುಃಖ, ಆಶೆ ನಿರಾಶೆ ಎಲ್ಲವುಗಳನ್ನೂ ಕಲ್ಲಿನ ಮೂರ್ತಿ ಮಳೆಗಾಳಿ, ಚಳಿ ಬಿಸಿಲುಗಳನ್ನು ಎದುರಿಸುವಂತೆ ವ್ಯಕ್ತಿ ಕಲ್ಲಿನ ಮೂರ್ತಿಯಾಗಿ ಎದುರಿಸಬೇಕು."

"ಅದು ಅಸಾಧ್ಯವೆನಿಸಿದರೆ---"

"—ಜಗತ್ತಿನ ಯಾವ ಗಾಳಿಯೂ ಸೋಂಕದಂತೆ ಎಲ್ಲ ಕಡೆಯಿಂದಲೂ ಭದ್ರಮಾಡಿಕೊಂಡು ನಮ್ಮಷ್ಟಕ್ಕೆ ನಾವು ಇದ್ದುಬಿಡಬೇಕು. ಈ ಅವಸ್ಥೆ

ಸ್ರ್ಪಾಪ್ತಮಾಡಿಕೊಂಡ ವ್ಯಕ್ತಿಗೆ ಮುಂದಿನ ಅವಸ್ಥೆ ತಾನಾಗಿ ಪ್ರಾಪ್ತವಾಗು ತ್ತದೆ......."

" .. ನೀವು ಕಲ್ಲಿನ ಮೂರ್ತಿಯಂತೂ ಇರಲೇ ಇಲ್ಲ. ಅಲ್ಲದೆ ಹೆದರಿ ಕೊಂಡು ನಿಮ್ಮನ್ನು ನೀವು ಭದ್ರವಾಗಿಯೂ ಇಟ್ಟುಕೊಳ್ಳಲಿಲ್ಲ...."

" .. ನೀವು ಅಸಾವಧರಾಗಿದ್ದಿರಿ. ಅಲ್ಲದೆ...."

"ಇಂದು ನೀವು ಹಳಿಯುವದೇ ಅಂದು ನಿಮಗೆ ಪ್ರಿಯವಾಗಿ ನಿಮ್ಮನ್ನು ಇಂದು ನಿಮಗೆ ತಿರಸ್ಕೃತವಾದ ದಾರಿಯಲ್ಲಿ ಕರೆದೊಯ್ದಿತು...."

"...ಅದಕ್ಕೆ ನೀವು ಯಾವ ರೀತಿಯಿಂದಲೂ ಆತಂಕ ಮಾಡಲಿಲ್ಲ, ಅಡ್ಡಿ ಮಾಡಲಿಲ್ಲ..."

" ....ಅಂದು ನೀವು ಅಸಾವಧರಾಗಿರದಿದ್ದರೆ...?"

"...ಹಾವು ಕಚ್ಚುವದು ಮನುಷ್ಯ ಅಸಾವಧನಾಗಿದ್ದಾಗ...ಸಾವಧ ನಾಗಿ ನಿಂತವನನ್ನು ಓಡಿಬಂದು ಎಂದೂ ಹಾವು ಕಚ್ಚದು..."

"ಸಾವಧ ವ್ಯಕ್ತಿಯ ಸ್ಪರ್ಶ ಮಾಡುವ ಶಕ್ತಿ ಮೃತ್ಯುವಿನಲ್ಲಿ ಕೂಡ ಇಲ್ಲ. ಮನುಷ್ಯನ ಶಕ್ತಿಯ ಅರಿವು ಮನುಷ್ಯನಿಗೇ ಅರಿಯದಾಗಿದೆ..."

'ನೀನೇ ದೇವ' ಎಂದು ಇರಿದು ಹೇಳಿದರೂ ಕೂಡ ತಾನು ಕೀಟಕ ನಾಗಿಯೇ ಬಾಳುತ್ತಾನೆ ಮನುಷ್ಯ!

" ನೀವೂ ನಿಮ್ಮ ಶಕ್ತಿಯನ್ನು ಅರಿತುಕೊಂಡಿರಲಿಲ್ಲ. ಅರಿತುಕೊಂಡಿಲ್ಲ. ನಮ್ಮ ತಪ್ಪನ್ನು ಇನ್ನೊಬ್ಬರಮೇಲೆ ಹೊರಿಸುವದು ಅಪರಾಧವಲ್ಲ.ಪಾಪ...?

"....ನಾವು ಮಾಡಿದ ಪಾಪಕ್ಕೆ ನಾವೇ ಪ್ರಾಯಶ್ಚಿತ್ ತೆಗೆದುಕೊಳ್ಳ ಬೇಕು. ರೋಗದಿಂದ ನರಳುವವನೇ ಔಷಧಿ ಕುಡಿಯಬೇಕಾಗುವದು. ಅಲ್ಲವೆ...?"

"....ನಾವು ಮಾಡಿದ ಅಪರಾಧವನ್ನು ಇನ್ನೊಬ್ಬನ ಮೇಲೆ ಹೊರಿಸು ವದರಿಂದ ನಾವು ಹೊಸ ಅಪರಾಧ ಮಾಡಿದಂತೆ ಆಗುತ್ತದೆ ಅಲ್ಲದೆ ಮಾಡಿದ ಅಪರಾಧವನ್ನು ಕಳೆದುಕೊಂಡಂತೆ ಆಗುವದಿಲ್ಲ. ನಾವು ಮಾಡಿದ್ದು ಅದು

ತಪ್ಪಿರಲಿ ಅಥವಾ ಒಪ್ಪಿರಲಿ ಅದನ್ನು ಪ್ರಾಂಜಲ ಮನದಿಂದ ಒಪ್ಪಿಕೊಳ್ಳ ಬೇಕು. ಒಪ್ಪಿಕೊಂಡು ಮುಂದೆ ಹಾಗಾಗದಂತೆ ನಡೆಯಬೇಕು."

"ಅದುವೇ ದಾರಿ ನಿಜವಾದ ದಾರಿ. ಒಂದೇ ಒಂದಾದ ದಾರಿ"

ಎಂದು ಕುಲಕರ್ಣಿಯವರು ಹೇಳಿದಾಗ ನಾನು ಮಾಡಿದ್ದು ಅಪರಾಧ. ಅದಕ್ಕೆ ಕಾರಣ ನಾನು. ಅದಕ್ಕೆ ಪ್ರಾಯಶ್ಚಿತ್ ದೊರೆಯಬೇಕಾದುದು ನನಗೇ ಎನ್ನಿಸುತ್ತದೆ.

ಅವರು ಹೇಳುವದರಲ್ಲಿ ಅಸತ್ಯವಾದರೂ ಏನಿದೆ ..?

ರಂಗನ ಮನದಲ್ಲಿ ಅದೆಷ್ಟೆ ದುಷ್ಟ ವಿಚಾರಗಳು ಇದ್ದರೂ ನನ್ನ ಒಪ್ಪಿಗೆ ಇಲ್ಲದಿದ್ದರೆ ಆತನಿಂದೇನು ಮಾಡಲು ಸಾಧ್ಯವಿತ್ತು ?

ಜಗತ್ತಿನ ಹೆಣ್ಣು ಜಾತಿಯೇ ಗಂಡಸಿಗೆ ವಿವಾಹಕ್ಕೆ ಉಪಭೋಗಕ್ಕೆ ಬೇಕು. ಎನ್ನಿಸುತ್ತದೆ. ಬರಿ 'ಬೇಕು' ಎನ್ನಿಸುವದರಿಂದ ದೊರೆಯುತ್ತಿದ್ದರೆ ಎಂತಹ ಅನಾಹುತವಾಗುತ್ತಿತ್ತು....? ಒಂದು 'ಬೇಕು' ವಿಗೆ ಇನ್ನೊಂದು ಅಂತಹದೇ 'ಬೇಕು' ಕೂಡಿದರೆ ಒಂದು ಕಾರ್ಯವಾಗಬಲ್ಲದು. ಇಲ್ಲದಿದ್ದರೆ ಯಾವುದೂ ಅಸಾಧ್ಯ.

ರಂಗ ಸವಿ ಮಾತು ಆಡಿದ. ನಾನು ಅದಕ್ಕೆ ಮರುಳಾದೆ. ರಂಗ ನನಗೆ 'ನಿಮ್ಮಿ' ಎಂದು ಕರೆದ. ತಾನು ಸ್ವತಹ ದಿಲೀಪನೆಂದು ಹೇಳಿಕೊಂಡ. ಅಂದು ಆತ ಏನನ್ನು ಹೇಳಿದರೂ ಅದರಿಂದ ಆನಂದವೇ ಆಗುತ್ತಿತ್ತು. ಆತನ ಯಾವ ಮಾತುಗಳೂ ನನಗೆ ಕೆಡಕೆನಿಸುತ್ತಿರಲಿಲ್ಲ. ಆತನ ಯಾವ ಆಚರಣೆಯಿಂದಲೂ ನನ್ನಲ್ಲಿ ಜುಗುಪ್ಸೆ ಹುಟ್ಟುತ್ತಿರಲಿಲ್ಲ. ಆತನ ಒಂದೊಂದು ಕೃತಿಯಿಂದ ನನ್ನಲ್ಲಿ ಉನ್ಮತ್ತತೆ ಬೆಳೆಯುತ್ತಿತ್ತು. ನಾನು ಅವನ ಹತ್ತಿರಕ್ಕೆ ಸರಿಯುತ್ತಿದ್ದೆ....ಸರಿಯುತ್ತಿದ್ದೆ.

ಅಂದು ನನಗೆ ಬೇಕಾಗಿದ್ದುದು ಸುಖ. ಮನೆಯಲ್ಲಿ ತಂದೆ ತಾಯಿಗಳ ಸೀಡಕತನದಿಂದ ಕಂಗೆಟ್ಟ ನನಗೆ ಯಾರೊಬ್ಬರ ಹಿತವಚನಗಳು ಅಮೃತಪ್ರಾಯವಾಗಿರುತ್ತಿದ್ದವು. ಸವಿ ಮಾತನಾಡುವವರೆಲ್ಲ ನನ್ನ ಬಂಧುಗಳು ನನ್ನನ್ನು ಪ್ರೀತಿಸುವವರು ನನ್ನ ತಂದೆ ತಾಯಿಗಳಿಗಿಂತ ಹಿರಿಯರು

ಎಂದು ತಿಳಿದುಕೊಳ್ಳುತ್ತಿದ್ದೆ. ಆದರಲ್ಲಿ ಅಂದು ನನಗೆ ಅದಾವ ತಪ್ಪೂ ಕಾಣು ತ್ತಿರಲಿಲ್ಲ ಹಾಗೆ ವಿಚಾರಿಸುವ ವಯಸ್ಸು ಕೂಡ ನನ್ನದಿರಲಿಲ್ಲ 'ಬೆಳ್ಳಗೆ ಕಂಡದ್ದೆಲ್ಲ ಹಾಲು' ಎನ್ನುವ ವಯಸ್ಸು ನನ್ನದಿತ್ತು ಆಗ. ನನಗೆ ವಿಚಾರ ವೆಂದರೆ ಏನು ಎನ್ನುವದು ಕೂಡ ಗೊತ್ತಿರಲಿಲ್ಲ

ಆಗೀಗ ಏನಾದರೂ ಕೊಡುವ ನೆವದಲ್ಲಿ ರಂಗ ನನ್ನ ದೇಹ ಸ್ಪರ್ಶ ಮಾಡುತ್ತಿದ್ದ ಅಂದಿನ ಆತನ ಕೃತಿ ಇಂದಿನ ಬೆಳಕಿನಲ್ಲಿ ಅಂದೇ ಕಂಡಿದ್ದರೆ?

ಆಗಬಾರದ್ದೆಲ್ಲ ಆಗಿ ಹೋಯಿತು. ಅಂದು ಅಜ್ಞಾನಿಯಾದ ನನ್ನನ್ನು ತಮ್ಮ ಸುಖಕ್ಕಾಗಿ ರಂಗ ಉಪಯೋಗಿಸಿಕೊಂಡ ಅದರ ದೋಷವನ್ನು ರಂಗನ ಮೇಲೆಯೇ ಹೊರಿಸಿ ನನ್ನ ಹೊಣೆ ಹಾರಿಸಿಕೊಳ್ಳಲಾಗದು. ಅಂದು ನಾನು ಅಜ್ಞಾನಿಯಾಗಿರದಿದ್ದರೆ....?

ಆದರೆ ಜ್ಞಾನ ಅಜ್ಞಾನಗಳು ವ್ಯಕ್ತಿಯ ಸೊತ್ತಲ್ಲ

ಕುಲಕರ್ಣಿಯವರು ಹೇಳುತ್ತಾರೆ "ನಾನು ಮಾಡಿದ ತಪ್ಪನ್ನು ಇನ್ನೊಬ್ಬರಮೇಲೆ ಹೊರಿಸಕೂಡದು" ಎಂದು.

ನನ್ನಲ್ಲಿಯೂ ಕೂಡ ಅಂತಹ ವಿಚಾರವಿಲ್ಲ.

ಆದರೆ 'ತಪ್ಪು ಯಾರದು?' ಎನ್ನುವದರ ನಿರ್ಣಯವಾದರೂ ಆಗ ಬೇಕಲ್ಲ?

ತಿಳುವಳಿಕೆಯಿಂದ ಮಾಡಿದ ಕೃತಿ ಕೆಡಕಿದ್ದರೆ ಅಪರಾಧ. ಒಳ್ಳೆಯ ದಿದ್ದರೆ ಪುಣ್ಯ. ಎನ್ನುವದು ವೇದವಾಕ್ಯದಂತೆ.

ನಾನು ಮಾಡಿದ್ದು ಮನಃಪೂರ್ವಕವಾಗಿಯೇ! ವಿಚಾರ ಮಾಡಿ ಆ ಕಾರ್ಯಕ್ಕೆ ನಾನು ಮುಂದಾದೆನೆ....?

ನಾನು ವಿಚಾರವನ್ನೇ ಮಾಡಲಿಲ್ಲ. ಅಲ್ಲದೆ ಮನಕ್ಕೆ ಬೇಡವಾಗಿಯೂ ಮಾಡಲಿಲ್ಲ. ಮನಕ್ಕೆ ಬೇಡವಾಗಿ ಮಾಡದಿದ್ದುದು ಮನಃಪೂರ್ವಕ ಎಂದು ಹೇಳಲು ಬಂದೀತೇ?

ಆದರೂ ಮನಃಪೂರ್ವಕವಾಗಿ ಮಾಡದಿದ್ದರೂ ಅದುದು ಅವಿಚಾರ ಪಾಪ

ಅದನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ನನ್ನಿಂದ ಪಾಪವಾಗಿದೆ. ಪಾಪ ಮಾಡಿದ ಹೊಣೆ ನನ್ನ ಮೇಲಿದೆ.

ಆದರೂ ನಾನು ನಿಷ್ಪಾಪಳಿರುವೆ. ಇದನ್ನು ಯಾರೂ ಒಪ್ಪಲೇಬೇಕು

ಆರಂಭದಲ್ಲಿ ರಂಗನ ಮಾತಿಗೆ ನಾನು ಮರುಳಾಗಿರಬೇಕು. ಆದರೆ ಮರುಳುಗೊಳಿಸುವ ಮಾತುಗಳು ನನಗೆ ಕೊಟ್ಟ ವಚನವಾಗಿರಲಿಲ್ಲವೆ ?

"ನಿರ್ಮಲಾ....ನೀನು ನನ್ನ ನಿರ್ಮಲೆ....ಎಂದೆಂದಿಗೂ ನೀನು ನನ್ನ ವಳು. 'ನಾನು ಬಿ. ಎ. ಪರೀಕ್ಷೆ ಮುಗಿದ ಕೂಡಲೇ ನಿನ್ನೊಡನೆ ಲಗ್ನ ಮಾಡಿಕೊಳ್ಳುವೆ " ಎಂದು ಆತ ಬಾರಿ ಬಾರಿಗೂ ಹೇಳುತ್ತಿದ್ದನಲ್ಲ.

ಆತನ ಜೊತೆಗೆ ನನ್ನ ತಲೆಯ ಮೇಲೆ ಅಕ್ಷತೆಬಿದ್ದಿರದಿದ್ದರೂ ಆತನೇ ನನ್ನ ಪತಿ ಎಂದು ನಾನು ಭಾವಿಸಿದ್ದೆ. ಅವನು ಕೊಟ್ಟ ಮಾತಿನಲ್ಲಿ ಅವನ ವಚನದಲ್ಲಿ ನಾನು ವಿಶ್ವಾಸತಾಳಿದ್ದೆ.

ಅಲ್ಲದೆ ತಿರುತಿರುಗಿ ಹಳೆಯ ಕಾಲದ ಉದಾಹರಣೆಯನ್ನೂ ಹೇಳುತ್ತಿದ್ದ.........ನೋಡು........ನಿಮ್ಮಿ......ನೀನು ಸುಮ್ಮನೇ ಹೆದರುತ್ತಿರುವಿ.... ಇದರಲ್ಲಿ ಪಾಪವಾದರೂ ಏನಿದೆ...? ನಿನಗೆ ದೇವರಲ್ಲಿ ವಿಶ್ವಾಸವಿಲ್ಲವೆ...? ಪುರಾಣದಲ್ಲಿ ನಂಬಿಕೆ ಇಲ್ಲವೆ...? ಪುರಾಣ ಕಾಲದಲ್ಲಿ ಗಂಧರ್ವ ವಿವಾಹಗಳಾಗುತ್ತಿದ್ದವು. ಗಂಧರ್ವ ವಿವಾಹಗಳೆಂದರೆ ಗಂಧರ್ವರೆಂಬ ದೇವದೂತರ ವಿವಾಹ ಪದ್ಧತಿ. ಆ ಪದ್ಧತಿಯಲ್ಲಿ ಅಕ್ಷತೆ, ಮಂತ್ರ, ಪುರೋಹಿತ ಇವರ ಗೊಂದಲವೇ ಇರುವದಿಲ್ಲ. ಒಪ್ಪಿಕೊಂಡ ತರುಣ ತರುಣಿಯು ಕೂಡಿ ಇದ್ದು ಬಿಡುವದು. ಈಗ ನಾನು ನೀನು ಇರುವಂತೆ........ದುಷ್ಯಂತ ಶಕುಂತಲೆಯರ ವಿವಾಹವಾದುದು ಗಂಧರ್ವ ವಿವಾಹದಿಂದಲೇ.......ಕಣ್ವ ಋಷಿಗೂ ಆ ವಿಚಾರ ಗೊತ್ತಿರಲಿಲ್ಲ. ಅವಳು ಬಸಿರಾದಾಗಲೇ ಅವನಿಗೂ ಕೂಡ ಆ ವಿಷಯ ತಿಳಿದು ಬಂದದ್ದು. ....... ದೇವ ದೇವತೆಗಳೇ ಇಂತಹ ವಿಷಯುವನ್ನು ಮಾಡಿರುವಾಗ ನೀನು ನಾನು ಹೆದರುವದೇಕೆ ....? ಮುಂದೆ ಏನಾದರೂ ಸಂಭವಿಸಿದರೆ ನಾನಿರುವದಿಲ್ಲವೇ .... ? .... ನಾನು ನಾಳೆಯೇ ಸತ್ತು ಹೋಗುವೆನೆಂದು ತಿಳಿದುಕೊಂಡಿರುವೆಯಾ...?" ಎಂದು ಆತ ಹೇಳಿದಾಗ ಹೃದಯದಲ್ಲಿ ಶಲ್ಯ ನಟ್ಟಂತೆ ಆಗುತ್ತಿತ್ತು.

ನಾನು ಅವನಿಗೆ ಮುಂಪೆ ಮಾತನಾಡಿಸಗೊಡುತ್ತಿರಲಿಲ್ಲ. ಅವನ ಇಂತಹ ಮಾತಿನಲ್ಲಿ ನಾನು ವಿಶ್ವಾಸವಿಡಕೂಡದೆ...?

ನಾನು ಹೆಣ್ಣು ಹೆತ್ತ ಮನೆಗೆ ಬಂದಿಲ್ಲ ಒಂದು ದಿನ ಹೊರತಾಗಿ ಹೊಸ ಮನೆಯನ್ನು ಸೇರಲೇಬೇಕು. ಆ ಸೇರುವ ಮನೆ ರಂಗನದು ಎಂಬ ವಿಶ್ವಾಸವನ್ನು ರಂಗ ನನ್ನಲ್ಲಿ ತಂದುಕೊಟ್ಟರೆ ಅವನನ್ನು ನಂಬಬಾರದೆ....? ಅವನ ಮಾತಿನಲ್ಲಿ ವಿಶ್ವಾಸವಿಡಕೂಡದೆ....?

ಸ್ತ್ರೀಗೆ ಜಗದಲ್ಲಿ ಯಾವ ಮಾತೂ ಅಸತ್ಯವಾಗಿ ಕಾಣುವದಿಲ್ಲ. ಅದಕ್ಕೆ ಕಾರಣ ಅವಳ ಅಜ್ಞಾನವಲ್ಲ. ಅವಳು ಅಷ್ಟೊಂದು ಸರಳ ಜೀವಿ. ಯಾರಲ್ಲಿಯೋ ಅವಳಿಗೆ ಕೊಂಕು ಕಾಣದು. ಯಾರ ಮಾತಿನಲ್ಲಿ ಅವಳಿಗೆ ಅವಿಶ್ವಾಸ ತೋರದು ಅದಕ್ಕೆ ಕಾರಣ ಅವಳಿಗಿರುವ ತಾಯಿ ಹೃದಯ.

ತಾಯಿಯ ಹೃದಯ.

ಹೆಣ್ಣು ಎಲ್ಲದಕ್ಕಿಂತ ಹೆಚ್ಚಾಗಿ ತಾಯಿ. ವಿವಾಹಿತ ಪತಿಗೆ ಕೂಡ ತಾಯಿಯಾಗಿ ಬಾಳುವ ಹಿರಿ ಯೋಗ್ಯತೆ ಅವಳದು ಅಂತೆಯೇ ಜಗದಲ್ಲಿ ಅಪನಂಬಿಗೆ ಎನ್ನುವದು ಅವಳಿಗೆ ಕಾಣದು.

ಮಕ್ಕಳ ಮಾತಿನಲ್ಲಿ ಅವಿಶ್ವಾಸ ತಾಳುವವಳು ತಾಯಿ ಹೇಗೆ....?

ಆದರೆ ಮಕ್ಕಳಾಗದವರು ಮಾತ್ರ ತಾಯಿಯ ಮಕ್ಕಳಿರುವದಿಲ್ಲ. ಕ್ರೂರ ವ್ಯಾಘ್ರನಿಗೂ ಕೂಡ ವಚನ ಕೊಟ್ಟು ಅದರಂತೆ ನಡೆದುಕೊಳ್ಳುವ ತಾಯಿ ಗುಣದ ಲವಲೇಶವಾದರೂ ಅವರ ರಕ್ತದಲ್ಲಿ ಇರುವದಿಲ್ಲ. ಅವರು ತಾಯಿಯ ಮಕ್ಕಳಾಗಲು ಅಯೋಗ್ಯರು.

ಗಂಡಸು ಮಗನಾದರೆ ತಾಯಿಯ ಮಗನಲ್ಲ ತಂದೆಯ ಮಗ. ಅವನಲ್ಲಿ ಸೇರುವ ಗುಣ ಗಂಡಸಿನದು. ತಂದೆಯದು. ಅಲ್ಲದೆ ತಾಯಿಯದಲ್ಲ.

ತಾಯಿಯ ಹೃದಯದಿಂದ ತಾಯಿ ಗುಣದಿಂದ ನಾನು ರಂಗನ ಪ್ರತಿಯೊಂದು ಮಾತಿನಲ್ಲಿ ವಿಶ್ವಾಸ ತಾಳುತ್ತಿದ್ದೆ. ಅಂತೆಯೇ ಅವನನ್ನು ಪತಿಯೆಂದು ಭಾವಿಸಿ ಅವನ ಯಾವ ಕಾರ್ಯಕ್ಕೂ ತಡೆ ಮಾಡುತ್ತಿರಲಿಲ್ಲ. ಪತಿಯ ವಿರುದ್ಧವಾಗಿ ನಡೆದುಕೊಳ್ಳುವವಳು ಪತ್ನಿ ಹೇಗೆ ?

ಆತ ತಂದೆಯ ಮಗನಾಗಿದ್ದ. ಸುಳ್ಳು–ಹೇಳುವದೇ ತಂದೆಯ ಗುಣ. ತಮ್ಮ ಸ್ವಾರ್ಥಕ್ಕಾಗಿ ಜಗತ್ತನ್ನೇ ಮೋಸಗೊಳಿಸುವದು ಗಂಡಸಿನ ಗುಣ. ಅವನೂ ಗಂಡಸು. ಗಂಡಸು ಗಂಡಸಿನಂತೆ ನಡೆದುಕೊಳ್ಳಬೇಡವೆ...?

ಅವನು ಗಂಡಸಿನಂತೆ ಆಚರಿಸಿದ.

ನಾನು ಸ್ತ್ರೀಯಂತೆ ನಡೆದೆ.

ಅದುವೇ ಅಪರಾಧ.

ಕಾಮಿನಿ ಕೂಡ ಅದನ್ನೇ ಹೇಳುತ್ತಾಳೆ—

"ಗಂಡಸು ಗಂಡಸಾಗಿ ಗಂಡಸಿನಂತೆ ನಡೆದುಕೊಳ್ಳುತ್ತಾನೆ. ಸ್ತ್ರೀ ಸ್ತ್ರೀಯಾಗಿ ನಡೆಯುತ್ತಾಳೆ. ಅಂತೆಯೇ ಅಪರಾಧವಾಗುತ್ತದೆ. ಪಾಪ ಉದ್ಭವಿಸುತ್ತದೆ."

"ಗಂಡಸು ಗಂಡಸುತನವನ್ನಾದರೂ ಬಿಡಬೇಕು. ಇಲ್ಲವೆ ಸ್ತ್ರೀ ತನ್ನ ಸ್ತ್ರೀತ್ವವನ್ನಾದರೂ ತೊರೆಯಬೇಕು. ಅಂದರೆ ಈ ಜಗದಲ್ಲಿ ಎಂದೆಂದಿಗೂ ಯಾವ ರೀತಿಯಲ್ಲಿ ಪಾಪ ಘಟಿಸುವದಿಲ್ಲ. ಅಪರಾಧವಾಗುವದಿಲ್ಲ."

"ಗಂಡಸಿಗೆ ಮುಖ್ಯವಿದ್ದುದು ಸುಖ ಸಾರ್ಥ ತನ್ನ ಸುಖ. ವೈಯಕ್ತಿಕ ಸುಖ. ಅದಕ್ಕಾಗಿ ಎಂತಹ ಪ್ರಚಂಡ ಸಾಹಸಗಳನ್ನು ಮಾಡಲು ಕೂಡ ಆತ ಸಿದ್ಧನಾಗುತ್ತಾನೆ. ದೇಶ ವಿದೇಶ ಎಲ್ಲಿಯೇ ಸುಖದ ಲಭ್ಯವಿರಲಿ ಅಲ್ಲಿಗೆ ಹಾರುತ್ತಾನೆ. ಲಕ್ಷಾವಧಿ ಜನರ ನೆತ್ತರವನ್ನು ಹರಿಸಿದರೂ ಆತ ನಿಗೆ ಪರಿವೆಯಿಲ್ಲ. ತನಗೆ ಬೇಕಿದ್ದ ಸುಖದ ವಸ್ತು ದೊರೆಯಲೇಬೇಕು. ದೊರಕಿಸಿಕೊಳ್ಳುತ್ತಾನೆ."

"ಸ್ತ್ರೀ ಅವಳ ಜೀವನವೇ ತ್ಯಾಗ. ತ್ಯಾಗದ ಹೆಸರೇ ಸ್ತ್ರೀ ಇದ್ದಿರ ಬಹುದು. ಅಥವಾ ದೇವರ ಅವತಾರದಂತೆ ಸ್ತ್ರೀ ತ್ಯಾಗದ ಅವತಾರವಾಗಿರ ಬಹುದು. ಯಾರು ಎಂತಹರು, ಎಲ್ಲಿ, ಯಾವ ವಿಚಾರವೂ ಅವಳಿಗೆ ಸೋಂಕದು. ಯಾರಿಗೆ ಬೇಕಾಗಲಿ ಬೇಡವಾಗಲಿ ಅವಳು ತ್ಯಾಗಕ್ಕೆ ಸಿದ್ಧ ಳಾಗುತ್ತಾಳೆ. ಜಗತ್ತಿನ ಮೇಲೆ ತನ್ನ ಜೀವವನ್ನೂ, ಜೀವನವನ್ನೂ ನಿವಾ ಳಿಸಿ ಚೆಲ್ಲುತ್ತಾಳೆ."

" ತ್ಯಾಗಿಗೆ ಸುಖ ದೊರೆಯುವದೇ .. ?"

" ಸ್ವಾರ್ಥಕ್ಕೆ ಸುಖ ದೊರೆಯುದೆಯೆ ಇರುವದೇ ? "

" ಸ್ವಾರ್ಥಕ್ಕೆ ತ್ಯಾಗದ ಜೊತೆಯಾದರೆ ಇನ್ನೇನು ಬೇಕು ? ಸ್ವರ್ಗವೇ ಅಂಗೈಯಲ್ಲಿದ್ದಂತೆ "

" ತ್ಯಾಗಿ ಸ್ತ್ರೀ ಜೀವ ಜೀವಮಾನವೆಲ್ಲ ತನ್ನ ಧ್ಯೇಯ ಸಿದ್ಧಿಗಾಗಿ ತೇಯುತ್ತಾಳೆ. ಆದರಿಂದಲೇ ಅವಳಿಗೆ ಧನ್ಯತೆ "

" ಸ್ವಾರ್ಥ-ಕೂಡ ತನ್ನ ಜೀವಮಾನವನ್ನೆಲ್ಲ ತನ್ನ ಧ್ಯೇಯ ಪೂರ್ತಿ ಕಳೆಯುತ್ತಾರೆ. ಆದರಿಂದಲೇ ಅವನಿಗೆ ಪೂರ್ಣತೆ "

" ಸ್ವಾರ್ಥಿ ನಿಸ್ವಾರ್ಥಿಗಳ ಮಿಲನ ಬೆಂಕಿ ಗಾಳಿಗೂ ಕೂಡಿದಂತೆ ಗಾಳಿ ಬಿಟ್ಟಷ್ಟು ಬೆಂಕಿಗೆ ಹಿತ ಅದು ಹೆಚ್ಚೆಚ್ಚಾಗಿ ದಹಿಸಲು ಆರಂಭಿಸುತ್ತದೆ.ಇದ್ದು ಬಿದ್ದುದನ್ನು ಭಸ್ಮ ಮಾಡುತ್ತದೆ. ಜಗತ್ತನ್ನೇ ಹಾಳು ಮಾಡುತ್ತದೆ. "

" ಸುಮಿತ್ರಾ, ಜಗದ ಇತಿಹಾಸವೆಂದರೆ ಸ್ವಾರ್ಥಿ ಗಂಡಿನ ತಾಂಡವ ನೃತ್ಯದ ದರ್ಶನ "

ಜಗತ್ತಿನ ಇತಿಹಾಸವೆಂದರೆ ಅಸಹನೀಯ ಯಾತನೆಯನ್ನು ಕೂಡ ನಗು–ನಗುತ್ತ ಸಹಿಸಿದ ಸ್ತ್ರೀ ಜೀವನದ ದರ್ಶನ "

" ಜಗತ್ತಿನ ಇತಿಹಾಸವೆಂದರೆ ಸ್ವಾರ್ಥಿ ನಿಸ್ವಾರ್ಥಿಗಳ ದೇವ ದೈತ್ಯರ ಪಾಪ ಪುಣ್ಯದ ಹಿಂಸೆ, ಅಹಿಂಸೆಗಳ ನಡುವೆ ನಡೆದ ಹೋರಾಟದ ಕತೆ "

" ಪಾಪ ಮಾಡುವದು ಪುರುಷನ ಕಾರ್ಯ "

" ಅದನ್ನು ತೊಳೆಯುವದು ಸ್ತ್ರೀ ಕರ್ಮ. ಅದಕ್ಕೆ ಅವಳು ಹೇಳುವ ಹೆಸರು ಧರ್ಮ. ಸ್ತ್ರೀ ಧರ್ಮ. "

" ಸ್ವಾರ್ಥದಿಂದ ಸರ್ವಸ್ವವನ್ನು ಸ್ವಾಹಾ ಮಾಡುವವ ಪುರುಷ."

" ಸಾರ್ಥತೆಯಿಂದ ನನ್ನು ತಾನೇ ಅವನಿಗೆ ಆಹುತಿ ಕೊಡುವವಳು ಸ್ತ್ರೀ "

" ದೈತ್ಯ ಗಂಡಸಿನ ರಕ್ತ ಪಿಪಾಸೆಗೆ ಪುಣ್ಯದೇವತೆ ಸ್ತ್ರೀಯ ನೈವೇದ್ಯ"

"ಸುಮಿತ್ರಾ ಪೃಥ್ವಿ ಹುಟ್ಟಿದಂದಿನಿಂದ ನಿನ್ನ ವರೆಗೆ ನನ್ನ ವರೆಗೆ ಎಲ್ಲರನ್ನೂ ಸಾಲು ನಿಲ್ಲಿಸಿ ನೋಡು. ಒಬ್ಬೊಬ್ಬರನ್ನು ನಿರೀಕ್ಷಿಸು ಎಲ್ಲ ಸ್ತ್ರೀಯರಲ್ಲಿ ಕಂಡುಬರುವದು. ಅದೇ ಸಹನ ಸೀಲತೆ ಅದೇ ತ್ಯಾಗ. ಅದೇ ಬಲಿದಾನ ಅದೇ ಆಹುತಿ......ಇಷ್ಟೆಲ್ಲವಿದ್ದರೂ ಕೊನೆಗೆ ಅಪಖ್ಯಾತಿ ಕೂಡ ಅವಳಿಗೆ!"

" ಸ್ತ್ರೀ ಪತಿಗಾಗಿ— ಅರ್ಥಾತ್ ತನ್ನನ್ನು ತುಳಿದು ಆಳುವವನಿಗಾಗಿ ಎನನ್ನೂ ಮಾಡಿಲ್ಲ? "

ಪತಿಗಾಗಿ ಹೆತ್ತ ಕರುಳಿಗೆ ಮೊಲೆ ಹಾಲಿನ ಬದಲು ವಿಷಕೊಟ್ಟ ತಾಯಿ ಇರುವಳು; ಕೇಳಿರುವಿಯಾ ಪ್ರಲ್ಹಾದನ ತಾಯಿ ಕಯಾಧುವಿನ ಕಥೆಯನ್ನು?"

" ಒಂದೆಡೆಗೆ ರಾಕ್ಷಸೀ ಶಕ್ತಿಯಾದ ಪತಿ, ಇನ್ನೊಂದೆಡೆಗೆ ದೈವೀ ಶಕ್ತಿಯು ಕಂದ "

" ಒಂದೆಡೆಯಲ್ಲಿ ರಕ್ತದ ದಾಹ. ಇನ್ನೊಂದೆಡೆಯಲ್ಲಿ ನಿರ್ಭಯ "

" ಒಂದೆಡೆಯಲ್ಲಿ ಕ್ರೂರ ಉರಿನಾಲಿಗೆ. ಇನ್ನೊಂದೆಡೆಗೆ ಹಸನ್ಮುಖ "

" ಒಂದು ಮೃತ್ಯುವಿನ ಕರಾಳ ಹಸ್ತ. ಇನ್ನೊಂದು ವರದಾನ "

" ಒಂದು ಪತಿ "

" ಇನ್ನೊಂದು ಮಗ "

" ಇವರಿಬ್ಬರ ಮಧ್ಯದಲ್ಲಿ — ಪತ್ನಿ - ತಾಯಿ ! "

" ಕಯಾಧು ಪತಿಯ ಪತ್ನಿ ಪತಿವ್ರತೆ ಅಹುದು "

" ಅದೇ ಕಯಾಧು ಮಗನನ್ನು ಹೆತ್ತ ತಾಯಿಯೂ ಅಹುದು "

" ರಾಕ್ಷಸಿ ಶಕ್ತಿಯ ಪತ್ನಿಯಾಗಬೇಕೆ ....? ಅಥವಾ—"

" ದೈವೀ ಶಕ್ತಿಯ ತಾಯಿಯಾಗಬೇಕೆ....?

" ಯಾವ ಶಕ್ತಿ ಹಿರಿದು ಈ ಜಗದಲ್ಲಿ....? ದೇವ ದೇವತೆಗಳೂ ಕೂಡ ಬಾಗುವರು ದೈವಿ ಶಕ್ತಿಗೆ. ತಮ್ಮ ಜನ್ಮವನ್ನೇ ದೇವತೆಗಳು ದೈವಿ ಶಕ್ತಿಯ ಆರಾಧನೆಗಾಗಿ ಮೀಸಲಾಗಿಡುವದು. "

" ಅಂತಹ ದೈವೀ ಶಕ್ತಿಗೆ ಕಯಾಧು ತಾಯಿ. "

" ಇನ್ನೊಂದೆಡೆಗೆ ರಾಕ್ಷಸೀ ಶಕ್ತಿ ಉನ್ಮತ್ತತೆಯಿಂದ ಎದೆ ಎತ್ತರಿಸಿ ಕ್ರೂರ ಕರವಾಳ ಹಿಡಿದು ನಿಂತಿದೆ. ಹುಚ್ಚತನದಿಂದ ದೈವೀ ಶಕ್ತಿಯ ನಾಶಕ್ಕೆ ! "

" ಕಯಾಧುವಿನ ಎದುರು ಕವಲೊಡೆದ ದಾರಿಯಿದೆ. ಹೇಳು ಸುಮಿತ್ರಾ....ಹೇಳು.. ಅವಳು ಅನುಸರಿಸಬೇಕಾದ ಮಾರ್ಗ ಯಾವುದು..?"

" ದೈವಿಶಕ್ತಿಗೆ ಎದುರಾಗುವ ದೇವರೊಡನೆ ವೈರತ್ವ ಕಟ್ಟಿಕೊಳ್ಳುವದು"

" ರಾಕ್ಷಸಿ ಶಕ್ತಿಗೆ ವಿರೋಧವಾಗುವದೆಂದರೆ ಪ್ರಾಣ ಕಳೆದುಕೊಳ್ಳ ಬಹುದು. ಆದರೆ ಪ್ರಾಣ ಕಳೆದುಕೊಂಡ ನಂತರ ಲೀನವಾಗುವದು. ಆ ದೇವರಲ್ಲಿ ಆದರೂ...."

" ಆದರೂ ದೈವೀ ಶಕ್ತಿಯನ್ನು ಅನುಸರಿಸಲಿಲ್ಲ. ಸ್ವತಹ ದೈವಿ ಶಕ್ತಿ"

" ಏಕೆ........?"

"ಅವಳು ಗಂಡನ ಹೆಂಡತಿ. ಪತಿಯ ಪತ್ನಿ...ಪತಿವ್ರತೆ !"

"ಪತಿಯ ಪತ್ನಿಗೆ ಜಗದಲ್ಲಿ ಪತಿಯಲ್ಲದೆ ಇನ್ನಾವಸಂಬಂಧವೂ ಇಲ್ಲ. ತಾಯಿಯಿಲ್ಲ, ತಂದೆಯಿಲ್ಲ....ಮಗನಿಲ್ಲ...ಯಾರೂ ಇಲ್ಲ. ಅವಳಿಗೆ ಯಾರ ಸಂಬಂಧವೂ ಇಲ್ಲ "

" ಇದ್ದ ಸಂಬಂಧ ಒಂದೇ ಒಂದು— ಪತಿ ಅದುವೇ ಸರ್ವ."

"ಅಂತೆಯೇ ಹೆತ್ತ ಮಗುವಿಗೆ ವಿಷ ಕುಡಿಸಿದಳು. ತನ್ನ ಅಮೃತ ಹಸ್ತದಿಂದ !"

" ಸ್ತ್ರೀ ಪತಿಗಾಗಿ ಏನನ್ನು ಮಾಡಿಲ್ಲ....?"

" ಸ್ತ್ರೀ ಗಂಡಸಿಗಾಗಿ ಏನನ್ನು ಮಾಡಿಲ್ಲ...?"

"ಪರಶುರಾಮನಂತಹ ದೇವನ ಅವತಾರವನ್ನು ಹೆತ್ತ ರೇಣುಕೆಗೆ ದೊರೆತ ಪ್ರತಿಫಲವೇನು ? ಜಮದಗ್ನಿ ಅವಳ ಪತಿ ಮಹರ್ಷಿ. ಅವನ ಜೊತೆಗೆ ಮಹಾಪತಿವ್ರತೆಯಾಗಿ ಸಂಸಾರ ಮಾಡಿದ್ದಾಳೆ ರೇಣುಕೆ. ಆದರೆ ಕೊನೆಗೆ—?"

"ಜಮದಗ್ನಿ ಋಷಿ ಹೇಳುತ್ತಾನೆ ಅವತಾರಿ ಮಗನಿಗೆ—"

"ಅವಳ ಶಿರಚ್ಛೇದ ಮಾಡು"

" ಅವತಾರಿ ಪುರುಷ ತಂದೆಯ ಆಜ್ಞೆಯನ್ನು ಪಾಲಿಸುತ್ತಾನೆ!"

"ಏಕೆ...? ಏನು ಕಾರಣ....? ಅವಳ ಅಪರಾಧವೇನು ? ಅವಳು ನಿಜಕ್ಕೂ ಅಪರಾಧಿಯೆ? ಈ ಎಲ್ಲ ಪ್ರಶ್ನೆಗಳಿಗೆ ಅಲ್ಲಿ ಸ್ಥಾನವೇ ಇಲ್ಲ..."

" ಅವನು ಆಜ್ಞೆ ಮಾಡುತ್ತಾನೆ ಅದರ ಪರಿಪಾಲನೆಯಾಗುತ್ತದೆ "

" ಗಂಡನು ಡಿಕ್ಟೇಟರ. ಅವನಿಗೆ ಅವಶ್ಯವಿರುವವರೆಗೆ ಎಲ್ಲವೂ ಸರಿ. ಬೇಡವಾದ ಮರುಕ್ಷಣದಲ್ಲಿ ಅವಳ ಅಂತವಾಗಲೇಬೇಕು "

" ಅವನು ಆಜ್ಞೆಮಾಡುತ್ತಾನೆ. ಅದರ ಪರಿಪಾಲನೆಯಾಗುತ್ತದೆ"

" ಸ್ತ್ರೀ ಹುಟ್ಟಿದ ಮನೆಯನ್ನು ಗಂಡನಿಗಾಗಿ ಬಿಟ್ಟುಬರುತ್ತಾಳೆ. ತಂದೆ ತಾಯಿಗಳನ್ನು ತೊರೆದು ಬರುತ್ತಾಳೆ ಅಕ್ಕ-ತಂಗಿ ಅಣ್ಣ-ತಮ್ಮಂದಿರ ಸಂಬಂಧ ಕಡಿದುಕೊಂಡು ಬರುತ್ತಾಳೆ. "

" ರಾಣಿಯಾಗಿ ಮೆರೆಯುವದಕ್ಕೆಂದು ಸ್ವಾರ್ಥದಿಂದಲ್ಲ "

" ದಾಸಿಯಾಗಿ ಬಾಳಬೇಕೆಂಬ ನಿಸ್ವಾರ್ಥದಿಂದ "

" ತ್ಯಾಗವೇ ಅವಳ ಜೀವನ, ಸುಮಿತ್ರಾ ತ್ಯಾಗವೇ ಅವಳ ಜೀವನ"

"ತಿಳಿದವಳಿರಲಿ, ತಿಳಿಯದವಳಿರಲಿ, ಜ್ಞಾನಿಯಿರಲಿ, ಅಜ್ಞಾನಿಯಿರಲಿ ಅವಳಲ್ಲಿಯ ವಿಚಾರ ಒಂದು. ಅವಳಲ್ಲಿ ಭಾವನೆ ಒಂದು. ಅವಳ ಧ್ಯೇಯ ಒಂದು.

" ಪತಿಯ ಪತ್ನಿಯಾಗಿ ಅವನ ಸೇವೆ ಮಾಡುವದು"

"ಪತಿವ್ರತೆಯಾಗಿ ಬಾಳುವದು !"

" ಸುಮಿತ್ರಾ.........ನಿನ್ನ ವಿವಾಹ ಕೂಡ ಆಗಿರಲಿಲ್ಲ. ಆದರೂ ನೀನು ನಿನ್ನನ್ನು ಮೋಸಗೊಳಿಸಿದವನ ಜೊತೆಗೆ ಒಂದೇ ಭಾವನೆಯಿಂದ ನಡೆದು ಕೊಂಡೆ. ಆತ ಹೇಳಿದ್ದಕ್ಕೆ 'ಹೂಂ' ಎಂದು ಒಪ್ಪಿ ಆತನ ಪ್ರತಿಯೊಂದು ಮಾತಿನಲ್ಲಿ ಅಚಲ ವಿಶ್ವಾಸವಿಟ್ಟೆ. ಇವಕ್ಕೆ ನಮ್ಮವರು ಹೇಳುವದು ಪತಿ

ವೃತೆಯು ಲಕ್ಷಣ ಎಂದು. ಕೊರಳಲ್ಲಿ ಮಾಂಗಲ್ಯ ಎಂದು ಕರೆಯುವ ಎರಡು ಬಿಲ್ಲಿ ಬಳೆ, ಬಾಳುವ ಬಂಗಾರದ ತಾಳಿಗಳನ್ನು ಬಿಟ್ಟು ಉಳಿದದ್ದೆಲ್ಲ ನಿನ್ನಲ್ಲಿ ಇತ್ತು. ಆ ತಾಳಿಯಿಂದಲೇ ಸಂಬಂಧವೇ....? ತಾಳಿಯೇ ಸಂಬಂಧವಾಗಿದ್ದರೆ ಅದನ್ನು ಮಾಡುವ ಅಕ್ಕಸಾಲಿಗ ಅದನ್ನು ಮಾರುವ ವರ್ತಕ ಇವರೆಲ್ಲರೂ ಸ್ತ್ರೀ ಜಾತಿಯ ಪತಿಯೇ ಆಗಿ ಬಾಳಬಹುದಲ್ಲ ?"

"ಬಾಂಧವ್ಯದ ಬಂಧನ ಹೊರಗಿನಿಂದಲ್ಲ ಹೃದಯದಿಂದ"

"ಹೃದಯದಿಂದ ನಿನ್ನನ್ನು ನೀನು ಬಂಧಿಸಿಕೊಂಡೆ. ಆದರೆ ಅವ... ?

"ಅವನ ಮಾತೇಕೆ? ಅವ ಗಂಡಸಲ್ಲವೆ ? ಗಂಡಸಿಗೆ ಹೃದಯವಿರುವದೆ? ಹೃದಯವಿದ್ದವರು ಗಂಡಸರೆ...?"

"ಹೃದಯವಿಲ್ಲದ ಯಂತ್ರ ಗಂಡಸರು. ಉಸುಕಿನ ಮರುಭೂಮಿಯಂತೆ ಗಂಡನು. ಸ್ತ್ರೀ ತ್ಯಾಗಿಯಾಗಿ ತನ್ನ ನೆತ್ತರದ ಮಳೆಕರೆದರೂ ಮರುಭೂಮಿಯಲ್ಲಿ ನೀರು ಕಾಣಿಸಲಾರದು"

"ಗಂಡನಾದ ಆತ ಗಂಡಸಿನಂತೆ ಎದ್ದು ನಡೆದ"

"ನೀನು...? ನೀನು ಅವನ ಅನ್ಯಾಯದ, ಅತ್ಯಾಚಾರದ ಪಾಪದ ಫಲವನ್ನು ಬೇಡವಾದರೂ ಅಪಹಾಸ್ಯಕ್ಕೆ, ಯಾತನೆಗೆ ಗುರಿಯಾದರೂ ಹೊತ್ತುಕೊಂಡು ತಿರಗುವೆ"

"ಏಕೆಂದರೆ ನೀನು ಸ್ತ್ರೀ........ನೀನು ತ್ಯಾಗಿ.......ನಿನ್ನ ಜೀವನವೇ ಬಲಿದಾನಕ್ಕಾಗಿ..... ."

"ನಿನ್ನಂತೆ....ನಾನು. ನಾನೂ ಸ್ತ್ರೀ........ನೀನು ಕನ್ನಡ ಮುಲ್ಕೀ ಪರೀಕ್ಷೆ ಪಾಸಾಗಿದ್ದರೆ ನಾನು ಬಿ.ಎ.ಪಾಸಾಗಿರುವೆ. ಆದರೂ ನಾನು ಸ್ತ್ರೀ."

"ಅದಕ್ಕಾಗಿ ನನ್ನ ಜೀವನವೂ ಹಾಳಾಗಲೇಬೇಕು. ಹಾಳಾಯಿತು"

"ನೀನು ಅವಿವಾಹಿತಳೆಂದು ಇದ್ದೆ."

"ನಾನು ಸರಕಾರದಲ್ಲಿ ನನ್ನ ಪತಿ ಇಂತಹನು ಎಂದು ರಜಿಸ್ಟರ ಮಾಡಿಸಿದ್ದೆ"

" ಆದರೆ ಕೊನೆಗೆ-

"ಕೊನೆಗೆ ಆಗುವದೇನು ? ಸ್ತ್ರೀ ಯಾವಳಾದರೂ ಸರಿ ಆಗುವದು ಒಂದೇ ಒಂದು."

ಗಂಡಸಿನ ಅತ್ಯಾಚಾರ ತಡೆದುಕೊಂಡು ಬಿದ್ದಿರಬೇಕು ಸತ್ತಂತೆ. ಇಲ್ಲವೇ ಸತ್ತುಹೋಗಬೇಕು. ಇವೆರಡೂ ಇಲ್ಲದಿದ್ದರೆ ನಿನ್ನಂತೆ ನಾನು-ನನ್ನಂತೆ ನೀನು ಯಾವ ಅಪರಾಧವೂ ಇಲ್ಲದೆ ಅಪಹಾಸ್ಯಕ್ಕೆ, ಅವಹೇಳನೆಗೆ ಗುರಿಯಾಗಿ ತಲೆ ಮರಿಸಿಕೊಂಡು ಬಾಳುತ್ತಿರಬೇಕು. ಸತ್ತಂತೆ..."

" ನಮ್ಮನ್ನು ಅಪಹಾಸ್ಯಕ್ಕೆ ಗುರಿಮಾಡುವವರು ಕೂಡ ಅವರು.... ಗಂಡಸರು...ಪುರುಷರು "

"ಅಂತಹರಿಗೆ ನಾವು ಕರೆಯುವೆವು ದೇವರು. ಪತಿ ದೇವರು.

" ಇವರು ದೇವರೆ ....? ದೇವರಿಂದ ಮನುಷ್ಯರಿಗೆ ಹಾನಿಯುದ್ದರೆ ರಾಕ್ಷಸರೆಂದು ಕೂಗುವದು ಯಾರಿಗೆ....?...."

" ದೇವ ಎನ್ನುವದು ರಕ್ಷಕ ಶಕ್ತಿ ಅಂತಹ ಶಕ್ತಿ ಇದ್ದು ಮಾನವ ರೆಲ್ಲರೂ ದೇವರು ಸ್ತ್ರೀ ಪತಿಗೆ 'ಪತಿ ದೇವರು' ಎನ್ನುವದರ ಮತಿತಾರ್ಥ ವಾದರೂ ಅದುವೆ "

ಸಂಸಾರದ ಕಷ್ಟಸುಖಗಳಲ್ಲಿ ತಲ್ಲೀನಳಾಗಿ ತನ್ನನ್ನು ತಾನೇ ಮರೆತು ಬಿಡುವಳು. ಸ್ತ್ರೀ ತನ್ನನ್ನು ತಾನೇ ಮರೆತ ಸ್ತ್ರೀಯ ಯೋಗಕ್ಷೇಮವನ್ನು ನೋಡಿಕೊಳ್ಳುವದು ಗಂಡಸಿನ ಕರ್ತವ್ಯ ಅಂತಹ ಕರ್ತವ್ಯವನ್ನು ನೆರವೇರಿಸು ವವ ಪತಿ.

" ತನ್ನನ್ನುಳಿದು ಉಳಿದವರ ಯೋಗಕ್ಷೇಮವನ್ನು ನೋಡಿಕೊಳ್ಳು ವದು ದೇವತ್ವ ಅಂತಹ ಕರ್ತವ್ಯವನ್ನು ಮಾಡುವವನನ್ನು ನಾವು ಕರೆಯು ವೆವು 'ದೇವ' ಎಂದು.

" ಸ್ತ್ರೀಗಾಗಿ ಸತಿಗಾಗಿ ಅದೇ ಕರ್ತವ್ಯವನ್ನು ಪಾಲನೆ ಮಾಡುವ ವೆಂದು ಅವನಿಗೆ ಕರೆಯುವದು 'ಪತಿದೇವರು' ಎಂದು "

" ಅಂತಹ ಕರ್ತವ್ಯವನ್ನು ಮಾಡದಿದ್ದವ ಕರ್ತವ್ಯಚ್ಯುತ. ದೇವರಲ್ಲ ದೈತ್ಯ. "

"ರಕ್ಷಿಸುವವ ದೇವ "

ಕೊಲ್ಲುವವ ರಾಕ್ಷಸ "

" ಸುಮಿತ್ರಾ...ತಮ್ಮ ದೈಹಿಕ ವಾಸನೆಗಾಗಿ ಇನ್ನೊಬ್ಬ ಸ್ತ್ರೀಯನ್ನು, ಪತಿಗಾಗಿ ತನ್ನ ಮನೆಯನ್ನು ತೊರೆದು ಬಂದ ಸ್ತ್ರೀಯನ್ನು ಘಾಸಿ ಮಾಡುವವ, ಹಿಂಸೆ ಮಾಡುವವ ದೇವರೆ........? ಪತಿ ಎಂದಾದ ಮಾತ್ರಕ್ಕೆ, ಗಂಡಸು ಎಂದಿದ್ದುದಕ್ಕೆ ಸ್ತ್ರೀ ಅವನ ಗುಲಾಮಳಾಗಿಯೇ ಬಾಳಬೇಕೆ ...? ಏಕೆ....?"

" ಇದೆಲ್ಲಿಯ ನ್ಯಾಯ...?"

" ನಮಗೂ ಮನವಿಲ್ಲವೆ...? ಹೃದಯವಿಲ್ಲವೆ....? ದೇಹವಿಲ್ಲವೆ .. ?"

" ವಿವಾಹವೆಂದರೆ ಸ್ತ್ರೀಯ ಮನವನ್ನು ಮಸಣಕ್ಕಟ್ಟುವ ದಿನವೆ....? ವಿವಾಹವೆಂದರೆ ಸ್ತ್ರೀಯ ಹೃದಯದ ಹೋಳಿಯೆ ? ವಿವಾಹವೆಂದರೆ ಸ್ತ್ರೀ ದೇಹದ ಮಾರಾಟವೆ...?"

"ಸ್ತ್ರೀ ಜನ್ಮ ಕೂಡ ತಾಯಿಯಿಂದ ಅಲ್ಲವೆ....? ಸ್ತ್ರೀ ಕೂಡ ಬೆಳೆಯುವದು ತಾಯಿಯ ಹಾಲಿನಿಂದ ತಾಯಿಯ ಮಮತೆಯಿಂದ ಅಲ್ಲವೆ....?"

" ಹೀಗಿದ್ದರೂ ಏಕೆ ಈ ಅನ್ಯಾಯ....?"

" ಈ ಗುಲಾಮರ ಸಂತೆಯನ್ನು ತಡೆದು ಹಾಕುವವರು ಯಾರೂ ಇಲ್ಲವೆ....?"

" ಗಂಡಸಿನ ರಾಜ್ಯದಲ್ಲಿ ಸಿಕ್ಕು ಸ್ತ್ರೀ ಜಿಬ್ಬೆಯಾಗುತ್ತಿದ್ದಾಳೆ. ಅವಳ ಉದ್ಧಾರವಾಗಲೇಬೇಕು. ಅವಳೂ ತಾಯಿಯ ಮಗನಂತೆ ಅದೇ ಅಧಿಕಾರದಿಂದ ಅದೇ ಸ್ವತಂತ್ರತೆಯಿಂದ ಬಾಳುವ ದಿನ ಬರಬೇಕು....ಆದರೆ....

" ಆದರೆ ಅದಕ್ಕೆ ಬಲಿದಾನ ಬೇಕು.... .. ಸ್ತ್ರೀಯರಲ್ಲಿ ಜಾಗೃತಿಯಾಗಬೇಕು. ಜಾಗೃತಿ ಎಂದರೆ ಶಾಲೆಯಲ್ಲಿ ಕಲಿತು ಬರುವದಲ್ಲ"

" ತಮಗೆ ಬೇಕಾದುದೇನು ಎನ್ನುವದರ ಅರಿವು ಮೂಡಬೇಕು. ಅಕ್ಕ ತಂಗಿಯರು ತಮಗೆ ಸ್ವಾತಂತ್ರ್ಯಬೇಕು ಎನ್ನುತ್ತಾರೆ. ಆದರೆ— ಅವರಿಗೆ ಸ್ವಾತಂತ್ರ್ಯದ ಅರ್ಥವೇ ಗೊತ್ತಿಲ್ಲ.

" ಅವರಿಗೆ ಸ್ವಾತಂತ್ರ್ಯವೆಂದರೆ ಆರ್ಥಿಕ ಸ್ವಾತಂತ್ರ್ಯ. ಆಫೀಸಿನಲ್ಲಿ ಕುಳಿತು ಟಾಯಿಪ ಮಾಡಲು ಅವಕಾಶ ಬೇಕು. ಕಚೇರಿಯಲ್ಲಿ ಕಾರಕೂನರಾಗುವದು. ತಿಂಗಳಿಗೆ ದೊರೆತ ಹಣ ದೊರೆಯುವ ಹಣ-ವೇ ಅವರಿಗೆ ಸ್ವಾತಂತ್ರ್ಯ ವಾಗಿದೆ. "

" ಸ್ವಾತಂತ್ರ್ಯ ಹಣಕ್ಕೆ ದೊರೆಯುತ್ತದೆಂದು ಅವರ ಭ್ರಮೆ. ಅದೇ ಭ್ರಮೆಯಿಂದ ಪರತಂತ್ರ್ಯದಲ್ಲಿ ಸಿಕ್ಕು ನರಳುತ್ತಿದ್ದರೆ ಆದರಿಂದ ಪಾರತಂತ್ರ್ಯ ಅವರನ್ನು ಮತ್ತಷ್ಟು ಬಿಗಿಯಾಗಿ ಬಿಗಿದಿದೆ. ಹಣಕ್ಕಾಗಿ ತಮ್ಮನ್ನು ತಾವೇ ಮಾರಿಕೊಂಡು ತಮ್ಮ ಬಂಧನವನ್ನು ಮತ್ತಷ್ಟು ಬಿಗಿ ಮಾಡಿಕೊಳ್ಳುತ್ತಿದ್ದಾರೆ "

" ಸುಮಿತ್ರಾ ನಾನು ಹಣ ದೊರಕಿಸುತ್ತಿರುವೆ. ನನಗೆ ಹೇಳುವವರು ಕೇಳುವವರು ಯಾರೂ ಇಲ್ಲ. ನಾನೂ ಸ್ವತಂತ್ರಳು ಎಂದು ಹೇಳಬಹುದು. ಆದರೆ ನಿಜಕ್ಕು ನಾನು ಸ್ವತಂತ್ರಳೆ...? ಸ್ವಾತಂತ್ರ್ಯವೆಂದರೇನು .... ?

" ಬಂಧನದಿಂದ ಬಿಡುಗಡೆ ಸ್ವಾತಂತ್ರ್ಯ. "

" ಅಂತಹ ಸ್ವಾತಂತ್ರ್ಯ ನನಗಿದೆಯೆ...? ನಾನೂ ಒಬ್ಬನ ಪತ್ನಿಯಲ್ಲವೆ...? ನನಗೆ ಬೇಡವಾದರೂ ಸರಿ ಅವ ನನ್ನ ಪತಿ ಅಲ್ಲವೆ? ಅವನ ಜೊತೆಗೆ ಸಂಸಾರ ಮಾಡು ಬಿಡು ಅವನ ಹೆಸರು ಹಚ್ಚಿಕೊಂಡೇ ನಾನು ಬಾಳಬೇಕಲ್ಲವೆ...? ಸಾವಿರ ಮೈಲುಗಳಾಚೆ ಇರುವವನ ಹೆಸರಿನಿಂದ ನಾನಿಲ್ಲಿ ಬಾಳಬೇಕು. ಇದು ಸ್ವಾತಂತ್ರ್ಯವೆ? ಆದರೆ ನನ್ನ ಅಕ್ಕತಂಗಿಯರ ದೃಷ್ಟಿಯಲ್ಲಿ ಇದುವೆ ಸ್ವಾತಂತ್ರ್ಯ ! "

ಸ್ವಾತಂತ್ರ್ಯವೆಂದರೆ ಹೊಣೆಗಾರಿಕೆ ಹಾರಿಸಿಕೊಂಡು ಬಾಳುವದಲ್ಲ. [illegible] ನಡೆಯುವದು. "

" ಗಂಡಸು ಹೊಣೆಯರಿತುಕೊಂಡು ನಡೆದರೆ ಸ್ತ್ರೀಗೆ ಸ್ವಾತಂತ್ರ್ಯ; ಕಲಿಸಬೇಕಾಗಿದೆ ಗಂಡಸಿಗೆ ಹೊಣೆಯರಿತುಕೊಂಡು ನಡೆಯಲು, ಅವರು ಜ್ಞಾನಿಯಾಗುವ ವರೆಗೆ ನಮಗೆಸ್ವಾತಂತ್ರ್ಯವಿಲ್ಲ."

" ಸುಮಿತ್ರಾ... ಸ್ವಾತಂತ್ರ್ಯವೆಂದರೇನು? ಸ್ವಚ್ಛಂದ ಸ್ವಾತಂತ್ರ್ಯ ವಲ್ಲ. ಸ್ವಚ್ಛಂದದಲ್ಲಿಯೇ ಗುಲಾಮಗಿರಿಯ ಬೀಜವಡಗಿದೆ..."

" ಸ್ತ್ರೀ ಪುರುಷರು ಒಬ್ಬರನ್ನಗಲಿ ಒಬ್ಬರು ಬಾಳಲು ಸಾಧ್ಯವಿಲ್ಲ ಇಬ್ಬರೂ ತಮ್ಮ ತಮ್ಮ ಹೊಣೆಯರಿತುಕೊಂಡು ಸಾಗಬೇಕು ಒಬ್ಬರ ಕಾರ್ಯಕ್ಕೆ ಇನ್ನೊಬ್ಬರಿಂದ ಆತಂಕವಾಗಕೂಡದು. ಆತಂಕವಮಾಡು ವವ ಅಡ್ಡಿಮಾಡುವವ ಅಧಿಕಾರಿ, ಮುಖ್ಯಸ್ಥ, ರಾಜ...ಉಳಿದವರು ಗುಲಾ ಮರು ಇದುವೇ ಇಂದು ನಮ್ಮೆದುರಿಗಿರುವ ಸಮಸ್ಯೆ........ಇದು ಬಿಡಿಸಲಾರ ದಷ್ಟು ಕಠಿಣವಾದುದಲ್ಲ......."

ಎಂದು ಹೇಳುವ ಕಾಮಿನಿ ಮಾತಿನಲ್ಲಿ ಅನುಭವವಿದೆ. ಅಭ್ಯಾಸವಿದೆ.

ಗಂಡಸಾಗಲಿ, ಹೆಂಗಸಾಗಲಿ ಇಬ್ಬರೂ ತಮ್ಮ ಹೊಣೆಯರಿತುಕೊಂಡ್ಡು ನಡೆಯಲಾರಂಭಿಸಿದರೆ ಯಾವ ಸಮಸ್ಯೆಯೂ ಉದ್ಭವಿಸದು. ಸ್ತ್ರೀ ಪುರುಷ ಇಬ್ಬರೂ ಜೀವನಕ್ಕೆ ಬೇಕು. ಒಬ್ಬರು ಇಲ್ಲದೆ ಇನ್ನೊಬ್ಬರ ಬಾಳು ಅಪೂರ್ಣ. ಒಂಟಿ ವ್ಯಕ್ತಿಯಿಂದ ಯಾವ ಕಾರ್ಯವೂ ಆಗದು. ಒಬ್ಬನಿಗೆ ಇನ್ನೊಬ್ಬರು ಸೇರಿಕೊಂಡಾಗಲೇ ಬಾಳು....ಸೇರಿಕೊಳ್ಳುವರೆಂದೇ ಇಂದು ನಾನು-ಕಾಮಿನಿ ಕುಲಕರ್ಣಿ, ರಂಗ ಎಲ್ಲರೂ ಇಲ್ಲಿ ಈ ಜಗದಲ್ಲಿ ಸುತ್ತುತ್ತಿದ್ದೇವೆ. ತಿರುಗು ತ್ತಿದ್ದೇವೆ. ದುಃಖಿಸುತ್ತಿದ್ದೇವೆ.

ನಾವು ನಾಲ್ವರೂ ಇಲ್ಲಿದ್ದರೂ ಒಬ್ಬರಂತೆ ಇನ್ನೊಬ್ಬರು ಇಲ್ಲ. ಒಬ್ಬರು ಅಳುತ್ತಿದ್ದರೆ ಇನ್ನೊಬ್ಬರು ನಗುತ್ತಿರುವರು. ಒಬ್ಬರಿಗಾಗಿ ಇನ್ನೊ ಬ್ಬರು ಮರುಗುತ್ತಿರುವರು. ಒಬ್ಬರನ್ನು ಅಳಿಸಿ, ಇನ್ನೊಬ್ಬರು ನಗುತ್ತಿರು ವರು. ಏಕೆ....?

ಏಕೆ ಈ ಸಾಧುವೃತ್ತಿ...? ಏಕೆ ಈ ಪಶುವೃತ್ತಿ....?

ಕುಲಕರ್ಣಿಯವರಲ್ಲಿ ಸಾಧುವೃತ್ತಿಯಿದೆ.

ರಂಗನಲ್ಲಿ ಪಶುವೃತ್ತಿಯಿದೆ.

ಒಬ್ಬರು ದೇವರಾದರೆ ಇನ್ನೊಬ್ಬರು ಪಶು....

ಪಶುವಲ್ಲದೆ ಮತ್ತೇನು....?

ತನ್ನಂತೆ ಬದುಕಿ ಬಾಳಬಯಸುವ ಜೀವನವನ್ನು ಮಣ್ಣುಪಾಲು ಮಾಡುವ ವ್ಯಕ್ತಿ ಪಶುವಲ್ಲದೆ ಮತ್ತೇನು....?

ಕಾಮಿನಿ ಹೇಳುವದು ಸತ್ಯ 'ಗಂಡಸು ಸ್ವಾರ್ಥಿ' ಎಂದು ಅವಳು ಹೇಳುವ ಮಾತು ಸತ್ಯ. ರಂಗ ಸ್ವಾರ್ಥಿಯಾಗಿರದಿದ್ದರೆ, ರಂಗ ಮನುಷ್ಯ ನಾಗಿದ್ದರೆ ನನ್ನ ಅವಸ್ಥೆ ಈ ಮಟ್ಟಕ್ಕೆ ಇಳಿಯುತ್ತಿರಲಿಲ್ಲ

ರಂಗ ಸ್ವಾರ್ಥಿ. ಅವನಿಗೆ ನನ್ನ ಮೇಲೆ ಮಮತೆ ಇರಲಿಲ್ಲ. ನನ್ನ ಮೇಲೆ ಪ್ರೀತಿ ಇರಲಿಲ್ಲ. ಅವನಿಗೆ ಬೇಕಿದ್ದುದು ನನ್ನ ಉನ್ಮತ್ತ ದೇಹ. ಅದಕ್ಕಾಗಿ ಅತನಲ್ಲಿ ನಟನೆ... ಅದಕ್ಕಾಗಿ ಎಲ್ಲ ನಾಟಕೀಯ ಮಾತುಗಳು.

"ನಿರ್ಮಲಾ...... ನೀನಿಲ್ಲದೆ ನಾನು ಬದುಕುವದಾದರೂ ಸಾಧ್ಯ ವಿದೆಯೇ?...ಪ್ರೀತಿ ಎಂದರೆ ಏನೆಂದು ತಿಳಿದಿರುವಿ...? ಅದು ಚಿಕ್ಕಮಕ್ಕಳ ಕೈಯಲ್ಲಿಯ ಆಟಿಗೆಯ ವಸ್ತು ಎಂದು ತಿಳಿದಿರುವಿಯಾ....? ಅದು ಪೇಟೆ ಯಲ್ಲಿ ಕ್ರಯಕ್ಕೆ ದೊರೆಯುವ ವಸ್ತುವಲ್ಲ....ನಿಮ್ಮಿ....ಅದು ಸರ್ವರಿಗೂ ಸಾಧ್ಯವಿಲ್ಲ. ಅದಕ್ಕೂ ಸಾಹಸ ಬೇಕು. ಸಾಹಸದಿಂದಲೇ ಅದು ಸಿಕ್ಕು ತ್ತಿದ್ದರೆ ಸರ್ವರಿಗೂ ಸಿಗುತ್ತಿತ್ತು. ಆದರೆ ಅದು ಅದಕ್ಕಿಂತ ಆಚೆಗಿದೆ..... ನಿಮ್ಮಿ....ನಿನಗೆ ಹೇಗೆ ತಿಳಿಸಿ ಹೇಳಲಿ....? ಪ್ರೀತಿ ..(Oh...I cannot explain it)....ಓ....ಆ ಕ್ಯನಾಟ ಎಕ್ಸಪ್ಲೇನ ಇಟ್... ನಿಮ್ಮಿ...ನನಗೆ ಅದನ್ನು ಬಿಚ್ಚಿ ಹೇಳುವದು ಅಸಾಧ್ಯ....ನೋಡು....ಈ ಹೃದಯದಲ್ಲಿ ಅದು ತುಂಬಿದೆ...."

ಅಬ್ಬಾ....ಹೀಗೆಲ್ಲ ಹೇಳುವಾಗ ರಂಗ ಮಾಡುತ್ತಿದ್ದ ನಟನೆಯನ್ನು ನೋಡಿದರೆ ಅದು ಅಸತ್ಯವೆಂದು ಐವತ್ತು ವರುಷದ ಮುದುಕಿಗೂ ಅನ್ನಿಸ ಲಾರದು. ನಾನಂತೂ ತರುಣಿ....ಅಲ್ಲ....ಚಿಕ್ಕ ಮಗು. ಹೇಗೆ ಅದನ್ನು ಅಸತ್ಯವೆಂದು ಭಾವಿಸಬೇಕು....?

ಗಂಡಸು ಎಷ್ಟಾದರೂ ಸ್ವಾರ್ಥಿಯಲ್ಲವೆ...? ಸ್ವಾರ್ಥಸಾಧಿಸಬೇಕಾ ದರೆ ನಟನೆ ಮಾಡಲೇಬೇಕು ಇಲ್ಲದಿದ್ದರೆ ಮೋಸ ಹೋಗುವವರೆಂದರೂ

ಹೇಗೆ...? ಸ್ಪಷ್ಟವಾಗಿ ಹೇಳಿ ಕರೆದರೆ ಅದಾವ ಸ್ತ್ರೀಯಾದರೂ ಗಂಡಸಿನ ನೆರಳಿನ ಹತ್ತಿರವಾದರೂ ಹೋಗಲು ಸಾಧ್ಯವಿದೆಯೇ?...

" ನಿರ್ಮಲಾ....ನೀನು ಎರಡು ದಿವಸಕ್ಕಾಗಿ ನನಗೆ ಬೇಕು " ಎಂದು ರಂಗ ಕರೆದಿದ್ದರೆ ಆವನ ಹತ್ತಿರ ನಾನು ಹೋಗಬಹುದಿತ್ತೇ...? ಅವನ ಈ ಮೋಸಗಾರಿಕೆ ಪೂರ್ವ ಪರಿಚಿತವಾಗಿದ್ದರೆ ಅವರ ಮನೆಯ ಹತ್ತಿರಕ್ಕಾದರೂ ನಾನು ಹೋಗಬಹುದಿತ್ತೆ ?

ನಾನು ಅವರ ಮನೆಗೆ ಮೊದಲೇ ಹೋಗಬಾರದಿತ್ತು. ಆದರೆ ಅವನ ತಾಯಿ ತುಂಬಾ ಕರೆಯುತ್ತಿದ್ದರು. ಅಲ್ಲದೆ ಮನೆಯಲ್ಲಿಯ ಕಾಟಕ್ಕೆ ಅಲ್ಲಿ ಪರಿಹಾರ ದೊರೆಯುತ್ತಿತ್ತು. ಅಲ್ಲದೆ ಅವರು ಕರೆಯುವದು ನಿಷ್ಕಪಟನೆ ಯಿಂದ. ಅವರೂ ನನ್ನ ತಾಯಿಯಂತೆ ಅಲ್ಲವೆ....? ತಾಯಿಯ ಹೃದಯ ಅವರಲ್ಲಿತ್ತು. ತಾಯಿಯ ಹೃದಯದಿಂದ ಅವರು ಕರೆಯುತ್ತಿದ್ದರು. ಹೇಳುತ್ತಿದ್ದರು—

" ನಿರ್ಮಲಾ...ಇದೆಲ್ಲ ತೊಂದರೆ ಎರಡು ದಿನದ್ದು. ಇಂದಿಲ್ಲ ನಾಳೆ ನೀನು ನಿನ್ನ ಗಂಡನ ಮನೆಗೆ ಸೇರುವವಳು....ಗಂಡನ ಮನೆಯಲ್ಲಿ ನೀನೇ ರಾಣಿ..." ಎಂದು ಅವರು ಹೇಳಿದಾಗ ನನಗೆ ರಂಗನ ಮಾತುಗಳೂ ನೆನ ಹಿಗೆ ಬರುತ್ತಿದ್ದವು.

" ನಿರ್ಮಲಾ.... ನನ್ನ ಮನೆಯಲ್ಲಿ ನೀನೇ ರಾಣಿ... ನೀನು ಏನು ಮಾಡಿದರೂ ಯಾರೂ ಕೇಳುವದಿಲ್ಲ....ನಾನು ಕೂಡ ನಿನ್ನ ದಾಸ—

ಆಗ್ಗೆ ಅನ್ನಿಸುತ್ತಿತ್ತು ಈ ಮನೆಗೆ- ರಂಗನ ಮನೆಗೆ - ನಾನೇ ರಾಣಿ ರಂಗನ ತಾಯಿ ಅತ್ಯಂತ ಮಮತೆಯವರು, ಅದರಲ್ಲಿ ನನ್ನನ್ನು ಕಂಡರೆ ಅವರಿಗೆ ತುಂಬ ಪ್ರೀತಿ— ಅಲ್ಲದೆ ಮನೆಯಲ್ಲಿ ಮಕ್ಕಳಿಲ್ಲ. ರಂಗನ ಬೆನ್ನು ಮೇಲೆ ಹುಟ್ಟಿದ ಹೆಣ್ಣು ಕೂಸು ಎಂಟು, ಹತ್ತು ವರುಷ ತಾಯಿಯನ್ನು ಆಡಿಸಿ ಹೋಗಿಬಿಟ್ಟಿತು. ಕಳಿಸಿ ಅವರು ಅದೇ ಮಗಳ ಪ್ರೇಮದಿಂದ ನನ್ನನ್ನು ಹತ್ತಿರ ಕರೆಯುತ್ತಿದ್ದರು. ನಾನು ಇವರ ಮನೆಗೆ ಇವರ ಸೊಸೆಯಾಗಿ ಬಂದರೆ....ನಾನೇ ರಾಣಿಯಾಗುವದು ಸತ್ಯ...ನಿಜ....ರಂಗ ನನ್ನನ್ನು ಪ್ರೀತಿಸುವ, ರಂಗನ ತಾಯಿ ನನ್ನನ್ನು ಪ್ರೀತಿಸುವಳು....ರಂಗನ

ತಂದೆ....ಅವರಿಗೇನು...? ಸೊಸೆಯಾಗಿ ಬಂದ ನನ್ನನ್ನು ಅವರಾದರೂ ದೂಡುವರೇಕೆ...? ಅವರಿಗೆ ಮನೆಗಿಂತ ಹಣ ಗಳಿಸುವದರಲ್ಲಿಯೇ ಹೆಚ್ಚು ವಿಚಾರ. ಆದರೆ ಅವರು ಗಳಿಸುವದಾದರೂ ನಮಗಾಗಿ...ಅಲ್ಲವೆ....?

ನನ್ನ ಮನೆಯಲ್ಲಿ ಕ್ಷಣವು ಯುಗವಾಗುತ್ತಿತ್ತು. ಆದರೆ ರಂಗನ ಮನೆಯಲ್ಲಿ ಯುಗವು ಕ್ಷಣವಾಗುತ್ತಿತು ರಂಗನ ತಾಯಿಕೂಡ ಅನೇಕಸಲ ಮನೆಯನ್ನು ನನಗೊಪ್ಪಿಸಿ ಪುರಾಣಕ್ಕೆ, ಅಥವಾ ದೇವರ ಗುಡಿಗೆ ಹೋಗುತ್ತಿದ್ದರು. ಅವರು ಹೋಗುವ ವೇಳೆಯೇ ರಂಗನು ಬರುವ ವೇಳೆ. ರಂಗನು ಬಂದರೆ ಸಾವಿರ ಯುಗಗಳು ಕೂಡ ಒಂದು ಕ್ಷಣ. ಅದರಲ್ಲಿ ರಂಗ ಕೂಡ-

" ಏನು ಇಷ್ಟು ತೀವ್ರವೇ ಮನೆಯ ಯಜಮಾನಳಾಗಿ ಬಿಟ್ಟೆಯಾ....? ಎಂದರೆ ನನ್ನ ವಾದ ಅಂತರಿಕ್ಷದಲ್ಲಿ, ಬೆರಳು ಸ್ವರ್ಗದಲ್ಲಿ ಅಂತಹ ಸನ್ನಿವೇಶ ನಗಗೂ ಪ್ರೀಯವೆನ್ನಿಸುತ್ತಿತ್ತು. ರಂಗನ ತಾಯಿ ನಿತ್ಯ ಪುರಾಣಕ್ಕೇಕೆ ಹೋಗುವದಿಲ್ಲ! ನಿತ್ಯವೂ ದೇವರಿಗೇಕೆ ಆವರು ಹೋಗುವದಿಲ್ಲ? ಎನ್ನಿಸುತ್ತಿತ್ತು. ಪಾಲಿಗೆ ಬಂದದ್ದು ಪಂಚಾಮೃತವೆಂದು ಸಿಕ್ಕ ಪಂಚಾಮೃತವನ್ನು ಸಾವಿರ ವರುಷ ಹಸಿದ ರಾಕ್ಷಸದಂತೆ ಹೀರಿಸಿಬಿಡುತ್ತಿದ್ದೆ. ರಂಗನಂತೂ ನನ್ನನ್ನು ನಗಿಸುತ್ತಿದ್ದ ನಲಿಸುತ್ತಿದ್ದ........ ಛಾಸಿ ಮಾಡುತ್ತಿದ್ದ. ಆದರೆ ಎಲ್ಲವೂ ಆನಂದಮಯ....ಆ ಆನಂದದಲ್ಲಿ ಎಲ್ಲವನ್ನೂ ಮರೆತು ಯಾವುದರ ವಿಚಾರವಿಲ್ಲದೆ ಮುಂದೆ ಸಾಗುತ್ತಿದ್ದೆವು.

ಆದುವೇ ಆಯುಷ್ಯದ ಅಂತ್ಯದವರೆಗೆ ದೊರೆತಿದ್ದರೆ....? ದೊರೆತಿದ್ದರೆ....?

ದೊರೆತಿದ್ದರೆ....?

ದೊರೆತಿದ್ದರೆ! ಎಂದು ದೊರೆಯುವಾಗ ಕೇಳುವಂತಹ ಅಸಹನೀಯ ದುಃಖ ಇನ್ನಾವದೂ ಇಲ್ಲ.

ಎಂದೋ ನಡೆದ ಘಟನೆಯನ್ನು ಇಂದು ನೆನಿಸಿ ನಾನು ದುಃಖಿಸುತ್ತಿರುವೆ. ದುಃಖಿಸಬಾರದು ನಿಜ. ಆದರೆ ಅದು ಒಂದು ಸಾಮಾನ್ಯ, ಘಟನೆಯಲ್ಲ. ಅದು ವಿಧಿ ನನಗಿತ್ತ ಕ್ರೂರವಾದ ಅಘಾತ, ನಾನು ಅಂತಹ

ಅದಾವ ಅಪರಾಧವನ್ನು ಮಾಡಿದ್ದೆನೆಂದು ವಿಧಿ ದೇವ ನನಗೆ ಅಂತಹ ಶಿಕ್ಷೆ ವಿಧಿಸಿದ....?

ಹೆಣ್ಣಾಗಿ ಹುಟ್ಟಿ, ಗಂಡನಿಗಾಗಿ ಆಶೆ ಮಾಡುವದು ಅಪರಾಧವೆ....? ಹೆಣ್ಣಿನ ಜೀವನ ಗಂಡನಿಲ್ಲದೆ ಮುಂದುವರೆಯಲು ಸಾಧ್ಯವೆ....? ಹೆಣ್ಣು ಗಂಡಿನ ಸ್ನೇಹವು ನಿಸರ್ಗನಿರ್ಮಿತ ಅಥವಾ ದೇವ ನಿರ್ಮಿತ ಅಲ್ಲವೆ...? ಗಂಡಿನ ಸ್ನೇಹಕ್ಕಾಗಿ ಹೆಣ್ಣು ಆಶೆಪಡುವದು ಅಪರಾಧವೆ...?

ಅಹುದು, ಅಪರಾಧವದು. ವಿವಾಹದ ಪೂರ್ವದ ಸ್ನೇಹ ಅಪರಾಧ ವಷ್ಟೇ ಅಲ್ಲ, ಪಾಪ.

ಆದರೆ ಇಂತಹ ಉದಾಹರಣೆಗಳು ಸಾವಿರಾರು ನಡೆದು ಹೋಗಿವೆ. ನಡೆಯುತ್ತವೆ. ಆದರೆ ಯಾವುದೂ ಬಹಿರಂಗವಾಗಿ ಅಲ್ಲ, ಎಲ್ಲವೂ ತೆರ ದೆಯ ಮರೆಯಲ್ಲಿ. ಎಲ್ಲಿ ಗಂಡು-ಹೆಣ್ಣು ಎಂಬ ಜೀವಿಗಳಿವೆಯೋ ಅಲ್ಲಿ ಅಲ್ಲಿ ಇದು ನಡೆಯುತ್ತಿದೆ. ನಡೆದೇ ನಡೆಯುತ್ತವೆ. ' ಇಲ್ಲ ' ಎಂದು ಹೇಳುವ ಧೈರ್ಯವಾರಿಗೆ....?

ಅದಕ್ಕೆ ನಾನೊಂದು ಉದಾಹರಣೆ. ನನ್ನಂತಹ ವಿಚಾರದ, ನನ್ನಂತಹ ಮನಃಪ್ರವೃತ್ತಿಯ ಜನರು ಜಗದಲ್ಲಿ ಇಲ್ಲ, ಎಂದು ಹೇಳಲು ಸಾಧ್ಯವೆ....?

ಮನುಷ್ಯ ಬದುಕುವದಕ್ಕೆ ಮೂಲ ಆಶೆ-ಆಶೆಯಿಲ್ಲದವ ಬದುಕುವದು ಅಸಾಧ್ಯ.

ಆಶೆಯಿಲ್ಲದೆ ಬದುಕುವವ ಮನುಷ್ಯನಲ್ಲ. ಮಹಾತ್ಮ.

ಆಶೆಯಿಂದ ಆಶೆಗಾಗಿ ಬದುಕುವ ಮನುಷ್ಯ ಆಶೆ ಸುಖಕ್ಕಾಗಿ ಆನಂದ ಕ್ಕಾಗಿ, ತನ್ನ ಆನಂದಕ್ಕಾಗಿ...ತನ್ನ ಸುಖಕ್ಕಾಗಿ.

ಸುಖದ ಆಶೆ ಇಲ್ಲದವರಾರು...?

ಮನೆ-ಮಾರು; ಗಂಡ-ಹೆಂಡತಿ; ಮಕ್ಕಳುಮರಿ; ನೆಂಟರು; ಇಷ್ಟರು ಹಣ ಎಲ್ಲವೂ ಸುಖದ ನೆರಳಿಗೆಂದು ಬಾಳಿನ ಹಂದರಕ್ಕೆ ಹಬ್ಬಿಸಿದ ಬಳ್ಳಿ.

ನಾನೂ ಸುಖದ ಆಶೆಗೆಂದು ನನ್ನ ಬಾಳಿನ ಹಂದರಕ್ಕೆ ರಂಗನ ಬಳ್ಳಿ ಯನ್ನು ಹಬ್ಬಿಸುವ ಇಚ್ಛೆ ಮಾಡಿದೆ. ಆದರೆ ನಾನೇ ರಂಗನ ಹಂದರಕ್ಕೆ

ಟಳ್ಳಿಯಾಗಿ ಸುತ್ತಿಕೊಂಡೆ, ಅವನಿಗೆ ನೆರಳು ಕೊಡುವ ಯತ್ನ ಮಾಡಿದೆ. ನೆರಳೂ ಮಾಡಿದೆ.

ಆದರೆ ಆತ ಕ್ರೂರ. ನನ್ನನ್ನು ಬೇರು ಸಹಿತ ಕಿತ್ತೆಸೆದ.

ಏಕೆ....?

ಅದಕ್ಕೆ ಉತ್ತರಿಸುವರಾರು...? ರಂಗನಿಂದ ಕೂಡ ಅದಕ್ಕೆ ಉತ್ತರ ದೊರೆಯಲು ಸಾಧ್ಯವಿಲ್ಲ. ಬಾಳುವದಕ್ಕೆ ಮನೆಬೇಕು. ಸಂಸಾರ ಸಾಗಿಸಲು ಹೆಂಡತಿಗೆ ಗಂಡ ಬೇಕು. ಗಂಡನಿಗೆ ಹೆಂಡತಿ ಬೇಕು. ರಂಗ ನನಗೆ ಪತಿಯಾಗಬೇಕಿತ್ತು. ನಾನು ರಂಗನ ಪತ್ನಿಯಾಗುವವಳಿದ್ದೆ, ಆದರೆ ರಂಗ ತನಗೆ ನಾನು ಬೇಡವೆಂದು ಹೇಳಲಿಲ್ಲ.

ಹಾಗೆ ಹೇಳಿದ್ದರೆ ನಾನು ಕೇಳಬಹುದಿತ್ತು 'ಏಕೆ ?' ಎಂದು.

ಅದಕ್ಕೆ ಅವನಿಂದ ದೊರಕುವ ಉತ್ತರ.......?

ಉತ್ತರಿಸುವ ಪ್ರಶ್ನೆ ಅದು ಅಲ್ಲ. ಏಕೆಂದರೆ ಅವನು ಉತ್ತರಿಸದಷ್ಟು ಬಲಿಷ್ಟವಾಗಿತ್ತು ನಮ್ಮ ಸಮ್ಮಂಧ. ನಾನು ಎದುರು ನಿಂತು ಕೇಳಿದ್ದರೆ ಅವನಿಗೆ "ನನಗೇನೂ ಅರಿಯದು" ಎನ್ನುವ ಧೈರ್ಯವಾಗುತ್ತಿರಲಿಲ್ಲ. ನನ್ನ ದೇಹದ ಪ್ರತಿಯೊಂದು ರೋಮಕ್ಕೂ ಅವನ ಪರಿಚಯವುಂಟು. ಪ್ರತಿಯೊಂದು ರೋಮದ ಪರಿಚಯವೂ ಅವನಿಗುಂಟು.

ಅವನು ಆಡಿದ ಆಟ—

ದೀಪಾವಳಿಯ ದಿನ ಆತ ಸೇಂಟಿನ ಬಾಟಲಿಯನ್ನೇ ನನ್ನ ಮೇಲೆಸೆದಾಗ ಅದು ಮನೆಯನ್ನೆಲ್ಲ ತುಂಬಿದಾಗ ಆತ " ನಿಮ್ಮಿ ಇದು ನಮ್ಮ ಪ್ರೇಮ ಸುಗಂಧ. ಹೇಗೆ ಮನೆಯನ್ನೆಲ್ಲ ವ್ಯಾಪಿಸಿದೆ ನೋಡು....ಇಂದು ಮನೆಯನ್ನು ತುಂಬಿದ ಪ್ರೇಮ ಸುಗಂಧ ನಾಳೆ ಜಗವನ್ನು ತುಂಬುವದು " ಎಂದು ಹೇಳಿದ್ದ.

ಪ್ರೇಮ ಸುಗಂಧವು ಜಗವನ್ನು ತುಂಬಲಿಲ್ಲ. ಆದರೆ ಅಪಖ್ಯಾತಿಯ ದುರ್ಗಂಧ ಊರಲ್ಲೆಲ್ಲ ಹರಡಿತು. ಮನೆಮನೆಗೆ ನುಗ್ಗಿತು ಜಗವನ್ನು ತುಂಬಿತು.

ಈ ನನ್ನ ಅಪಖ್ಯಾತಿಗೆ ಕಾರಣರಾರು...?

ರಂಗನೆ....? ನಾನೆ...? ನನ್ನ ತಂದೆತಾಯಿಗಳೆ...?

ಯಾರೂ ಅಲ್ಲ. ರಂಗನಿಗೆ ನಾನು ಬೇಕಿದ್ದೆ ಅಲ್ಲದೆ ಅಪಖ್ಯಾತಿಯ ಮೂಲ ಅವನ ಕೃತಿಯಾಗಿತ್ತು.

ನನಗೆ ರಂಗ ಬೇಕಿದ್ದ ಅವನು ನನ್ನ ಪತಿಯಾಗುವವನಿದ್ದ ಅವನಿಂದ ಹುಟ್ಟಿದ ನನ್ನ ಮಗು ನಮ್ಮ ಮನೆಯ ಬಾಳಿನ ಮರವಾಗಿ ಬಳಿಯಾಗುವದಿತ್ತು.

ತಂದೆ — ತಾಯಿಗೆ....?

ನಾನು ಅವರ ಹೆತ್ತ ಕರಳು. ಅವರಿಗೆ ನನ್ನನ್ನು ಅಪಖ್ಯಾತಿಗೀಡು ಮಾಡಿ ದೊರಕಿಸಬೇಕಾಗಿತ್ತಾದರೂ ಏನು..............? ನನ್ನ ಲಗ್ನ ಮಾಡಿಕೊಟ್ಟು ನನ್ನ ಸುಖಮಯ ಬಾಳನ್ನು ನೋಡುವದೂ ಅವರಿಗೆ ಇಷ್ಟವಾಗಿತ್ತು. ಅಂತೆಯೇ ಅಂತಹ ಅವಸ್ಥೆಯಲ್ಲಿ ಕೂಡ ಅವರು ರಂಗನ ಮನೆಗೆ ರಂಗನ ತಂದೆಯ ಎದುರು ಪದರು ಪಸರಿಸಲಿಲ್ಲವೆ...."

ರಂಗನ ತಂದೆ ಅದಕ್ಕೆ ಕೊಟ್ಟ ಉತ್ತರ........

"ಎಲ್ಲಿಯೋ ಬಸಿರಾಗಿ ಬಂದ ಮಗಳನ್ನು ನನ್ನ ಮಗನ ಕೊರಳಿಗೆ ಕಟ್ಟಿ ನನ್ನ ಮಗನ ಆಯುಷ್ಯವನ್ನು ಹಾಳುಮಾಡಬೇಕೆಂದಿರುವಿರಾ....?.... ನನಗೆಲ್ಲ ಗೊತ್ತಿದೆ ನಿಮ್ಮ ಆಟ........ನಿಮ್ಮ ಕಣ್ಣು ನನ್ನ ಹಣದ ಮೇಲಿದೆ.... ..............." ಎಂದು ಕುಬೇರನ ದತ್ತಕ ಪುತ್ರನಂತೆ ಮಾತನಾಡಿದ.

ರಂಗನ ತಾಯಿ...?

ಅವಳು ಮಾತ್ರ ಕಣ್ಣೀರಿಟ್ಟಿರಬಹುದು. ಅವಳು ಎಷ್ಟಾದರೂ ಹೆಂಗಸಲ್ಲವೆ....? ತಮ್ಮ ಮಗನ ಬಗ್ಗೆ ಅಭಿಮಾನವಿದ್ದರೂ ನಾನು ನಿಷ್ಪಾಪಿ ಎನ್ನುವದೂ ಅವರಿಗೆ ಗೊತ್ತಿರಲೇಬೇಕು. ಅವರು ಮಾತ್ರ ನನಗಾಗಿ ಕಣ್ಣೀರಿಟ್ಟಿರಬಹುದು. ಆದರೇನು ?

ಹೆಂಗಸಿನ ಕಣ್ಣೀರು. ಅವಕ್ಕೆ ಬೆಲೆಯಿಲ್ಲ. ಸ್ವಾರ್ಥಿ ಗಂಡಸರ ರಾಜ್ಯದಲ್ಲಿ ಹೆಂಗಸಿನ ಕಣ್ಣೀರಿಗೆ ಬೆಲೆಯಿಲ್ಲ. ಬೆಲೆಯಿದ್ದರೆ ನನ್ನ ಕಣ್ಣೀರು ರಂಗನನ್ನು ಎಳೆದು ತರುತ್ತಿದ್ದವು.

ರಂಗ ಬರಲಿಲ್ಲ.

ಇನ್ನು ಬರುವದೂ ಇಲ್ಲ.

ಏಕೆ ಬರಬೇಕು ? ಅವನಿಗೆ ಬೇಕಾಗಿದೆಯಾದರೂ ಏನು ? ಗಂಡಸಿಗೆ ಬೇಕಾದದು ಹೆಣ್ಣಿನ ದೇಹ. ಹೆಂಗಸಲ್ಲ. ಅವನು ಧನವಂತರ ಮಗ. ಅವನಿಗಾಗಿ ಸಾವಿರಾರು ಹೆಣ್ಣಿನ ತಂದೆಯರು ಅವನ ತಂದೆಯ ಎದುರು ಪದ ರೊಡ್ಡಿ ನಿಲ್ಲುತ್ತಾರೆ. ಸಾವಿರಾರು ತಂದೆಯರ ಮಕ್ಕಳು ರಂಗನೆದುರು ಮೂಕ ಕುರಿಯಂತೆ ತಲೆತಗ್ಗಿಸಿ ನಿಲ್ಲುತ್ತಾರೆ. ರಂಗ ತೋಳನಾಗಿ ತೋಳನಂತೆ ತನಗಿಷ್ಟ ಬಂದುದನ್ನು ಎತ್ತಿಕೊಳ್ಳಬಹುದು.

ಅವಳನ್ನು ರಂಗ ಬಿಟ್ಟರೆ........?

ಅದರ ವಿಚಾರ ಈಗಲೇ ನಾನು ಮಾಡಿ ನನ್ನಂತಹ ನನ್ನ ತಂಗಿಯೊಬ್ಬಳಿಗೆ ಅಪಶಕುನ ಮಾಡಲಾರೆ .. ಛೀ- ಅಂತಹ ವಿಚಾರವೇ ಬೇಡ.

ಪತಿ ಬಿಟ್ಟ ಸತಿ ಜೀವನ ಅತ್ಯಂತ ಕಷ್ಟ. ಅವಳ ಬಾಳು ಬಾಳಲ್ಲ. ಅವಳಿಗೆ ಬಾಳು ಕಣ್ಣೀರು. ಕಣ್ಣೀರಲ್ಲದೆ ಇನ್ನೇನೂ ಇಲ್ಲ. ಅವಳು ತಿನ್ನುವದು ಕಣ್ಣೀರು. ಕುಡಿಯುವದು ಕಣ್ಣೀರು. ಹೊದೆಯುವದು ಕಣ್ಣೀರಿನ ಬಟ್ಟೆ, ಉಡುವ ಸೀರೆ ಕಣ್ಣೀರಿನಿಂದ ತೊಯ್ದುದು, ಅವಳ ಕುಪ್ಪಸದ ಮೇಲೆ ಕಣ್ಣೀರಿನ ಅಚ್ಚು, ಅವಳು ನಡೆಯುವ ದಾರಿ ಕಣ್ಣೀರಿನಿಂದ ಮಾಡಿದ್ದು. ಮೇಲೆ ಕಣ್ಣೀರು ತುಂಬಿಕೊಂಡ ಆಗಸ ಕೆಳಗಿನ ನೆಲ ಕಣ್ಣೀರಿನ ಸಮುದ್ರ....

ಬೇಡ... ಬೇಡ.... ಅಂತಹ ಜೀವನ ಯಾರಿಗೂ ಬೇಡ........ಜಗತ್ತಿನ ಯಾವ ನನ್ನ ಅಕ್ಕ-ತಂಗಿಯರಿಗೂ ಬೇಡ. ಅದಕ್ಕಿಂತ ಮರಣ ಲೇಸು. ಈಗ ನನಗೊದಗಿದ ಅವಸ್ಥೆ ಸಾಕು. ಜಗತ್ತಿನ ದುಃಖ ನನ್ನಿಂದ ತಡೆಯಲು ಸಾಧ್ಯವಿಲ್ಲ. ಕೊನೆಗೆ ರಂಗನಿಂದಾದರೂ ಇಂತಹ ಅವಸ್ಥೆ ಇನ್ನಾರಿಗೂ ಬಾರದಿರಲಿ. ಎಲ್ಲವೂ ನನ್ನೊಬ್ಬಳ ಪಾಲಿಗೆ ಇರಲಿ.

ನಾನು ರಂಗನಿಂದ ದುಃಖಿಯಾದೆ. ಅದು ನನ್ನ ಪೂರ್ವ ಜನ್ಮದ ಪಾಪವಿದ್ದಿರಬಹುದು. ನಾನು ಹಿಂದಿನ ಜನ್ಮದಲ್ಲಿ ಯಾರಿಗಾದರೂ ಅನ್ಯಾಯ ಮಾಡಿರಬಹುದು. ಅದರ ಫಲ ನನಗೆ ದೊರೆತಿತು. ಆದರಿಂದ ನನಗೆ ದುಃಖ ಕಷ್ಟ. ಆದರೂ ನನ್ನ ಪೂರ್ವ ಜನ್ಮದ ಪುಣ್ಯದಿಂದ ಕುಲ ಕರ್ಣಿಯಂತಹ ಮಹಾನುಭಾವರ ಆಶ್ರಯ ದೊರೆತಿತು.

ಅವರು ನಿಜಕ್ಕೂ ಮಹಾನುಭಾವರು. ತಮ್ಮಿಂದ ಯಾರಿಗೂ ಕೆಡ ಕಾಗದಂತೆ ಆಚರಿಸುವವರು, ಯಾರೊಬ್ಬರ ಕೆಡಕನ್ನೂ ಅವರಿಗೆ ಕಣ್ಣಿನಿಂದ ನೋಡುವದಾಗದು. ಅವರು ಹೇಳುತ್ತಾರೆ.

" ನಾವು ಬದುಕಿರುವ ವರೆಗೆ ನಮ್ಮಿಂದ ನೆರೆ ಹೊರೆಯುವರಿಗೆ ಒಳ್ಳೆಯ ದನ್ನು ಮಾಡುವದಾಗದಿದ್ದರೂ ಕೇಡಾಗದಂತೆ ನಡೆದುಕೊಳ್ಳಬೇಕಲ್ಲವೇ ? " ಎಂದು.

' ಇನ್ನೊಬ್ಬರಿಗೆ ಕೆಡಕಾಗದಂತೆ ನಡೆದುಕೊಳ್ಳುವದು. '

ಇನ್ನೊಬ್ಬರಿಗೆ ಕೆಡಕಾಗದಂತೆ ನಡೆದುಕೊಳ್ಳುವದೆಂದರೆ ಒಳ್ಳೆಯುದಾಗು ವಂತೆ ನಡೆದ ಹಾಗಲ್ಲವೆ...? ಇನ್ನೊಬ್ಬರಿಗೆ ಕೆಡಕು ಬಯಸದವ ಬಯಸು ವದು ಒಳ್ಳೆಯದನ್ನೆ ಅಲ್ಲವೇ....?

ಅವರು ಹೇಳುವ ರೀತಿಯೇ ಬೇರೆ. ತಾವು ಏನನ್ನಾದರೂ ಮಾಡಿರು ವೆವು ಎಂದು ಹೇಳಿಕೊಳ್ಳುವದನ್ನೇ ಅವರು ಅರಿಯರು. ಅಂತಹ ವೇಳೆ ಒದಗಿದಾಗ ಅವರು ಕೇಳುತ್ತಾರೆ " ಮಾಡುವವರು ಯಾರು ? " ಎಂದು.

ಅವರ ವಿಚಾರದಿಂದ ಮುಂದೆ ನಾಗಿದಾಗ ನನಗೂ ಅವರ ಮಾತು ನಿಜವೆನ್ನಿಸುತ್ತದೆ. " ಮಾಡುವವರು ಯಾರು " ಯಾರಿಗೆ ಯಾರಿಂ ದಲೂ ಏನನ್ನೂ ಮಾಡಲು ಸಾಧ್ಯವಿಲ್ಲ. ನನ್ನ ಮನದಲ್ಲಿ ಕೂಡ ಸಾವಿರ ಮಾತುಗಳಿಗಾಗಿ ಹಂಬಲವಿದೆ. ಆಶೆಯಿದೆ. ಆದರೆ ಒಂದನ್ನು ಮಾಡಲು ಕೂಡ ನಾನು ಅಸಮರ್ಥಳು.

ರಂಗನನ್ನೇ ನಾನು ವಿವಾಹ ಮಾಡಿಕೊಳ್ಳಲು ಇಚ್ಛಿಸಿದೆ. ಆದರೆ ಆದುದೇನು....?

ಏನಾದರೂ ಆಗಲಿ ಈ ಹಾಳು ಮುಖವನ್ನು ಜಗತ್ತಿಗೆ ತೋರಿಸುವದು ಬೇಡ. ಎಂದು ಕತ್ತಲೆಯಲ್ಲಿ ಕತ್ತಲೆಯೊಡನೆ ಲೀನಳಾಗಲು ನಡೆದೆ. ಆಗಲೂ ನಾನು ಸಾಯಲಿಲ್ಲ. ಬದುಕಿದೆ!

ಬದುಕಬೇಕೆಂದಾಗ ಸತ್ತು ಮಣ್ಣಾಗಿದ್ದೆ. ಮಣ್ಣಾಗಬೇಕೆಂದಾಗ ಮನುಷ್ಯಳಾಗ ಹೊರಟಿರುವೆ. ಎಲ್ಲವೂ ವಿಚಿತ್ರ.

ವಿಚಿತ್ರವಲ್ಲ, ದೈವಲೀಲೆ.

ದೈವಲೀಲೆ...!

ಕುಲಕರ್ಣಿಯವರು ಹೇಳುವಂತೆ ಎಲ್ಲವೂ " ಪೂರ್ವ ಜನ್ಮದ ಕರ್ಮ "

ಪೂರ್ವ ಜನ್ಮದ ಕರ್ಮವೂ ಆಹುದು. ಈ ಜನ್ಮದ ದುಷ್ಕರ್ಮವೂ ಆಹುದು.

ದುಷ್ಕರ್ಮಕ್ಕೆ ಶಿಕ್ಷೆಯಾಗಬೇಕು. ಅದಕ್ಕೆ ನಾನು ವಿರೋಧಿಸುವದಿಲ್ಲ ಆದರೆ ಪೂರ್ವ ಜನ್ಮದ ಕರ್ಮಕ್ಕೆ ಈ ಜನ್ಮದಲ್ಲಿ ಏಕೆ ಶಿಕ್ಷೆ....?

ಪೂರ್ವ ಜನ್ಮದಲ್ಲಿ ನಾವು ಏನಿದ್ದೆವೆಂಬುದು ನಮಗರಿಯದ್ದು. ಪೂರ್ವ ಜನ್ಮದಲ್ಲಿ ನಾವು ಮಾಡಿದ ಅಪರಾಧದ ಕಲ್ಪನೆ ಕೂಡ ನಮಗಿಲ್ಲ. ಆದರೆ ಶಿಕ್ಷೆಮಾತ್ರ ನಿಶ್ಚಿತ.

ಏಕೆ ?

ಅಪರಾಧಿಗೆ ಶಿಕ್ಷೆ ಕೊಡುವ ಪೂರ್ವದಲ್ಲಿ ಅವನು ಮಾಡಿದ ಅಪರಾಧ ವನ್ನು ಅವನೆದುರು ಓದಿ ಹೇಳಲಾಗುತ್ತಿದೆ. ನಂತರ ಅವನಿಗೆ ಶಿಕ್ಷೆ ವಿಧಿಸ ಲಾಗುತ್ತದೆ.

ಆದರೆ ದೇವರ ರಾಜ್ಯದಲ್ಲಿ ಅಪರಾಧದ ವರದಿಯಂತೂ ಇಲ್ಲವೇ ಇಲ್ಲ. ಶಿಕ್ಷೆಮಾತ್ರ ನಿಶ್ಚಿತ. ಏಕೆ ಶಿಕ್ಷೆ? ಎಂದು ಕೇಳಿದರೆ ಅದಕ್ಕೆ ಉತ್ತರ—

" ನಿನ್ನ ಪೂರ್ವಜನ್ಮದ ಕರ್ಮ "

ಇದು ನ್ಯಾಯವಲ್ಲ ಅನ್ಯಾಯ.

ಇಂದಿನ ಅಪರಾಧಕ್ಕೆ ಈ ದಿನವೇ ಶಿಕ್ಷೆಯಾಗಲಿ. ಶಿಕ್ಷೆಯಾಗಬೇಕು. ಆದರೆ ಅರಿಯದ ಎಂದೂಕೇಳದ ಏನೂ ಗೊತ್ತಿರದ ಅಪರಾಧಕ್ಕೆ ಶಿಕ್ಷೆ

ಎಂದರೆ ಅನ್ಯಾಯುವಲ್ಲವೆ....? ದೇವನೇ ಮನುಷ್ಯನಾಗಿ ವಿಚಾರಿಸಿದರೆ ಇದು ಅವನಿಗೆ ಅನ್ಯಾಯುವೆನ್ನಿಸಬಹುದು.

ಆದೇಕೆ, ಅನ್ಯಾಯುವೆನಿಸುತ್ತದೆ.

ಆದರೆ ದೇವರು ಮನುಷ್ಯನಾಗುವದಿಲ್ಲ. ಆದುವೇ ಮುಖ್ಯವಾದ ಕಷ್ಟ. ದೇವರು ಎಲ್ಲಿಯಾದರೂ ಎಲ್ಲವೂ ಕಾಣುವಂತೆ ಕುಳಿತುಕೊಂಡು ಎಲ್ಲರನ್ನೂ ನೋಡಿ ಒಳ್ಳೆಯದಕ್ಕೆ ಪುರಸ್ಕಾರ, ಕೆಟ್ಟದಕ್ಕೆ ಶಿಕ್ಷೆ ಮಾಡುತ್ತಾನಂತೆ !

ಕೆಡಕಿಗೆ ಶಿಕ್ಷೆ !

ಸಾಧ್ಯವಾದಷ್ಟು ಇದ್ದ ಜನ್ಮದಲ್ಲಿ, ಉಳಿದದ್ದನ್ನು ಮುಂದಿನ ಜನ್ಮಕ್ಕೆ. ಹಿಂದಿನ ಜನ್ಮದಲ್ಲಿ ಮಾಡಿದ ಅಪರಾಧದ ನೆನಹು ಕೊಟ್ಟು ಶಿಕ್ಷೆ ಮಾಡುವ ದಿದ್ದರೆ ಮಾಡಬೇಕು. ಹಾಗಾದರೆ ಇನ್ನೊಂದು ಸಲ ತಾವು ಇಂತಹ ಅಪ ರಾಧವನ್ನು ಮಾಡಬಾರದೆನ್ನುವ ಪ್ರವೃತ್ತಿ ಮನುಷ್ಯರಲ್ಲಿ- ನಮ್ಮಲ್ಲಿ- ಉದ್ಭ ವಿಸಬಹುದು.

ಆದರೆ ಮನುಷ್ಯರ ವಿಚಾರಗಳು ದೇವರ ಕಿವಿಯವರೆಗೆ ತಲಪುವದೇ ಇಲ್ಲ. ಅದು ಹೇಗೆ ದ್ರೌಪದಿಯ ಕೂಗು ಕೃಷ್ಣನಿಗೆ ಕೇಳಿಸಿತೊ ಯಾರು ಬಲ್ಲರು ? ನಾವು ನಿತ್ಯ ಜಗದ ಎದೆ ಬಿರಿಯುವಂತೆ ಕೂಗಿದರೂ ದೇವನಿಗೆ ಕೇಳಿಸದಾಗಿದೆ.

ಅಥವಾ ದೇವನೂ ವೃದ್ಧನಾಗಿ ಕಿವಿ ಕೇಳಿಸದಾಗಿರಬಹುದು. !

ಹುಚ್ಚಿ ನಾನು ! ದೇವನಿಗೆಲ್ಲಿಯಾದರೂ ವೃದ್ಧಾಪ್ಯ ಬರುವದೆ ...? ಅವನೇನು ನಮ್ಮಂತೆ ವ್ಯಕ್ತಿಯೆ...?

ಕುಲಕರ್ಣಿಯವರು ಹೇಳುತ್ತಾರೆ " ದೇವನು ವ್ಯಕ್ತಿಯೂ ಅಹುದು. ಶಕ್ತಿಯೂ ಅಹುದು. ಮನುಷ್ಯನಿಗೆ ಸಹಾಯದ ಆವಶ್ಯವೆನ್ನಿಸಿದಾಗ ಆತ ಮನುಷ್ಯನಾಗಿ ಸಹಾಯ ಮಾಡುತ್ತಾನೆ. ಇಲ್ಲದಾಗ ಶಕ್ತಿಯಾಗಿ ಅವನನ್ನು ಕಾಪಾಡುತ್ತಾನೆ. " ದೇವನು ಮನುಷ್ಯನಿಗಾಗಿ "ಎನ್ನುವದು ಮಾತ ನಿಶ್ಚಿತ. ತ್ರಿಕಾಲ ಸತ್ಯ"

'ದೇವನು ಮನುಷ್ಯನಿಗಾಗಿ' ಎನ್ನುವದು ಸತ್ಯವಿದ್ದರೆ ನನಗೇಕೆ ಸಕಾಲದಲ್ಲಿ ಸಹಾಯ ಸಲ್ಲಿಸಲಿಲ್ಲ ?

" ನನಗೇನೂ ಅರಿಯದು " ಎನ್ನುವ ರಂಗನ ಮುಖಕ್ಕೆ ದೇವ ಅಂದೇ ಆದೇಕೆ ಕೀಲಿಯನ್ನು ಹಾಕಲಿಲ್ಲ ?

ಆದಕ್ಕೆ ಕುಲಕರ್ಣಿಯವರು ಹೇಳುವದು " ಅಂದು ನನ್ನಲ್ಲಿ ದೇವ ನನ್ನು ಕರೆಯುವ ಶಕ್ತಿ ಇದ್ದಿರಲಿಲ್ಲ " ಎಂದು.

ಸಹಾಯ ಮಾಡುವದಕ್ಕೇ ದೇವನಿರುವಾಗ ಇನ್ನೊಬ್ಬರು ಕರೆಯುವ ದಾರಿಯನ್ನು ಕಾಯುವದೇಕೆ ? ರಂಗ ನನ್ನನ್ನು ದೂಡುವಾಗ ನನಗೆ ಸಹಾಯದ ಅವಶ್ಯಕತೆ ಇತ್ತು. ಸಹಾಯ ನಲ್ಲಿಸುವ ದೇವ ಅಗ್ಗೆ ಧಾವಿಸಬೇಕಿತ್ತು.

ಧಾವಿಸಲಿಲ್ಲ !

ಅಂತೆಯೇ ದೇವನ ಅಸ್ತಿತ್ವದಲ್ಲಿ ಅನೇಕ ಸಲ ನಂಬಿಗೆ ಹಾರಿ ಹೋಗುತ್ತದೆ.

"ಇದು ಸ್ವಾಭಾವಿಕ ಅಶಕ್ತ, ಸ್ವಾರ್ಥಿ ಹೃದಯ ಹಾಗೆ ನಂಬಿಗೆ ಕಳೆದುಕೊಳ್ಳುವದು ವ್ಯಕ್ತಿಯ ಸ್ವಾರ್ಥ ಸಾಧಿಸದಾದಾಗ ಆದರ ತಪ್ಪನ್ನು ಯಾರೊಬ್ಬರ ಮೇಲೆ ಹೊರಿಸಿ ಆದರಿಂದ ತಾನು ಸಮಾಧಾನ ಹೊಂದಲು ವ್ಯಕ್ತಿ, ಮನುಷ್ಯ ಯಾವಾಗಲೂ ತವಕಿಸುತ್ತಾನೆ ಅಂತೆಯೇ ಆತ 'ದೇವನಿಲ್ಲ, ಇದ್ದರೆ ಹೀಗಾಗುತ್ತಿರಲಿಲ್ಲ' ಎಂದು ಕೂಗುತ್ತಾನೆ. ಶಪಿಸುತ್ತಾನೆ" ಎಂದು ಕುಲಕರ್ಣಿಯವರು ಹೇಳುತ್ತಾರೆ.

ರಂಗ ನನ್ನನ್ನು ದೂಡಿದ. ಅದಕ್ಕಾಗಿ ನಾನು ದೇವರಲ್ಲಿ ನಂಬಿಗೆ ಕಳೆದುಕೊಳ್ಳ ಹೊರಟೆ. ಆದರೆ ಸಾವಿನ ದವಡೆಯಿಂದ ನನ್ನನ್ನು ಎಳೆತಂದು ಆಶ್ರಯಕೊಟ್ಟ ಕುಲಕರ್ಣಿಯವರು ದೊರೆತಾಗ ದೇವನ ಹಿರಿಮೆಯನ್ನು ಹೊಗಳಿದೆ.

ಮನುಷ್ಯ ಸ್ವಾರ್ಥಿಯೂ ಆಹುದು. ಅಶಕ್ತನೂ ಆಹುದು.

ಯಾವಾಗಲೂ ಜನ್ಮವಾದಂದಿನಿಂದ ದೇಹದ ಅಂತವಾಗುವ ಕ್ಷಣದವರೆಗೂ ಆತ 'ತಾನು' 'ತನಗೆ' ಎಂದು ಬದುಕುತ್ತಾನೆ. 'ತನಗೆ' ಎನ್ನು

ವದು ತಡೆದ ಕ್ಷಣ ಆತ ಮನುಷ್ಯನಾಗಿರುವದಿಲ್ಲ. ಸ್ವಾರ್ಥವೂ ಮನುಷ್ಯತ್ವದ ಒಂದು ತತ್ವವಿದ್ದಿರಬಹುದು.

ಆದರಂತೆ ಅಶಕ್ತತೆಯೂ ಮನುಷ್ಯತ್ವದ ಇನ್ನೊಂದು ತತ್ವ. ಏಕೆಂದರೆ ಮನುಷ್ಯನಿಂದ ಏನನ್ನೂ ಮಾಡಲು ಸಾಧ್ಯವಿಲ್ಲ. ಸ್ವಾರ್ಥದ ಅನಂತ ಆಗಸದೆಡೆಗೆ ಕೈಚಾಚಿದರೂ ಅದನ್ನು ಹಿಡಿದುಕೊಳ್ಳುವದಾಗುವದಿಲ್ಲ. ಅದಕ್ಕೆ ಕೂಗಾಡುತ್ತಾನೆ. ಕೂಗಾಡುವದು ಅಶಕ್ತತೆಯ ಪ್ರತೀಕ. ಅದು ಮನುಷ್ಯ ಮಾತ್ರರಲ್ಲಿ ಇದ್ದೇ ಇರುತ್ತದೆ.

ನಾನೂ ಮನುಷ್ಯಳು. ಅಂತೆಯೇ ಒಂದು ಸಲ ದೇವನನ್ನು ದೂಷಿಸಿದೆ. ಇನ್ನೊಂದು ಸಲ ಭಕ್ತಿಯಿಂದ ನಮಿಸಿದೆ.

ದೇವನನ್ನು ಕೋಪದಿಂದ ದೂಷಿಸುವಾಗ ಅಥವಾ ಭಕ್ತಿಯಿಂದ ಬಾಗುವಾಗಾಗಲಿ ಮನುಷ್ಯನ ಸ್ವಾರ್ಥವಿದ್ದೇ ಇರುತ್ತದೆ

ಒಮ್ಮೆ ಕಾರ್ಯ ಕೈಗೂಡಲಿಲ್ಲವೆಂದು.

ಇನ್ನೊಮ್ಮೆ ಕಾರ್ಯ ಕೈಗೂಡಿತೆಂದು.

ಎರಡರ ಹಿಂದಿನ ಭಾವ ಒಂದು.

ದೇವನಿಗಾಗಿ ಇದ್ದ ಭಾವನೆಯೇ ಮನುಷ್ಯನಿಗಾಗಿ ನಮ್ಮಲ್ಲಿ ಒಡೆಮೂಡುತ್ತವೆ.

ರಂಗನನ್ನು ದೂಷಿಸುವೆ, ದ್ವೇಷಿಸುವೆ, ಏಕೆಂದರೆ ಆತ ನನ್ನ ಸ್ವಾರ್ಥದ ಮೇಲೆ ಆಘಾತ ಮಾಡಿದ ಎಂದು. ರಂಗನೇ ನನ್ನ ಸ್ವಾರ್ಥದ ಬಳ್ಳಿಗೆ ಚಿಗುರೊಡೆಸಿದ್ದರೆ....? ಅಂದು ರಂಗ ನನ್ನ ಪ್ರಿಯಕರನಾಗುತ್ತಿದ್ದ. ನನ್ನ ಪತಿಯಾಗುತ್ತಿದ್ದ. ಅವನಿಗಾಗಿ ಇಂದಿದ್ದ ಭಾವನೆಗಳು ಎಂದೂ ಇರುತ್ತಿರಲಿಲ್ಲ.

ರಂಗ ತಾನಾಡಿದಂತೆಯೇ ನಡೆದುಕೊಂಡಿದ್ದರೆ.......?

ಅಂದು ರಂಗ ಅವನ ತಾಯಿ ಮನೆಯಲ್ಲಿಲ್ಲದಾಗ- ಮೊದಲು ಸಲ ನನ್ನ ಕೈಹಿಡಿದೆಳೆದಾಗ, ನಾನು ಹೆದರಿದ್ದೆ. ಹೆದರಿ ನಡುಗುತ್ತಿದ್ದೆ. ಆಗ್ಗೆ ರಂಗ—

" ಹೆಂಗಸರೆಂದರೆ ತೀರ ವಿಚಿತ್ರ. ನಾವು ದೂರಿದ್ದಾಗ ಕಣ್ಣಿನಲ್ಲಿ ಜೀವ ವನ್ನೇ ಒಂದುಗೂಡಿಸಿ ಎಳೆಯುವದು, ಹತ್ತಿರ ಬಂದಾಗ ಹೆದರಿ ಹಿಂದಾಗಿ ದೋಷಕ್ಕೆ ಪಾಪಕ್ಕೆ ಗಂಡಸನ್ನೇ ಮುಂದೆ ಮಾಡುವದು........ನಿಮ್ಮಾ....... ನಿಮ್ಮ ಕೈ ಹಿಡಿದುದು ಬಿಡಲಿಕ್ಕಲ್ಲ...ಜಗತ್ತಿನ ಯಾವ ಶಕ್ತಿಯೂ ನಮ್ಮನ್ನು ಅಗಲಿಸಲಾರದು......." ಎಂದೂ ಹೇಳಿದ್ದ. ಹೆದರಿಕೆಯಿಂದ ನಡಗುವ ನನ್ನ ದೇಹ ಸೂಕ್ಷ್ಮ ಹಿತಕಾರಕ ಸಂವೇದನೆಯಿಂದ ಜುಂಗಟ್ಟಿತು. ಅಂದು ರಂಗನ ಮಾತಿಗಿಂತ ಅವನ ಹಿಡಿತದಿಂದ ಮೈಮರೆತಿದ್ದೆ.

ಆದೇ ಮೈ ಮರೆವಿನಲ್ಲಿ ನನ್ನನ್ನು -ನನ್ನ ಭವಿಷ್ಯವನ್ನೂ-ಮರೆತಿದ್ದೆ. ಮೈ ಮರೆತಿದ್ದೆ. ಅದುವೇ ನನಗೆ ಮುಳುವಾಯಿತು.

ಆದರೆ ಆ ತಪ್ಪು ಯಾರದು ....?

ತಿರುತಿರುಗಿ ಅದೇ ಪ್ರಶ್ನೆ. ಅದಕ್ಕೆ ತಿರುತಿರುಗಿ ಅದೇ ಉತ್ತರ— ' ನನಗೆ ಶಿಕ್ಷೆಯಾಗಿದೆ ' ಅಂತೆಯೇ ನಾನು ಅಪರಾಧಿ.

ನಾನು ಅಪರಾಧಿ. ಅಹುದು ನಾನು ಅಪರಾಧಿ.

ದೈಹಿಕ ಸುಖದ ತಿರುಗಣಿ ಮಡುವಿನಲ್ಲಿ ಕೈ ಬಿಟ್ಟು ನಾನು ಸಿಲುಕಿದೆ. ಅದು ನನ್ನನ್ನು ಸುತ್ತಿ ಮುಳುಗಿಸಿತು.

ನಾನೇ ಅದರತ್ತ ಸುಳಿದಿರದಿದ್ದರೆ ...? ನಾನೇ ರಂಗನತ್ತ ಕಣ್ಣು ಹೊರಳಿಸಿರದಿದ್ದರೆ .... ? ನನ್ನನ್ನು ನೋಡುವ ರಂಗನ ನೋಟಕ್ಕೆ ನನ್ನ ನೋಟವನ್ನು ಕೂಡಿಸಿರದಿದ್ದರೆ .... ? ನನ್ನನ್ನು ಮುಗುಳುನಗೆಯಿಂದ ನೋಡುವ ರಂಗನನ್ನು ನಾನು ಕೊಂಚ ಕಿಡಿಗಣ್ಣಿನಿಂದ ನೋಡಿದ್ದರೆ ....? ತಿರುತಿರುಗಿ ನನ್ನ ದಾರಿಗೆ ಬುದ್ಧಿಪೂರ್ವಕವಾಗಿ ಅಡ್ಡ ನಿಂತಿರುವ ಅವನಿಗೆ ನಾನು ಅಬ್ಬರಿಸಿ ಹೇಳಿದ್ದರೆ.... ?

ಎಲ್ಲವನ್ನೂ ಮಾಡಿದ್ದರೆ .... ? ಅಥವಾ ನಾನು ಹುಟ್ಟಿರದಿದ್ದರೆ ...?

ಅವಾವವೂ ಕೇಳಿದ ಪ್ರಶ್ನೆಗಳಲ್ಲ. ಅಂತೆಯೇ ಮತ್ತೆ ಮತ್ತೆ ಮನದಲ್ಲಿ ತಂದು ' ಹಾಗೆ ಮಾಡಿದ್ದರೆ .... ? ಹೀಗೆಮಾಡಿದ್ದರೆ ...? ' 'ಹಾಗಾಗುತ್ತಿ

ರಲಿಲ್ಲ. ಹೀಗಾಗುತ್ತಿರಲಿಲ್ಲ. ಎಂದು ಹೇಳಿಕೊಂಡು ದುಃಖಿಯಾಗುವದರಲ್ಲಿ ಯಾವ ಅರ್ಥವೂ ಇಲ್ಲ.

ಕುಲಕರ್ಣಿಯವರು ಹೇಳುವಂತೆ– " ಹಿಂದಾದುದಕ್ಕೆ ದುಃಖ ಬೇಡ. ದುಃಖಿಸುವದರಿಂದ ಏನೂ ದೊರಕುವದಿಲ್ಲ. ಏನೂ ದೊರಕದ್ದಕ್ಕಾಗಿ ದುಃಖಿಸುವದು ವ್ಯರ್ಥ. ಆದ್ದರಿಂದ ಹಿಂದಿನ ಪಾಠದಿಂದ ಮುಂದಿನ ದಾರಿ ಯನ್ನು ಅರಿತು ಕೊಳ್ಳಬೇಕು. .... ಮುಂದೆ ಕೂಡ ಹಿಂದಿನಂತಾಗದಂತೆ ಜಾಗೃತೆ ವಹಿಸಬೇಕು. "

ಅಹುದು ಮುಂದೆ ಕೂಡ ಹಿಂದಿನಂತಾಗದಂತೆ ಜಾಗೃತೆ ವಹಿಸಬೇಕು. ನಾನು ಜಾಗೃತಳಾಗಿದ್ದರೆ ಅದಾವ ಅಪಾಯವೂ ಸಂಭವಿಸದು. ಹಿಂದೆ ನಾನು ಅಜಾಗೃತಳಾಗಿದ್ದೆನೆಂದೇ ಅಪಾಯವು ಸಂಭವಿಸಿತು. ಅದರಿಂದ ನಾನು ದುಃಖಿಯಾದೆ.

ಅಂದು ನನಗೆ ನನ್ನ ಹೊಣೆಗಾರಿಕೆಯ ಅರಿವಿರಲಿಲ್ಲ. ಅಂತೆಯೇ ನನ್ನಿಂದ ಅಂತಹ ಪ್ರಮಾದವಾಯಿತು. ಆ ಪ್ರಮಾದದ ಫಲ ಇಂದಿಗೂ ಅನು ಭವಿಸುತ್ತಿರುವೆ.

ಆದರೆ ಆ ಪ್ರಮಾದಕ್ಕೆ ಕಾರಣಳು ನಾನೊಬ್ಬಳೇ ಅಲ್ಲ. ರಂಗನೂ ಕೂಡ ಅದಕ್ಕೆ ಪಾಲುಗಾರನಲ್ಲವೆ ? ಆದರೂ ಆತ ದುಃಖಿಯಾಗಲಿಲ್ಲ ನಾನು ಮನೆಬಿಟ್ಟು ಬಂದಾಗ ಒಂದು ಪೀಡೆ ಹೋಯಿತು. ಎಂದಿರಬಹು ದಲ್ಲವೆ ?

ಜಗತ್ತು ತುಂಬಾ ವಿಚಿತ್ರ, ತುಂಬಾ ಸ್ವಾರ್ಥಿ. ಎಲ್ಲರೂ ನೋಡು ವದು ತಮ್ಮ ತಮ್ಮ ಸ್ವಾರ್ಥವನ್ನು, ತಮ್ಮ ಸುಖವನ್ನು, ತಮ್ಮ ಜೀವನ. ವನ್ನು.

ನಾನು ಕೂಡ ಸ್ವಾರ್ಥಿ. ನಾನೂ ನನ್ನ ಸುಖವನ್ನು ನೋಡಿದೆ. ನನ್ನ ಜೀವನಕ್ಕಾಗಿ ಆಡಿದೆ. ಆದರೆ ಅದರ ದೋಷವನ್ನು ಇಂದು ರಂಗನ ಮೇಲೆ ಹೊರಿಸುತ್ತಿರುವೆ.

"ಎಲ್ಲರಿಗೂ ಸುಖಬೇಕು. ಎಲ್ಲರಿಗೂ ತಮ್ಮ ಜೀವನ ಸುಖವಾಗಿ ಮುಂದುವರಿಯುವದು ಬೇಕು. ಸ್ವತಹಕ್ಕೆ ಸುಖದ ಅಪೇಕ್ಷೆಮಾಡುವಾಗ ಇನ್ನುಳಿದ ಕೆಲವರಿಗೆ ದುಃಖವಾಗುವದು ಸ್ವಾಭಾವಿಕ. ಹಾಗಿದ್ದ ಮಾತ್ರಕ್ಕೆ ಸುಖವನ್ನು ಅಪೇಕ್ಷಿಸುವವ ಸ್ವಾರ್ಥಿ ಎಂದು ಹೇಳುವಂತಿಲ್ಲ. ಅವನನ್ನು ಪಶು ಎಂದು ಕರೆಯಲಾಗದು. ಎಂದು ಕುಲಕರ್ಣಿಯವರು ಹೇಳುವ ಮಾತಿನಲ್ಲಿ ತಥ್ಯವಿದೆ. ಅರ್ಥವಿದೆ.

"ಈ ಜಗತ್ತಿನಲ್ಲಿ ಯಾರೂ ಪಶುಗಳಲ್ಲ. ಎಲ್ಲರೂ ಮನುಷ್ಯರು. ಒಬ್ಬೊಬ್ಬರ ವಿಚಾರ ಒಂದೊಂದು ರೀತಿ. ಒಬ್ಬೊಬ್ಬರಿಗೆ ಒಂದೊಂದು ಧಾರಿ. ಅನೇಕಸಲ ಅನೇಕರ ದಾರಿ- ಕವಲೊಡೆಯುತ್ತದೆ. ಇಲ್ಲವೆ ತಿಕ್ಕಾಟವಾಗುತ್ತದೆ. ಆಗ್ಗೆ ಆ ವ್ಯಕ್ತಿಗಳ ಜೀವನದಲ್ಲಿ ವಿರಸ ಅಥವಾ ಸರಸವಾಗುತ್ತದೆ. ಅದನ್ನೇ ನಾವು ಹಿರಿದುಮಾಡಿಕೊಂಡು ಕೂಡಬಾರದು. ಜೀವನದಲ್ಲಿ ಅದೆಲ್ಲವೂ ನಡೆಯತಕ್ಕದ್ದು ಎಂದು ನಾವು ಮುಂದುವರಿಯ ಬೇಕು." ಎಂದು ಕುಲಕರ್ಣಿಯವರು ತಿರುತಿರುಗಿ ಹೇಳುತ್ತಾರೆ.

ನಾನು ಕೂಡ ರಂಗನನ್ನು ರಂಗನ ವಿಚಾರವನ್ನು ಮರೆಯಲು ಪ್ರಯ ತ್ನಿಸುವೆ. ಆದರೆ ಅವನ ವಿಚಾರ ಹೊಟ್ಟೆಯಲ್ಲಿ ಸೇರಿ ಬೆಳೆಯುತ್ತಲಿದೆ. ಬೆಳೆದು ಬಾಯ್ಬಿಡಿಸುತ್ತದೆ, ಮರೆಯಬೇಕೆಂದರೂ ಕೂಡ ಹೇಗೆ ಮರೆಯಲು ಸಾಧ್ಯ....?

ರಂಗನ ವಿಚಾರವನ್ನು ಮನದಿಂದ ಕಿತ್ತಿಹಾಕಬೇಕಾದರೆ ದೇಹದಲ್ಲಿ ಸೇರಿದ ರಂಗನ ವಿಷಬೀಜವನ್ನು ಕಿತ್ತು ಬೀಸಾಕಬೇಕು. ಆದರೆ—

ಆದರೆ....ಅದು ರಂಗನ ಮಗುವಲ್ಲ ನನ್ನ ಮಗು.

ಕಾಮಿನಿ ಹೇಳುವಳು "ಅದು ನಿನ್ನ ಮಗುವಲ್ಲ, ನಿನ್ನ ರಂಗನಿಲ್ಲದಿ ದ್ದರೆ— ಅದಕ್ಕೆ ನೀನು ತಾಯಿಯಾಗುತ್ತಿರಲಿಲ್ಲ. ತಾಯಿಯು ಮಗುವಿನ ಜೀವನ ತಾಯಿಯನ್ನು ಕಾಯುವದಕ್ಕೆ ಅಲ್ಲದೆ ಕೊಲ್ಲುವದಕ್ಕಲ್ಲ."

"ನಿನ್ನ ಹೊಟ್ಟೆಯಿಂದ ಹೊರಬರುವ ಮಗು ನಿನ್ನನ್ನು ಕಾಯುವದಕ್ಕೆ ಅನಸಗಿಸುವದಿಲ. ನಿನನ್ನು ಕೊಲ್ಲಲು ಬರುತ್ತದೆ. ಅದು ನಿನ್ನ ಹೊಟ್ಟೆ

ಯಲ್ಲಿ ಮೂಡಿದ ಕ್ಷಣದಿಂದಲೇ ನಿನ್ನ ಜೀವನ ಬಿರುಗಾಳಿಗೆ ಸಿಲುಕಿದೆ. ನೀನು ಬಿರುಗಾಳಿಯಲ್ಲಿಯ ತರಗೆಲೆಯಾಗಿ ಗೊತ್ತು ಗುರಿಯಿಲ್ಲದೆ ನೆಲದ ಆಸರ ವಿಲ್ಲದೆ ಹೊರಟಿರುವೆ....ಸುಮಿತ್ರಾ, ಹುಟ್ಟಿದ್ದು ಬಾಳುವದಕ್ಕೆ,ಅಲ್ಲದೆ ಸಾಯು ವದಕ್ಕಲ್ಲ. ಸಾಯುವದೇ ಜನ್ಮದ ಉದ್ದೇಶವಾದರೆ ' ಜಗ ' ವೆನ್ನುವ ಶಬ್ದ ಅರ್ಥಹೀನವಾದುದು. ' ಜಗ ' ಎಂದರೆ ಬಾಳು. ಬಾಳುವವರಿಗಾಗಿ ಜಗ. "

" ಬಾಳುವವರಿಗಾಗಿ ಜಗ. "

" ಜಗ ಎಂದರೆ ಬಾಳು. "

" ನೀನು ಬಾಳಬೇಕಾಗಿದೆ. ಅಂತೆಯೇ ಸಾಯುವ ದಾರಿಯನ್ನು ತ್ಯಜಿಸು. ಯಾರದೋ ಮಗುವನ್ನು ಹೊಟ್ಟೆಯಲ್ಲಿಟ್ಟುಕೊಂಡು ' ಅದು ನನ್ನದು ' ಎಂದರೆ ನಿನ್ನದಾದೀತೆ ? "

' ಬೇವಿನ ಕಾಯಿ. ಮಾಮರಕ್ಕೆ ಬಿಟ್ಟೀತೆ ? "

" ನೀನು ಮಾಮರ. ನಿನ್ನಿಂದ ಜಗತ್ತು ಫಲದ ಅಪೇಕ್ಷೆ ಮಾಡು ತ್ತಿದೆ. ನೀನು ಜಗದಲ್ಲಿ ಜನ್ಮ ತಾಳಿರುವೆ. ಅಂತೆಯೇ ಜಗದ ಅಪೇಕ್ಷೆಯನ್ನು ಪೂರ್ಣ ಮಾಡಬೇಕು. ನಿನ್ನಿಂದ ಬಿಡುವ ಫಲದಿಂದ ಜಗತ್ತು ತಣಿಯ ಬೇಕಾಗಿದೆ. "

" ಅದಕ್ಕಾಗಿ ನೀನು ಬಾಳಲು ಸಿದ್ಧಳಾಗು. "

" ನೀನು ಬಾಳಬೇಕಾದರೆ ನಾನು ಹೇಳಿದಂತೆ ಕೇಳುವದಕ್ಕೆ ಸಿದ್ಧಳಾಗು. "

ಎಂದು ಹೇಳುವ ಕಾಮಿನಿಯ ಮಾತನ್ನು ನಾನು ಮೀರಬೇಕಾದರೂ ಏಕೆ ?

ನನ್ನ ಜೀವನ ಹಾಳಾಗುವದಕ್ಕೆ, ನಾನು ಮನೆ ಬಿಡುವದಕ್ಕೆ ಕಾರಣ ರಂಗನು. ಈ ಹೊಟ್ಟೆಯಲ್ಲಿ ಬೆಳೆಯುವ ಗರ್ಭ. ಅದುವೇ ಇಲ್ಲದಿದ್ದರೆ...?

ಇಂದು ನಾನಿಲ್ಲಿ ಇರುತ್ತಿರಲಿಲ್ಲ ನಾನು-ನನ್ನ ಮನೆಯಲ್ಲಿ ತಂದೆತಾಯಿ ಗಳೊಂದಿಗೆ ಇರುತ್ತಿದ್ದೆ. ತಂದೆ ತಾಯಿಗಳು ತಮ್ಮ ಭಾರವನ್ನು ಇಳಿಸಿಕೊಳ್ಳು

ವಾದಕ್ಕಾಗಿ ಇಷ್ಟರಲ್ಲಿ ನನ್ನ ವಿವಾಹವನ್ನು ಕೂಡ ಮಾಡಿಬಿಡಬಹುದಿತ್ತು. ಮಾಡಿಕೊಂಡವನ ಮಡದಿಯಾಗಿ ಅವನ ಮನೆಯಲ್ಲಿ ಅವನ ಮಕ್ಕಳ ತಾಯಿ ಯಾಗಿ ಬಾಳುತ್ತಿದ್ದೆ. ಬದುಕುತ್ತಿದ್ದೆ.

ಅದಾವುದೂ ಆಗಲಿಲ್ಲ. ಅವಕ್ಕೆ ಕಾರಣ ಈ ಹೊಟ್ಟೆಯಲ್ಲಿ ಬೆಳೆಯು ತ್ತಿರುವ ಗರ್ಭ.

ಅದು ಇಲ್ಲದಾದರೆ ........ ?

ನಾನು ಮುಕ್ತಳು. ಜಗತ್ತಿನಲ್ಲಿ ಯಾರೂ ನನಗೆ ಏನನ್ನೂ ಹೇಳರು ನಾನು ಮತ್ತೆ ಮೊದಲಿನ ನಿರ್ಮಲೆಯಾಗಿ ಉಳಿಯುವೆನು. ನಿರ್ಮಲೆ ಥಾಳಾಗಿ ಸುಮಿತ್ರೆಯಾದುವಕ್ಕೆ ಮುಖ್ಯ ಕಾರಣ ರಂಗನಲ್ಲ. ಹೊಟ್ಟೆಯಲ್ಲಿ ರುವ ಗರ್ಭ

ಅದನ್ನು ಇಲ್ಲದಂತೆ ಮಾಡಬೇಕು. ಇಲ್ಲದಂತೆ ಮಾಡಬೇಕು.

ಆದರೆ ಹೇಗೆ ... ?

ಅದ್ದರ ವಿಚಾರ ನನಗೆ ಬೇಡ. ಅದಕ್ಕೆ ಕಾಮಿನಿ ಸಮರ್ಥಳಿರುವಳು. ಅವಳೇ ಹೇಳುವದಿಲ್ಲವೇ .... ?

"ನೀನು ಉಳಿದಾವ ವಿಚಾರವನ್ನೂ ಮಾಡಬೇಡ. ಉಳಿದೆಲ್ಲ ವಿಚಾರ ನನಗಿರಲಿ. ಅದಕ್ಕೆ ನಾನು ಸಮರ್ಥಳಿರುವೆ........

"....ಒಬ್ಬರನ್ನು ಬಾಳಿಸುವದಕ್ಕೆ ಇನ್ನೊಬ್ಬರ ಕೊಲೆ ಮಾಡಬೇಕಾ ಗುತ್ತದೆ. ದೇವನು ಕೂಡ ಅದನ್ನೇ ಹೇಳಿದ್ದಾನೆ. ಆದರೆ ನನ್ನ ಮಾತಿ ನಲ್ಲಿ ಅಲ್ಲ. ತನ್ನ ಮಾತಿನಲ್ಲಿ. ದೇವ ದೊಡ್ಡವ. ದೊಡ್ಡ ಮಾತಿನಲ್ಲಿ ಹೇಳು ತ್ತಾನೆ. ನಾನು ಅವನ ದೃಷ್ಟಿಯಲ್ಲಿ ಅಣು. ಆದರೆ ನನಗೆ ಕೂಡ ಅವನೇ ಕೊಟ್ಟ ಧ್ವನಿಯಿದೆ " ಎಂದು.

ಅದಾವುದಕ್ಕೂ ನಾನು ವಿಚಾರಿಸಬೇಕಿಲ್ಲ. ಆದರೆ....?

ಆದರೆ ಕುಲಕರ್ಣಿಯವರಿಗೆ ಹೇಳುವದಾದರೂ ಹೇಗೆ? ಅವರು ಇದಕ್ಕೆ ಒಪ್ಪಬಹುದೆ....? ಅವರ ದೃಷ್ಟಿ ಧರ್ಮದೃಷ್ಟಿ. ಅವರಿಗೆ ಗರ್ಭಪಾತ ಮಹಾಪಾತಕವೆನ್ನಿಸಬಹುದು. ಅವರು ಆಗೀಗ ಹೇಳುವದಿಲ್ಲವೆ—?

" ಪಾಪಿ ಒಂದು ಪಾಪದಿಂದ ಮುಕ್ತನಾಗಬೇಕೆಂದು ಇನ್ನೊಂದು ಪಾತಕ ಮಾಡುತ್ತಾನೆ " ಎಂದು.

ಗರ್ಭಪಾತಕೂಡ ಮತ್ತೊಂದು ಪಾಪ. ಒಂದು ಪಾತಕದಿಂದ ಮುಕ್ತಳಾಗಬೇಕೆಂದು ಇನ್ನೊಂದು ಅದಕ್ಕಿಂತ ಹೆಚ್ಚಿನ ಪಾಪದ ಕಾರ್ಯಕ್ಕೆ ಕೈ ಹಾಕುವದು !

ಇದು ಯೋಗ್ಯವೆ...? ನ್ಯಾಯವೆ....?

" ನ್ಯಾಯಾನ್ಯಾಯ ಯೋಗ್ಯಾಯೋಗ್ಯತೆಗಳ ವಿಚಾರ ನಮಗೇಕೆ ? " ಎಂದು ಕಾಮಿನಿ ಕೇಳುತ್ತಾಳೆ.

" ನ್ಯಾಯದ ದಾರಿಯಿಂದ ದೂರಾಗಬಾರದು. ನಿಜ. ಆದರೆ ನ್ಯಾಯದ ದಾರಿಯಲ್ಲಿ ಬೆಂಕಿಯ ಹಾಸಿಗೆ ಹಾಸಿದ್ದರೆ ಅದರಮೇಲೆ ನಡೆಯಲು ಸಾಧ್ಯವೆ ? ಮನೆಯಲ್ಲಿ ಸುಖಾಸನದ ಮೇಲೆ ಕುಳಿತ ನ್ಯಾಯನಿಷ್ಠುರರು ' ಏನಿದ್ದರೂ ಸರಿ. ನಾಗಬೇಕಾದುದು ನ್ಯಾಯದ ದಾರಿಯಿಂದ ' ಎಂದು ಉಸಿರುಬಿಡದೆ ಒತ್ತಿ ಒತ್ತಿ ಹೇಳಬಹುದು ಆದರೆ ಪ್ರತ್ಯಕ್ಷದಲ್ಲಿ ಸಾಧ್ಯವಿದೆಯೆ ? ಜ್ವಾಲೆಯ ಕಾವು ದೇಹಕ್ಕೆ ತಗಲುವಾಗ ದೇಹವನ್ನು ಮುಚ್ಚಿಕೊಳ್ಳಲೆತ್ನಿಸುವ ದೇಹಧಾರಿ. ಇದನ್ನು ಅಲ್ಲಗಳೆಯುವವರಾರು ? ಸತ್ಯ ಸಂಗತಿಗೆ ಕಪ್ಪುಬಟ್ಟೆ ಹೊಚ್ಚಿದರೆ ಅದು ವಿಕಾರವಾಗುವದು. ಅಲ್ಲದೆ ಇಲ್ಲದಾಗುವದಿಲ್ಲ..."

" ನ್ಯಾಯವೆಂದರೇನು ? ನಾಲ್ಕು ಜನ ಹೇಳಿದ್ದಕ್ಕೆ ಸಾವಿರಾರು ಜನ ತಲೆ ಅಲ್ಲಾಡಿಸಿದ್ದು ನ್ಯಾಯವಲ್ಲ."

"ನ್ಯಾಯವೆಂದರೆ ಅನ್ಯಾಯವಲ್ಲದ್ದು."

"ಸಾಧು ಜನಕ್ಕೆ ಕೇಡು ಬಗೆಯುವದು ಅನ್ಯಾಯ"

" ಗರ್ಭವೇನೂ ಸಾಧುವಲ್ಲ. ಅದು ಬೆಳೆಯುತ್ತದೆ. ಬೆಳೆದು ಮಾನವನಾಗಿ ಬಾಳುತ್ತದೆ. ಎಂದು ಹೇಳುವದಾದರೆ ಅದು ಇಂದಿನ ವಿಚಾರವಲ್ಲ ಸಾವಿರ ವರುಷಗಳ ನಂತರ ಬರುವ ವಿಚಾರ. "

" ಗರ್ಭಕ್ಕೆ ಜೀವವಿದೆ ಎಂದು ಒಪ್ಪಿ ಅದರ ಪಾತ ಪಾಪವೆಂದು ನಂಬುವದಾದರೆ ನಾವು ಜೀವ ಹಿಂಸೆಯಲ್ಲಿಯೇ ಪೂರ್ಣ ದಿನವನ್ನು ಕಳೆಯುವೆವು ಎಂದುಕೊಂಡಂತೆ. "

ನಾವು ತಿನ್ನುವ ಅನ್ನ ಅದೂ ಬೆಳೆದದ್ದು. ಮತ್ತೆ ಭೂಮಿಯಲ್ಲಿ ಬೀಸಾಕಿದರೆ ಅದು ಮತ್ತೆ ಬೆಳೆಯುತ್ತದೆ. ಅದು ಜೀವವಲ್ಲವೇ ? ನಿತ್ಯವೂ ತಿಳಿದೂ ತಿಳಿಯದೆಯೂ ಅನಂತ ಜೀವಿಗಳ ಸಂಹಾರವಾಗುತ್ತದೆ ವ್ಯಕ್ತಿಯಿಂದ. ಅದಕ್ಕೆಲ್ಲ ಪಾಪವೆಂದು ಹೇಳುವದಾದರೆ ಸ್ವರ್ಗವೆನ್ನುವದನು ನಿರ್ಮಿಸುವ ಆವಶ್ಯಕತೆಯೇ ಇಲ್ಲ. ಏಕೆಂದರೆ ಯಾವ ಪ್ರಾಣಿಯಿಂದಲೂ ಪುಣ್ಯದ ಕಾರ್ಯವಾಗದು. ಸಂಹಾರ ಕಾರ್ಯದಲ್ಲಿಯೇ ಆತನ ದಿವಸ ಸಂದು ಹೋಗುತ್ತದೆ. "

" ವ್ಯಕ್ತಿ ಬದುಕುವದಕ್ಕೆ ಅವಶ್ಯವಿದ್ದ ಕಾರ್ಯ ಮಾಡುವದು ಪಾಪವಲ್ಲ. ಕಂದಮೂಲದಿಂದ ಬದುಕುವ ಸನ್ಯಾಸಿ ಮಾಂಸಾಹಾರಕ್ಕೆ ಉದ್ಯುಕ್ತನಾದರೆ ಅದು ಪಾಪ. ಅಲ್ಲದೆ ಚಳಿ ಪ್ರದೇಶದಲ್ಲಿರುವವರು ಮಾಂಸಾಹಾರ ಮಾಡಿದರೆ ಅದು ಪಾಪವಲ್ಲ. "

ಗಂಡನಿದ್ದ ಹೆಂಡತಿ ಮಗುವಿನ ಜನ್ಮದಿಂದ ತನ್ನ ಸೌಂದರ್ಯ ಕೆಡುತ್ತದೆ ಎಂದು ' ಗರ್ಭಪಾತ ' ಮಾಡಿದರೆ ಅದು ಪಾಪ. ಮಗುವಿನ ಜನ್ಮದಿಂದ ಸಂಸಾರ ಬೆಳೆಯುತ್ತದೆ ಎಂದು ಶಿಶು ಹತ್ಯಕ್ಕೆ ಮನಮಾಡಿದರೆ ಅದು ಪಾಪ. ಅಲ್ಲದೆ—"

"ತಾನು ಹೆತ್ತ ಕರುಳು ಉಪವಾಸದಿಂದ ತಳಮಳಿಸುವದನ್ನು ನೋಡಲಾರದ ಅಸಹಾಯಕ ತಾಯಿ ಕೂಸಿನ ಕೊಲೆ ಮಾಡಿದರೆ ಅದು ಪಾಪವಾಗಬಾರದು..."

" ಭವಿಷ್ಯ ಜೀವನಕ್ಕೆ ಅಡ್ಡಗಾಲಾಗಿ ನಿಂತಿರುವ ಗರ್ಭದ ನಾಮಶೇಷ ಅದೆಂದಿಗೂ ಪಾಪವಾಗಬಾರದು. ಪಾಪವಾಗಲಾರದು. "

"....ಅದು ಅನ್ಯಾಯವೂ ಅಲ್ಲ. ಏಕೆಂದರೆ ಬೆಳೆಯುವ ಗರ್ಭ ಸಾಧುವಲ್ಲ. ಹುಟ್ಟುವ ಮಗು ತಾಯಿಯ ಮಗುವಾಗಿ ಜನ್ಮ ತಾಳುವದಿಲ್ಲ. ವೈರಿ

ಯಾಗಿ ಹುಟ್ಟುತ್ತದೆ. ವೈರಿಯನ್ನು ಬೆಳೆಯುವ ಮೊದಲೇ ಛೇದಿಸಿ ಬಿಡ ಬೇಕು."

ಎಂದು ಕಾಮಿನಿ ಹೇಳಿ ನನ್ನ ಮನದಲ್ಲಿಯ ಭೀತಿಯನ್ನು ಕಡಿಮೆ ಮಾಡಲು ಯತ್ನಿಸುತ್ತಾಳೆ.

ಮನೆ ಮಾರು ತಂದೆ ತಾಯಿಗಳನ್ನು ಬಿಟ್ಟು ಬಂದ ನನಗೆ ಅವಳು ಜೀವದ ಗೆಳತಿಯಾಗಿದ್ದಾಳೆ, ತಾಯಿಯಾಗಿದ್ದಾಳೆ. ಕಷ್ಟಕಾಲದಲ್ಲಿ ಸಹಾಯದ ಕೈ ನೀಡುವವರೇ ಬಂಧು ಬಳಗ ತಾಯಿ ತಂದೆ ಎಲ್ಲವೂ ಅಲ್ಲವೆ?

ಸಹಾಯ ಕೊಟ್ಟ ಕುಲಕರ್ಣಿಯವರು ಸಹಾಯ ಸಲ್ಲಿಸುತ್ತಿರುವ ಕಾಮಿನಿ ಇಬ್ಬರೇ ನನಗೆ ಸರ್ವಸ್ವವಾಗಿದ್ದರು.

ಕುಲಕರ್ಣಿಯವರು ಮಮತೆಯ ಅಮೃತವನ್ನು ಕುಡಿಸಿರದಿದ್ದರೆ ನಾನು ಇಂದು ಜಗವನ್ನು ನೋಡುವದಕ್ಕೆ ಇರುತ್ತಿರಲಿಲ್ಲ.

"ನಾನು ಪಾಪಿ" ಎನ್ನುವದನ್ನು ಹೇಳದಿದ್ದರೂ ಒಡೆದು ತೋರು ತ್ತಿರುವಾಗ "ಜಗದಲ್ಲಿ ಯಾರೂ ಪಾಪಿಗಳಲ್ಲ" ಎಂದು ಹೇಳಿ ನನ್ನನ್ನು ಸಾಂತ್ವನಗೊಳಿಸುತ್ತಿದ್ದರು.

'ಪಾಪವು ದೇಹದ ಕಾರ್ಯ. ಮನದ್ದಲ್ಲ. ಈ ಬಲಿಷ್ಠ ದೇಹದ ರಾಕ್ಷಸೀ ಶಕ್ತಿಗೆ ನಿರಾಧಾರ ಮನಸ್ಸು ಬಾಗುತ್ತದೆ. ಅಲ್ಲದೆ ಸ್ವಸಂತೋಷ ದಿಂದಲ್ಲ. ಯಾರೊಬ್ಬರ ಒತ್ತಾಯ ಇನ್ನೊಬ್ಬರ ಪಾಪ ಹೇಗಾದೀತು....?" ಎಂದು ಕುಲಕರ್ಣಿಯವರು ಕೇಳಿ 'ನನ್ನಿಂದಾದ ಅನುಚಿತ ವರ್ತನೆಯು ನನ್ನ ಪಾಪವಲ್ಲ" ಎಂದು ಮನಗಾಣಿಸಿ ಕೊಡಲು ಪ್ರಯತ್ನಿಸುತ್ತಾರೆ.

ಅವರ ಮಾತನ್ನು ಕೇಳಿದಾಗೆಲ್ಲ ನಾನು ಪಾಪಿಯಲ್ಲ. ನನ್ನಿಂದಾದ ಕಾರ್ಯ ನಾನಾಗಿ ಮಾಡಿದ್ದಲ್ಲ. ಆದರಿಂದ ನಾನು ಪಾಪಿಯಲ್ಲ ಎಂದೂ ಅನ್ನಿಸುತ್ತದೆ. ಆದರೆ ಹೊಟ್ಟೆಯ ಭಾರ ಎಲ್ಲ ವಿಚಾರಗಳ ಮೇಲೆ ಪರದೆ ಎಳೆದು ನನ್ನನ್ನು 'ಅವಿಚಾರಿ' ಮಾಡುತ್ತದೆ. ಪಾಪಿ ಎಂದು ಸಾರುತ್ತದೆ.

ನೋಡಿದವರು ಕೂಡ ನನ್ನನ್ನು ಪಾಪಿ ಎಂದೇ ಹೇಳುವರು. ಗಂಡ ನಿಲ್ಲದೆ ಸ್ತ್ರೀ ಬಸಿರಾಗುವದುಂಟೆ....? ಪತಿಯಿಲ್ಲದೆ ಬಸಿರಾದ ಸ್ತ್ರೀ ಪತಿತೆ ಯಲ್ಲವೆ....?

ಪತಿತೆ ಪಾಪಿಯಲ್ಲವೆ....?

ಅಹುದು. ಪತಿತೆ ಪಾಪಿಯಹುದು.

ಆದರೆ ಕುಲಕರ್ಣಿಯವರು ಕೇಳುತ್ತಾರೆ—

" ನೀನು ಪತಿತೆಯೇ ಅಲ್ಲ. ಪತಿತೆಯಲ್ಲದ ನೀನು ಪಾಪಿ ಹೇಗೆ....?" ಎಂದು.

ವ್ಯಕ್ತಿಗೆ ಮುಖ್ಯವಿದ್ದುದು ಮನ, ದೇಹವಲ್ಲ. ದೇಹವಿಲ್ಲದೆ ಮನವಿಲ್ಲವಾದರೂ ದೇಹವೇ ಮನವಲ್ಲ. ಮನಕ್ಕೆ ಬೇಡವಾಗಿಯೂ ಕೂಡ ದೇಹ ಕೆಲವೊಂದು ಸಲ ಕೀಳು ಕೆಲಸ ಮಾಡುತ್ತದೆ. ಅದೊಂದೇ ಕಾರಣದಿಂದ ನೂರು ವರುಷ ಬಾಳುವ ವ್ಯಕ್ತಿಗೆ ಕಲಂಕದ ಕಪ್ಪು ಹಚ್ಚಲು ಬಂದೀತೆ....? ದೇಹಕ್ಕೆ ತಗಲಿದ ಕೊಳೆ ತೊಳೆದಾಗ ಹೋಗುತ್ತದೆ. ಅದರಂತೆಯೇ ದೇಹದಿಂದಾದ ಅನುಚಿತ ಅಥವಾ ಕೀಳು ವರ್ತನೆಯನ್ನು ಸದ್ವರ್ತನೆಯಿಂದ ತೊಳೆಯಲು ಸಾಧ್ಯವಿದೆ.." ಎಂದು ಹೇಳುವ ಅವರ ವಿಚಾರ " ನಾನು ಪಾಪಿಯಲ್ಲ " ಎಂದು ಸ್ಪಷ್ಟಪಡಿಸುವದಿಲ್ಲವೆ...?

ವಿಚಾರದಿಂದ ' ನಾನು ಪಾಪಿಯಲ್ಲ ' ಎಂದು ಸಿದ್ಧವಾಗಬಹುದಾದರೂ ನಾನು ಪಾಪಿಯಲ್ಲವೆ ? ಹೊಟ್ಟೆಯಲ್ಲಿಯ ಗರ್ಭ ಪಾಪವಲ್ಲವೆ ?

ಕೂಡಿದ ಜನ ಹೊಟ್ಟೆಯಲ್ಲಿಯ ಗರ್ಭದ ತಂದೆ ಯಾರು ? ಎಂದು ಕೇಳಿದ್ದಕ್ಕೆ ಉತ್ತರವೇನು ?

' ರಂಗ ಅದರ ತಂದೆ ' ಎಂದು ನಾನು ಉತ್ತರಿಸಿದಾಗ—

"ರಂಗ ನಿನಗೇನಾಗಬೇಕು...?" ಎಂದು ಕೇಳಿದರೆ ಅದಕ್ಕೆ ನಾನು ಕೊಡುವ ಉತ್ತರ....?

ಮೌನ.

ಮೌನದ ಅರ್ಥ...?.

ನಾನು ಪಾಪಿ.

ಜಗತ್ತಿನ ಜನಜಂಗುಳಿಯು ಕಿವಿಗೂ ಕೂಡ ನಿಚ್ಚಳವಾಗಿ ಕೇಳಿ ಬರುವಂತೆ ಆ ಮೌನ ಗುಡಗುಡಿಸುತ್ತದೆ.

ನೀನು.......ಪಾಪಿ.......ನೀನು ಪಾಪಿ ...ಎಂದು.

ವಿಚಾರದಿಂದ ನಾನು ಪಾಪಿಯಲ್ಲ.

ಸತ್ಯದಲ್ಲಿ ನಾನು ಪಾಪಿ ...

ಈ ಪಾಪಕ್ಕೆ ಪರಿಹಾರವಿಲ್ಲವೆ ...?

"ಪ್ರಾಯಶ್ಚಿತ್ತದಿಂದ ಪಾಪ ಪರಿಹಾರವಾಗುತ್ತದೆ" ಎಂದು ಕುಲಕರ್ಣಿಯವರು ಹೇಳುತ್ತಾರೆ.

ಈ ಪಾಪದ ಪರಿಹಾರಕ್ಕೆ ಎಂತಹ ಪ್ರಾಯಶ್ಚಿತ್ತ....? ಪ್ರಾಯಶ್ಚಿತ್ತದಿಂದ ಪಾಪವು ತೊಳೆದು ಹೋಗುವದೆ ..? ಪಾಪವು ತೊಳೆದು ಹೋಗಿ ನಾನು ಮತ್ತೆ 'ನಿರ್ಮಲೆ' ಯಾಗುವೆನೆ....?

"ಅಹುದು" ಎಂದು ಕಾಮಿನಿ ಹೇಳುತ್ತಾಳೆ.

"ಕಾಲಿಗೆ ಹೊಲಸು ಅಂಟಿದೆ. ಆದಕ್ಕಾಗಿ ನೀರಿನಿಂದ ಕಾಲು ತೊಳೆದುಕೊಳ್ಳಬೇಕು. ಹೊಟ್ಟೆಯೊಳಗೆ ಹೊಲಸಿದ್ದಾಗ ಹರಳೆಣ್ಣೆ ಕುಡಿಯಬೇಕು. ಅಂದರೆ ಯಾವುದು ಕೆಡಕಿನ ಮೂಲವೋ ಅದನ್ನು ತೆಗೆದು ಬೀಸಾಕಬೇಕು" ಎಂದು ಕಾಮಿನಿ ಹೇಳಿ ನನ್ನನ್ನು 'ಪಾಪದ ನಿರ್ಮೂಲನೆಗೆ' ಸಿದ್ಧಮಾಡುತ್ತಾಳೆ.

ಆವಳು ಹೇಳಿದಂತೆ ಕೇಳದೆ ಬೇರೆ ದಾರಿಯೇ ಇಲ್ಲ ಎನ್ನುವದು ನನಗೂ ದಿನಗಳೆದಂತೆ ಮನದಟ್ಟಾಗುತ್ತ ನಡೆದಿದೆ.

ಆದರೆ ನನ್ನ ದುರ್ದೈವ— ಅಲ್ಲೂ ಅಡ್ಡಬರುತ್ತಿದೆ.

ಗರ್ಭಪಾತದಿಂದ ಜೀವಕ್ಕೆ ಅಪಾಯವಿದೆ. ಆದಕ್ಕಾಗಿ ಹೆರಿಗೆಯಾಗಲೇಬೇಕಂತೆ !

ಹೆರಿಗೆಯಾಗುವದೆಂದರೆ ಮಾನವನ್ನು ಬುಟ್ಟಿಯಲ್ಲಿಟ್ಟು ಪೇಟೆಯಲ್ಲಿ ಮಾರಿದಂತೆ !

ಅದಕ್ಕಿಂತ ಮರಣವೇ ಲೇಸು. ಈಗ್ಗೆ ಮರಣವನ್ನಪ್ಪಿಕೊಳ್ಳುವದಕ್ಕಿಂತ, ಮನೆ ಬಿಟ್ಟಾಗಲೇ ಮರಣ ನನ್ನನ್ನಪ್ಪಿಕೊಂಡಿದ್ದರೆ....?

ಪ್ರತಿಯೊಂದು ಸಂಗತಿಯೂ ನನಗೆ ಪ್ರತಿಕೂಲವಾಗಿ ಪರಿಣಮಿಸುತ್ತಿದೆ. ಒಳ್ಳೆಯದಾಗುವದೆಂದು ಸೂಚಿಸುವ ಸಂಗತಿಕೂಡ ಕೊನೆಯಲ್ಲಿ ಪ್ರತಿಕೂಲವಾಗುತ್ತದೆ.

ನಾನು ಮಾಡಿದ ಅಪರಾಧವಾದರೂ ಏನು...?

ಇದು ಈ ಜನ್ಮದಲ್ಲಿ ಮಾಡಿದ ಅಪರಾಧವಲ್ಲ. ಪೂರ್ವ ಜನ್ಮದ ಪಾಪಭೂತವಾಗಿ ನನ್ನನ್ನು ಹಿಂಸೆ ಮಾಡುತ್ತದೆ. ಇದರಿಂದ ಮುಕ್ತಿ ಹೇಗೆ....?

ಮರಣದಿಂದಲೇ ಮುಕ್ತಿಯೆ . ?

ಮರಣದಿಂದ ಈ ಜನ್ಮದಲ್ಲಿ ಮುಕ್ತಿ ಹೊಂದಿದರೂ ಮುಂದಿನ ಜನ್ಮದಲ್ಲಿ ಇದಕ್ಕಿಂತ ಕಠೋರವಾದ ಶಿಕ್ಷೆಗೆ ಸಿದ್ಧಳಾಗಬೇಕಾಗುತ್ತದೆ.

ಕುಲಕರ್ಣಿಯವರು ಹೇಳುತ್ತಾರೆ " ನಾವು ಏನನ್ನು ಮಾಡುವದಾದರೂ ಈ ಜನ್ಮದಲ್ಲಿಯೇ ಮಾಡಿಕೊಳ್ಳಬೇಕು. ಪಾಪವನ್ನು ತೊಳೆದುಕೊಳ್ಳುವದಾಗಲಿ ಅಥವಾ ಭಗವಂತನನ್ನು ದೊರಕಿಸಿಗೊಳ್ಳುವದಾಗಲೀ ಈ ಜನ್ಮದಲ್ಲಿಯೇ ಮಾಡಬೇಕು. " ಎಂದು.

' ನಾಳೆ ಮಾಡುವಾ ' ಎಂದು ಯಾವುದೊಂದು ಕೆಲಸವನ್ನು ಮುಂದೆ ಹಾಕಲಾಗದು. ಏಕೆಂದರೆ ನಾಳೆ ಇಂದಾಗುವದೇ ಇಲ್ಲ. ನಾಳೆ-ಎನ್ನುವದು ಇಂದಿನ ಪ್ರತಿಬಿಂಬ. ಅಲ್ಲದೆ ಸತ್ಯವಲ್ಲ.

ಮರಣದಿಂದ ಈ ಜನ್ಮದ ಕೊನೆಯಾಗುವದು. ಆದರೆ ಬರಲಿರುವ ಜನ್ಮ ಕಳೆದುಕೊಂಡ ಜನ್ಮದ ಭೂತಗನ್ನಡಿಯಲ್ಲಿಯ ಪ್ರತಿಬಿಂಬವಾಗಿರುವದು ಒಂದು ಜನ್ಮದಲ್ಲಿ ಅನುಭವಿಸಿದ್ದು ನಾಕಾಗದೇ ನಾಳೆಗೆ ಬೇಕೆಂದು ಹಣ ಕಾಯ್ದಿಡುವ ಜಿಪುಣನಂತೆ ಮುಂದಿನ ಜನ್ಮಕ್ಕೂ ಇಂದಿನ ವಿಧಿಯನ್ನು ಕಟ್ಟಿಕೊಂಡು ಹೋಗಬೇಕು.

ಅನುಭವಿಸಬೇಕಾದುದನ್ನು ಅನುಭವಿಸಿಯೆ ತೀರಬೇಕೆಂಬ ಇಚ್ಛೆ ಇದ್ದರೂ ಅನುಭವಿಸಬೇಕಾದುದನ್ನು ಅನುಭವಿಸುವಾಗ ಸಹಿಸುವದು ಅ-ಾಧ್ಯ

ಆದರೂ ದಿನ ಕಳೆದು ಹೋಗುತ್ತದೆ.



ದಿನ ಕಳೆದೂ ಹೋಯಿತು.

ದಿನಗಳು ಯಾರಿಗಾಗಿಯೂ ತಡೆದು ನಿಲ್ಲುವದಿಲ್ಲ. ಅವು ಯಾರಿಗಾಗಿಯೂ ಕಾಯದೇ ತಮ್ಮ ದಾರಿಯಿಂದ ಸಾಗುತ್ತಲೇ ಇರುತ್ತವೆ.

ಬೆಳಗಾಗುತ್ತದೆ. ಸೂರ್ಯ ಮೂಡುತ್ತಾನೆ. ಮಧ್ಯಾಹ್ನದಲ್ಲಿ ಉಗ್ರನಾಗಿ ನಡು ನೆತ್ತಿಯ ಮೇಲೆ ಬಂದು 'ತ್ರಾಹಿ' ಅನ್ನಿಸುತ್ತಾನೆ. ಕೊನೆಗೆ ದಣಿದು ಇಳಿಮುಖ ಹಾಕಿಕೊಂಡು ಮನೆಯತ್ತ ಸಾಗುತ್ತಾನೆ. ಆಗ ಸಂಜೆಯಾಗುತ್ತದೆ ಸೋತು ಮನೆಗೆ ನಡೆದ ಸೂರ್ಯನನ್ನು ಬೆನ್ನಟ್ಟಿಕೊಂಡ ಕತ್ತಲೆ ಬರುತ್ತದೆ. ಆಗ ರಾತ್ರಿ ಮತ್ತೆ ತನ್ನನ್ನು ಬೆನ್ನಟ್ಟಿದ ಕತ್ತಲೆಯನ್ನು ಬೆನ್ನಟ್ಟಿಕೊಂಡು ಸೂರ್ಯ ಬರುತ್ತಾನೆ ಹೊಸ ಹುರುಪಿನಿಂದ ಕತ್ತಲೆಯನ್ನು ಹುಡುಕಿ ಕೊನೆಗೆ ಕಾಣದೆ ಉಗ್ರನಾಗುತ್ತಾನೆ. ಹುಡುಕಿ ದಣಿಯುತ್ತಾನೆ ಆಗ ಅಡಗಿದ ಕತ್ತಲೆ ಮತ್ತೆ ಬೆನ್ನಟ್ಟಲು ಪ್ರಾರಂಭಿಸುತ್ತದೆ....

ಹೀಗೆ ನಡೆದ ಬೆಳಕು ಕತ್ತಲೆಯ ಹೋರಾಟ ಆಟವಾಗಿ ಪರಿಣಮಿಸಿದೆ.

ಹಾಗೆಯೇ ಜನನ ಮರಣ.

ಮರಣವನ್ನು ನೀಗಿಸಲು ವ್ಯಕ್ತಿಯ ಜನನವಾಗುತ್ತದೆ. ಕೊನೆಗೆ ವ್ಯಕ್ತಿಯನ್ನು ಬೆನ್ನಟ್ಟಿ ಅವನನ್ನು ಮುತ್ತುತ್ತದೆ ಮರಣ.

ಈ ಹೋರಾಟವೂ ಆಟವಾಗಿದೆ.

ಕುಲಕರ್ಣಿಯವರು "ಮರಣವೆಂದರೆ ಹಳೆಯ ಜೀರ್ಣವಾದ ಬಟ್ಟೆಯನ್ನು ಬೀಸಾಡುವದು; ಜನನವೆಂದರೆ ಹೊಸ ಬಟ್ಟೆಯನ್ನು ಧರಿಸುವದು" ಎಂದು ಹೇಳುತ್ತಾರೆ.

ಹೇಳಲು ಅದೆಷ್ಟು ಸುಲಭ !

ಆದರೆ ಅನುಭವಿಸಲು...?

ಛೆ .. ಮರಣವನ್ನು ನೋಡುವದಕ್ಕೆ ಕೂಡ ಧೈರ್ಯ ಬೇಕು.

ಆದರೆ ಕಾಮಿನಿ...!

ಅವಳು ರಾಕ್ಷಸಿ ಪಿಸುಗುಟ್ಟುವ ಸ್ವರದಲ್ಲಿ ಹೇಳುತ್ತಾಳೆ "ಎಲ್ಲವನ್ನು ಮುಗಿಸಿದೆ" ಎಂದು ಹೇಳುವಾಗ ಅವಳ ಮಾತಿನಲ್ಲಿ ವೇದನೆ ಕೂಡ ಇಲ್ಲ ಅದೂ ಒಂದು ಅವಳ ನಿತ್ಯದ ಕರ್ತವ್ಯವಿದ್ದಿರಬೇಕು.

ಆದರೆ ಕುಲಕರ್ಣಿಯವರು......?

ಅವರಿಗೆ ಈ ಕಾಮಿನಿಯ ಕಾರ್ಯದ ಅರಿವಾಗಿರಬಹುದೆ....? ಆದರೆ ಹೇಳುವವರಾರು ? ಕಾಮಿನಿ ಹೇಳಿದಳು "ತಾನು ಕುಲಕರ್ಣಿಯವರಿಗೆ ತಿಳಿಸಿದೆ" ಎಂದು.

ಏನೆಂದು ತಿಳಿಸಿರಬಹುದು....?

ಇದೀಗ ಬೆಳಕು ಕಾಣಬಯಸುವ ಕಂಗಳನ್ನು ಮುಚ್ಚಿಸಿದೆ ಎಂದೆ...? ಏನೆಂದು ಹೇಳಿರಬಹುದು....? ಸತ್ಯದ ಪರಿಚಯ ಕುಲಕರ್ಣಿಯವರಿಗೆ ಆದರೆ ನನ್ನನ್ನು ಅವರು ತಿರಸ್ಕರಿಸಬಹುದಲ್ಲವೆ ?

ಅವರೂ ನನ್ನನ್ನು ತಿರಸ್ಕರಿಸಬಹುದೆ....?

ಅವರು ತಿರಸ್ಕರಿಸಿದರೆ ನಾನು ಹೋಗುವದೆಲ್ಲಿಗೆ......? ದೇವರೇ ದೂಡಿದರೆ ಹೋಗುವದಾರ ಬಳಿಗೆ...? ಯಾರು ಹತ್ತಿರ ಕರೆಯುವರು....?

ಈ ಜಗದಲ್ಲಿ ನನ್ನನ್ನು ಮುಂದಕ್ಕೆ ಕರೆಯುವವರು ಯಾರೂ ಇಲ್ಲ.

ಯಾರಾದರೊಬ್ಬರು ಇದ್ದರೆ ನಾನು ಈ ಅವಸ್ಥೆಗೆ ಬರುತ್ತಿರಲಿಲ್ಲ. ದೂಡುವವರಿಂದ ತುಂಬಿದ ಜಗದಲ್ಲಿ ಹತ್ತಿರ ಕರೆಯುವವರು ಅವರೊಬ್ಬರು.

ಅವರೇ ಒಬ್ಬರು.

ಏಕೆ ಅವರು ಮುಂದಕ್ಕೆ ಕರೆಯುವರು........? ಅವರು ನನ್ನನ್ನು ಸಾಂತ್ವನಗೊಳಿಸುತ್ತಿರುವದೇಕೆ....? ನನ್ನ ಕಣ್ಣೀರಿಗೆ ತಮ್ಮ ಮಮತೆಯನ್ನು ಕಾವಲಾಗಿಟ್ಟಿರುವದೇಕೆ....? ಏಕೆ....?

ಇದೂ ಒಂದು ತಿರುತಿರುಗಿ ಮನದಲ್ಲಿ ಮೂಡುವ ಪ್ರಶ್ನೆ.

ನನಗಾಗಿ ಅವರಲ್ಲಿ ಆಶೆಯಿದೆಯೆ...?

'ಇಲ್ಲ'ವೆಂದು ಅನುಭವದಿಂದ ಹೇಳಬಹುದು.

ಅಂತಹದೇ ಅನುಭವದಿಂದ ರಂಗನನ್ನು ನಂಬಿರಲಿಲ್ಲವೆ...?

ಈ ಜಗದಲ್ಲಿ ಯಾವುದೂ ಸ್ಥಿರವಲ್ಲ. ಅದರಂತೆ ಮನುಷ್ಯನ ನಂಬಿಗೆ ಕೂಡ. ಆಕಾಶದಲ್ಲಿಯ ಮೋಡದಂತೆ ಮನುಷ್ಯನ ಬುದ್ಧಿ ಚಂಚಲ. ಇಂದಿದ್ದುದು ನಾಳೆ ಇಲ್ಲ. ಈ ಕ್ಷಣದಲ್ಲಿದ್ದುದು ಬೇರೊಂದು ಕ್ಷಣದಲ್ಲಿ ಮಾಯ.

ಯಾರಿಗೆ ಗೊತ್ತು ಯಾರ ಮನದಲ್ಲಿ ಯಾವ ಭಾವನೆಗಳಡಗಿವೆ ಎನ್ನುವದು...!

ನಾನು ಏನನ್ನೂ ಅರಿಯದ ಮುಗ್ಧೆ, ಹುಚ್ಚಿ. ಜನರ ಒಳ್ಳೆಯ ಮಾತನ್ನು ನಂಬಿ, ಕಪಲೆತ್ತಿನಂತೆ ಅವರು ಹೇಳಿದ್ದಕ್ಕೆ ತಲೆಹಾಕಿ ತೆಪ್ಪಗಿರುವೆ. ನಾಳಿಗಾಗಿ ಯೋಚಿಸುವದಿಲ್ಲ. ಯೋಚಿಸಿದರೂ ತಿಳಿಯುವದಿಲ್ಲ. ತಿಳಿಯದಿದ್ದರೂ ವಿಚಾರ ತಪ್ಪುವದಿಲ್ಲ. ವಿಚಾರ....ವಿಚಾರ... ವಿಚಾರ...

ಆದರೂ ಯಾವ ವಿಚಾರದಿಂದ ಏನೂ ಆಗದು, ಆಗಿಲ್ಲ. ಏಕೆಂದರೆ ಮನುಷ್ಯನ ಬುದ್ಧಿ ವಿಚಾರ ಶಕ್ತಿಗಿಂತ ಭಿನ್ನ. ನಾವಿರಾರು ಲಕ್ಷಾವಧಿ ಜನರ ಕ್ರಿಯೆ, ಪ್ರತಿಕ್ರಿಯೆಗಳು ವ್ಯಕ್ತಿಯ ಬುದ್ಧಿಯ ಮೇಲೆ ಅಪ್ಪಳಿಸಿದಾಗ ಅದು ತನಗಿಷ್ಟ ಬಂದ ಕನಗೆ ಸೂಕ್ತಕಂಡ ದಿಸೆಯಲ್ಲಿ ಹೊರಳುತ್ತದೆ. ಅಂತೆಯೇ ಅದರ ದಾರಿಯನ್ನು ಗೊತ್ತುಹಿಡಿಯಲು ಅಸಾಧ್ಯ.

ಅದರಲ್ಲಿಯೂ ನಾನು ಹುಚ್ಚಿ.

ಗಂಡಸು ಎನ್ನುವ ಮಾಲೆಯಲ್ಲಿ ಕುಲಕರ್ಣಿಯವರನ್ನೂ ಪೋಣಿಸಿದಾಗ ರಂಗನಿಗಿಂತ ಅವರಲ್ಲಿ ಯಾವ ಭಿನ್ನತೆಯೂ ಕಾಣದು. ರಂಗನು ಸಿನೇಮಾದ ವಿಷಯ ಮಾತನಾಡುತ್ತಿದ್ದರೆ ಕುಲಕರ್ಣಿಯವರು ಪುರಾಣದ ವಿಷಯ ಹೇಳುತ್ತಾರೆ. ರಂಗ ಸುಖಮಯವಾದ ರಸಜೀವನದಲ್ಲಿ ಎಳೆಯುತ್ತಿದ್ದರೆ ಕುಲಕರ್ಣಿಯವರು ಎಲ್ಲ ಜಗವನ್ನು ಮರೆಸುವ ವೇದಾಂತದತ್ತ ಎಳೆಯುತ್ತಾರೆ. ರಂಗನ ಮಾತುಗಳಲ್ಲಿ ಮಾದಕ ಮಾಧುರ್ಯ ಕುಲಕರ್ಣಿಯವರ ಸ್ನಿಗ್ಧ ಸತ್ಯತೆಯಲ್ಲಿ ಇಲ್ಲದ್ದು ನಿಜವಾದರೂ ಅವರ ಮಾತುಗಳಲ್ಲಿ ಕೂಡ ಆಕರ್ಷಣೆಯಿದೆ.

" ಸುಮಿತ್ರಾ ಎಲ್ಲವೂ ಕ್ಷಣಿಕವಾದ ಈ ಜಗದಲ್ಲಿ ಯಾವ ಸುಖಕ್ಕಾಗಿ ನಾವು ದುಃಖಪಟ್ಟುಕೊಳ್ಳಬೇಕು ? ಎನ್ನುವ ಕುಲಕರ್ಣಿಯವರ ಪ್ರಶ್ನೆಗಿಂತ ರಂಗನ—

"ನಿಮ್ಮ ಸುಖದ ಅಮೃತದ ಬಟ್ಟಲು ತುಂಬಿ ಅಂಗೈಯಲ್ಲಿರುವಾಗ ಅದನ್ನು ಬೀಸಾಡುವ ಮೂರ್ಖತನವನ್ನು ನಾವೇಕೆ ಮಾಡಬೇಕು ?" ಎನ್ನುವ ಪ್ರಶ್ನೆ ಹೆಚ್ಚು ಹಿತಕಾರಕವಾದುದು ನಿಜ.

ಬಾಳಬಯಸುವವರಿಗೆ ಕುಲಕರ್ಣಿಯವರ ಮಾತಿಗಿಂತ, ವಿಚಾರಕ್ಕಿಂತ ರಂಗನ ವಿಚಾರ, ಮಾತು ಹಿತಕರವೆನ್ನಿಸುತ್ತದೆ.

ಕುಲಕರ್ಣಿಯವರ ಸನ್ನಿಧಾನಕ್ಕಿಂತ ರಂಗನ ಬಳಿಯಲ್ಲಿ ನಾನು ಅನಂತ ಸುಖವನ್ನನುಭವಿಸಿರುವೆ ನಿಜ. ಆತನ ಮಾತಿನಿಂದ ಆತನ ಕೃತಿಯಿಂದ ಆತನ ನಗೆಯಿರಿದ ನಾನು ಆತನಿಗಾಗಿ ಹುಚ್ಚಾಗಿದ್ದೆ. ಆತ ಹೇಳಿದ ಯಾವ ಮಾತೂ ಸತ್ಯವೆನ್ನಿಸುತ್ತಿತ್ತು.

ಆದರೆ ಆದರ ಪರಿಣಾಮ....?

ಹೊಟ್ಟೆಯ ಹೆತ್ತಕರಳಿನ ನೆತ್ತರದಲ್ಲಿ ರಕ್ತರಂಜಿತವಾದ ಈ ಹಸ್ತ...

ಆದರೆ ಕುಲಕರ್ಣಿಯವರ ಸನ್ನಿಧಾನದಲ್ಲಿ ಹೆದರಿಕೆಯೆಂಬುದಿಲ್ಲ. ಯಾವಾಗಲೂ ಅಲ್ಲಿ ನೆಲಸಿದ್ದುದು ಶಾಂತಿ. ಭಯ ದುಃಖ ಮನಃ ಕ್ಲೇಶ ಎಲ್ಲವೂ ಅವರ ಮುಖ ನೋಡಿದ ಮರುಕ್ಷಣದಲ್ಲಿ ಮಾಯವಾಗುತ್ತದೆ. ಅವರ ಮುಖದಲ್ಲಿ ನೆಲಿಸಿದ ಗಾಂಭೀರ್ಯ ಯಾವಾಗಲೂ ಅಭಯದಾನ ಮಾಡುತ್ತದೆ.

ಗರ್ಭಗುಡಿಯನ್ನು ಸೇರಿ ಹಸನ್ಮುಖದ ದೇವನ ಸನ್ನಿಧಾನದಲ್ಲಿ ಕುಳಿತಾಗ ದೊರೆಯುವ ಶಾಂತಿ ಮನಸ್ಸ್ವಾಸ್ಥ್ಯ ಒಂದು ಬಗೆಯ ಭವ್ಯ ಭಯಮಿಶ್ರಹಿತ ವಾತಾವರಣ ಕುಲಕರ್ಣಿಯವರ ಆಶ್ರಯದಲ್ಲಿ ಅವರ ಜೊತೆಯಲ್ಲಿ ದೊರೆಯುತ್ತದೆ.

ರಂಗನಲ್ಲಿದ್ದುದು ಕುಲಕರ್ಣಿಯವರಲ್ಲಿಲ್ಲ. ಕುಲಕರ್ಣಿಯವರಲ್ಲಿದ್ದುದು ಆದೆಂದೂ ರಂಗನಲ್ಲಿ ದೊರೆಯಲು ಸಾಧ್ಯವಿಲ್ಲ.

ರಂಗನಲ್ಲಿದ್ದುದು ಮದ, ಕಾಮ.......ದೈಹಿಕ ಸುಖ....

ಕುಲಕರ್ಣಿಯವರಲ್ಲಿದ್ದುದು ಅಭಯ...

ಅವರ ಅಭಯದಿಂದಲೇ ನಾನು ಬಾಳಿದೆ. ಬಾಳುತ್ತಿರುವೆ ಅವರು ಮನಸ್ಸು ಮಾಡಿದರೆ ಬಾಳಿಸಲೂಬಹುದು.

ಅವರ ಮನ.......

ಅಹುದು ಅವರ ಮನ ಎಲ್ಲರಂತಹ ಮನವಲ್ಲ. ಹೆಣ್ಣನ್ನು ಕಂಡಾಗ ಅದಕ್ಕಾಗಿ ಆಶಿಸಿ ಬಾಯಿ ಚಪ್ಪರಿಸುವ ಗಂಡಸು ಅವರಲ್ಲ. ಅವರ ಕೋಣೆಯಲ್ಲಿ ಒಂದೇ ಕೋಣೆಯಲ್ಲಿ ಅಖಂಡವಾಗಿ ಹಗಲು ರಾತ್ರಿ ಗಾಳಿ ಚಳಿಯಲ್ಲಿ ಕತ್ತಲು ಬೆಳದಿಂಗಳಲ್ಲಿ ವಸಂತ ಶಶಿರಗಳಲ್ಲಿ ನಾನು ದಿನ ಕಳೆದಿದ್ದೇನೆ. ನಾನು ಬಂದಾಗ ಬಸಿರಿನಿಂದ ಬಣ್ಣ ಬದಲಾಗಿ ಹೊಸ ಮೋಹಕತೆ, ಆಕರ್ಷತೆ ಮುಖದಲ್ಲಿ ಮಿನಗುತ್ತಿತ್ತು. ಆದರೆ ಆ ಮೋಹ ಕತೆ ಅವರನ್ನು ಮೋಹಿಸಲಿಲ್ಲ. ಆಕರ್ಷಣೆ ಅವರನ್ನು ಆಕರ್ಷಿಸಿರಲಿಲ್ಲ.

ಅವರು ತಮ್ಮದೇ ಆದ ರೀತಿಯಲ್ಲಿ ಯಾವ ರೀತಿಯಿಂದಲೂ ನನಗೆ ನೋವಾಗದಂತೆ, ಯಾವ ರೀತಿಯಿಂದಲೂ ನಾನು ನೊಂದುಕೊಳ್ಳದಂತೆ, ಯಾವ ಸಂಶಯಕ್ಕೂ ಆಸ್ಪದ ಕೊಡದ ರೀತಿಯಲ್ಲಿ ಇರುತ್ತಿದ್ದರು.

ಆದರೂ ನಾನು ಮಾತ್ರ ಅವರಿಗಾಗಿ ವಿಚಾರಿಸುತ್ತಿದ್ದೆ. ವಿಚಾರಿ ಸುತ್ತಿರುವೆ.

" ಅವರೇ ನನ್ನ ಪತಿಯಾಗಿ ದೊರೆತರೆ....? ಎಂದು. "

ಇದು ಅವಿಚಾರ

ಅದು ನನಗೂ ಗೊತ್ತಿದೆ.

ಅವಿಚಾರವಾದರೂ ವಿಚಾರವೇ ಅಲ್ಲವೆ? ಮನುಷ್ಯನ ಮನ ಜಾಗೃತಾ ವಸ್ಥೆಯಲ್ಲಿ ಅದೆಂದೂ ಶೂನ್ಯವಾಗಿರುವದಿಲ್ಲ. ಒಂದಿಲ್ಲೊಂದು ವಿಚಾರ ಮನವನ್ನು ತುಂಬಿರುತ್ತವೆ. ಒಂದು ವಿಚಾರವನ್ನು ಹೊರದೂಡಬೇಕಾ ದರೆ ಮತ್ತೊಂದು ವಿಚಾರವನ್ನು ಆ ಸ್ಥಾನಕ್ಕೆ ತಂದಿಡಲೇಬೇಕು. ನನಗೆ ಬೇಡವಾದ ವಿಚಾರವನ್ನು ಹೊರದೂಡುವಾಗ ನನಗೆ ಬೇಡವಾಗದ ಒಂದು ವಿಚಾರ ಮನವನ್ನು ಆಕ್ರಮಿಸುತ್ತಿತ್ತು.

ನನಗೆ ಬೇಡವಾಗದ ವಿಚಾರ....!

ಆಹುದು. ನನಗೆ ಬೇಡವಾಗದ ವಿಚಾರ. ಅರ್ಥಾತ ನನಗೆ ಪ್ರಿಯವೆನ್ನಿಸುವ ವಿಚಾರ.

ರಾವಣನ ಅಶೋಕ ವನದಲ್ಲಿ ಕುಳಿತ ಸೀತೆ ಸರ್ವಕಾಲವೂ ರಾಮನ ವಿಚಾರವನ್ನೇ ಮಾಡುತ್ತಿದ್ದಳಂತೆ. ಏಕೆಂದರೆ ರಾಮನ ವಿಚಾರವನ್ನುಳಿದು ಇನ್ನಾವ ವಿಚಾರವೂ ಸುಳಿಯದಿರಲೆಂದು.

ನಾನು ಕೂಡಾ ರಾವಣನಂತಹ ರಂಗನ ವಿಚಾರ ಸುಳಿಯದಿರಲೆಂದು ಆಗೀಗ ರಾಮನಂತಹ ಕುಲಕರ್ಣಿಯವರ ವಿಚಾರ ಮಾಡುತ್ತಿದ್ದೆ.

ರಾಮನಂತಹ ಕುಲಕರ್ಣಿ........?

ನಾನು ಸೀತೆ........?

ಆ ತಾಯಿಯ ಉಗುರಿನಲ್ಲಿ ತಪ್ಪಿ ಉಳಿದ ಕ್ಷುದ್ರ ರೇಣುವಿನಷ್ಟು ಕಸದ ಯೋಗ್ಯತೆ ಕೂಡ ನನ್ನಲ್ಲಿಲ್ಲ.

ಆ ಮಹಾತಾಯಿ ಎಲ್ಲಿ...?

ಈ ಮಹಾಪಾಪಿ ಎಲ್ಲಿ....?

ಸುಖಪಡುವ ಯೌವನಾವಸ್ಥೆಯಲ್ಲಿಯೇ ಪತಿಯ ನೆರಳಾಗಿ ಅವನು ತುಳಿದ ಮುಳ್ಳನ್ನು ಹೂವಿನಂತೆ ತಾನೂ ಮೆಟ್ಟಿ ನಡೆದಳು....ತಾನು ಪತಿವ್ರತೆಯಾದರೂ ತನ್ನಿಂದಾಗಿ ತನ್ನ ಪತಿ ಜನರಿಂದ ಕುಹುಕುನುಡಿ ಕೇಳಬೇಕಾಗುವದು ಎಂಬುದನ್ನು ಅರಿತು ತನ್ನನ್ನೇ ತಾನು ಮಣ್ಣಿನ ಪಾಲು ಮಾಡಿಕೊಂಡ ಮಹಾತಾಯಿ ಅವಳು.

ದೈಹಿಕ ಸುಖಕ್ಕಾಗಿ ನನ್ನನ್ನು ಕಂಡ ಗಂಡಸಿನ ಕೈಯಲ್ಲಿ ಕೊಟ್ಟುಕೊಂಡ ಪಾಪಿ—ಮಹಾಪಾಪಿ....ನಾನು...

ನಾನು ಮಹಾಪಾಪಿ....

ಮಹಾಪಾಪಿಯಲ್ಲಿ ಒಳ್ಳೆಯ ವಿಚಾರವಿರಲಿಕ್ಕಿಲ್ಲ. ಆದರೆ ಬರಲಿಕ್ಕಿಲ್ಲವೆ...? ಬರಕೂಡದೆ...? "ಪಾಪಿಗೆ ತನ್ನ ಪಾಪವನ್ನು ಕಳೆದುಕೊಳ್ಳಲು

ಸರ್ವಕಾಲವೂ ಅವಕಾಶವಿದೆ” ಎಂದು ಕುಲಕರ್ಣಿಯವರು ಹೇಳುವ ದಿಲ್ಲವೇ...?

ಅವರು ಹೇಳಿದ್ದು ನನ್ನನ್ನು ಉದ್ದೇಶಿಸಿ ಅಲ್ಲದಿದ್ದರೂ ನನಗೆ ಅದನ್ನು ಅನ್ವಯಿಸಿಕೊಳ್ಳಲು ಬಾರದೇಕೆ....?

ಪಾಪವನ್ನು ಕಳದುಕೊಳ್ಳಬೇಕಾದರೆ ಪುಣ್ಯ ಮಾಡಬೇಕು. ಪುಣ್ಯ ಮಾಡುವದೆಂದರೆ ಕೆಡಕು ಕೆಲಸ ಮಾಡದಿರುವದು. ಕೆಡಕು ವಿಚಾರಗವನ್ನು ಮನದಲ್ಲಿ ತಾರದಿರುವದು.

ಕೆಟ್ಟ ಕೆಲಸವನ್ನು ಮಾಡದೇ ಇರಬಹುದು. ಆದರೆ ಬರುವ ಕೆಡಕು ವಿಚಾರವನ್ನು ತಡೆ ಹಿಡಿಯುವದು ಹೇಗೆ...?

“ಒಳ್ಳೆಯ ವಿಚಾರಗಳನ್ನೇ ನಾವು ಮಾಡತೊಡಗಿದರೆ ಕೆಟ್ಟ ವಿಚಾರ ಗಳು ಬರುವದೇ ಇಲ್ಲ” ಎಂದು ಕುಲಕರ್ಣಿಯವರು ಹೇಳುತ್ತಾರೆ.

ಅದುವೇ ಸೀತಾದೇವಿ ಆಚರಿಸಿದ ರೀತಿ.

ಅದೇ ದಾರಿಯಿಂದ ನಾನು ಸಾಗಬೇಕು.

ಆದರೆ ಸೀತಾದೇವಿಗೆ ತನ್ನವನೇ ಪತಿಯಿದ್ದ. ತನ್ನ ಜೀವನವನ್ನೆಲ್ಲ ಆತನ ಜೀವನದಲ್ಲಿ ಲೀನಗೊಳಿಸಿ ಸೀತೆಯು ಪತಿಯ ಅರ್ಧ ಭಾಗವಾಗಿ ದ್ದಳು. ಆದರೆ ನನಗೆ ಪತಿ ಇಲ್ಲ. ನಾನಾರ ಜೀವನದಲ್ಲಿ ನನ್ನನ್ನು ಲೀನಗೊಳಿಸಬೇಕು—? ನನಗೊಬ್ಬ ಪತಿಯಿದ್ದರೆ....?

ನನಗೊಬ್ಬ ಪತಿ ದೊರಕಿದರೆ...?

ಪತಿ ನನಗೂ ದೊರಕಿದರೆ...!

ಪತಿಯ ಪತ್ನಿಯಾಗುವ ಯೋಗ್ಯತೆ ನನ್ನಲ್ಲಿ ಎಲ್ಲಿ? 'ನಾನು ಪತಿತೆ. ನನ್ನ ಜೀವನ ಹಾಳಾಗಿದೆ. ಹಾಳಾದ ಜೀವನದ ಸ್ತ್ರೀ ಪತ್ನಿಯಾಗಲು ಅನರ್ಹಳು....?

ಹಾಗಾದರೆ ನನ್ನ ಭವಿತವ್ಯವೇನು....?

ಸಾವಿರ ಜನರು ಸಾಗುವ ದಾರಿಯಾಗಬೇಕೆ ನಾನು...? ಆದರಿಂದ ನನ್ನ ಉದ್ಧಾರವಾಗುವದು ಹೇಗೆ? ಸಾಯುವ ಕ್ಷಣದಲ್ಲಿ ಕೂಡ ಒಂದೇ

ಒಂದು ಪುಣ್ಯನಾಮದಿಂದ ಪಾಪಿಗೆ ಸದ್ಗತಿಯಾಯಿತಂತೆ! ಸಾಯುವ ವರೆಗೆ ಬರುವ ಅನಂತ ಕ್ಷಣದವರೆಗೆ ಅವ್ಯಾಹತವಾಗಿ ಪುಣ್ಯನಾಮ ಸ್ಮರಣೆ ಮಾಡ ಲಿಚ್ಛಿಸುವ ನನ್ನ ಉದ್ಧಾರವಾಗದೆ...?

"ಏಕಾಗಲಾರದು....?" ಎಂದು ಕುಲಕರ್ಣಿಯವರು ಕೇಳುತ್ತಾರೆ.

ಆದರೆ ಉದ್ಧರಿಸುವರಾರು....? ಈಸು ಬಾರದೆ ನೀರಿನಲ್ಲಿ ಮುಣುಗು ತ್ತಿರುವ ವ್ಯಕ್ತಿಗೆ ಯಾರೊಬ್ಬರ ನೆರವು ಅಗತ್ಯ

ನಾನು ಕೂಡ ಈಸು ಬಾರದೆ ಸಂಸಾರ ಸಾಗರದಲ್ಲಿ ಮುಳುಗುತ್ತಿರುವೆ, ಯಾರೊಬ್ಬರು ಬಂದು ನನ್ನನ್ನು ಕೈಕೊಟ್ಟು ಮೇಲಕ್ಕೆತ್ತಿಕೊಳ್ಳಬೇಕು. ಇಲ್ಲ ದಿದ್ದರೆ ಈ ಅನಂತ ಸಾಗರದಲ್ಲಿ ಮುಳುಗಿ ಹೇಳ ಹೆಸರಿಲ್ಲದವಳಾಗುವೆ.

ಯಾರು ಕೈ ಕೊಡುವವರು....? ಯಾರು ನನಗೆ ಸಹಾಯ ಸಲ್ಲಿಸು ವವರು.......? ಯಾರಿಂದ ನಾನು ಮರಣದ ಹಿಡಿತದಿಂದ ಮುಕ್ತಳಾಗ ಬಹುದು..........?

ಯಾರು....? ಯಾರು...?

ಯಾರೂ ಇಲ್ಲವೆ....?

"ಪರದೇಶಿಗೆ ಪರಮಾತ್ಮನ ಸಹಾಯ" ಎಂದು ಕುಲಕರ್ಣಿಯವರು ಹೇಳುತ್ತಾರೆ.

ನಾನೂ ಪರದೇಶಿ, ನನಗಾರೂ ಇಲ್ಲ. ಯಾರಾದರೂ ಒಬ್ಬರು ಇದ್ದರೆ ನನ್ನ ಅವಸ್ಥೆ ಈ ಮಟ್ಟಕ್ಕೆ ಬರುತ್ತಿತ್ತೆ....?

ಹೆತ್ತವರು ತಂದೆ-ತಾಯಿಗಳಲ್ಲ, ಬೆಳೆಸಿದವರು ಬಂಧುಗಳಲ್ಲ, ಏನೊ ಬಿಡಲಾರದ ಕರ್ತವ್ಯವೆಂದು ಎಲ್ಲರೂ 'ಕರ್ಮ' ಮಾಡುತ್ತಾರೆ, ನಿಜ ವಾದ ತಂದೆ-ತಾಯಿ-ನಿಜವಾದ ಬಂಧು ಅವನೆ. ಅವನೆ...?

ಅವನೇ ಪರಮಾತ್ಮ, ಅವನೇ ಸರ್ವಸ್ವ.

ಅವನೇ ನನಗೆ ನೆರವು ನೀಡಬೇಕು. ಅವನೇ ತಂದೆ-ತಾಯಿಯಾಗಿ ಕಾಯಬೇಕು....ಅವನೇ ನನಗೆ ಬೇಕಾದುದನ್ನು ಕೊಡಬೇಕು....

ನಿಜ. ಆದರೆ ನನಗೆ ಬೇಕಾದುದೇನು....?

ಅದುವೇ ನನಗೆ ತಿಳಿಯದಾಗಿದೆ ! ನನಗೇನು ಬೇಕೆನ್ನುವದನ್ನು ನಾನೇ ಅರಿಯದವಳಾಗಿರುವೆ ಏನು ಬೇಕೆನ್ನುವದನ್ನು ಅರಿಯದ ನಾನು "ಕೊಡು" ಎಂದು ಕೇಳುತ್ತಿರುವೆ.

"ನೀಡು" ಎಂದು ಉಡಿ ಒಡ್ಡುತ್ತಿರುವೆ.

ನನಗಿಂದು ಬೇಕಾದುದು ಪತಿಯೇ....?

ತಾರುಣ್ಯದಲ್ಲಿ ಕಾಲಿಟ್ಟ ಸ್ತ್ರೀಗೆ ಬೇಕಾದುದು ಸಂಸಾರ, ಅಥವಾ ಪತಿ. ಪತಿಯಿಲ್ಲದೆ ಈ ರಾಕ್ಷಸಿ ಜಗದಲ್ಲಿ ಸಂರಕ್ಷಣೆ ಇಲ್ಲ. ಸ್ತ್ರೀ ಸುರಕ್ಷಿತಳಾಗಿ ಬಾಳಬೇಕಾದರೆ ಅವಳನ್ನು ಕಾಯುವ ವ್ಯಕ್ತಿ ಅರ್ಥಾತ್ ಪತಿ ಬೇಕು

ಹಾಗಿದ್ದರೆ ನನಗೆ ಬೇಕಾದವರು ಪತಿಯೆ....?

ಪತಿಯೇ ನನಗೆ ಬೇಕಾದುದಾದರೆ ಯಾರು 'ಪತಿ' ಎಂದು ಬೇಕು....?

ರಂಗನೆ...?

ಛೆ....ಅವನ ನೆನಹು ಬೇಡ. ಇದ್ದ ಅವನ ನೆನಹು ಕೂಡ ಕಿತ್ತಿ ಬೀಸಾಕಿದೆ. ಇಂತಹ ಪತಿ ದೊರೆತ ಸ್ತ್ರೀ ಪೂರ್ವಜನ್ಮದಲ್ಲಿ ಅಪಾರ ಪಾಪ ಮಾಡಿರಬಹುದು. ಅವನಾಗಿ ಕಾಲು ಬಿದ್ದು ಬಂದರೂ ತಿರುಗಿ ಕೂಡ ನೋಡುವದು ಬೇಡ...ವಿಶ್ವಾಸ ಘಾತಕಿ....

ಹಾಗಾದರೆ.......ರಂಗನಲ್ಲದಿದ್ದರೆ ನನಗೆ ಗೊತ್ತಿದ್ದವರೆಂದರೆ—

ಕುಲಕರ್ಣಿಯವರು !

ಕುಲಕರ್ಣಿ....ಅವರು ಸಾಧುಗಳು ಅಲ್ಲದೆ ನನ್ನ ಚರಿತ್ರೆಯನ್ನು ಬಲ್ಲ ವರು. ಯಾವ ಗಂಡಸು ಕೆಟ್ಟ ಹೆಂಗಸನ್ನು ವಿವಾಹವಾಗಲಿಕ್ಕೆ ಒಪ್ಪು ವರು....? ಪುನರ್ವಿವಾಹವು ಸುಧಾರಣೆಯ ಪ್ರಗತಿಗಾಮಿತ್ವದ ಬಹಿರಂಗದ ಚಿಹ್ನವೆಂದು ಯಾರು ಒಪ್ಪಬಹುದು. ಆದರೆ........ದಾರಿಬಿಟ್ಟ ಹೆಂಗಸಿನ ಜೊತೆಗೆ ವಿವಾಹ....?

ಯಾವ ಗಂಡಸೂ ಒಪ್ಪಲಾರ.

ನನ್ನ ಪೂರ್ವ ಚರಿತ್ರೆಯನ್ನು ಅರಿಯದ ಯಾವನೊಬ್ಬ ಗಂಡಸು ನನ್ನ ಜೊತೆಗೆ ವಿವಾಹಕ್ಕೆ ಸಿದ್ಧನಾಗಬಹುದು. ಆದರೆ ಒಂದಿಲ್ಲೊಂದು ದಿನ ಭದ್ರವಾಗಿ ಕಾಯ್ದಿರಿಸಿದ ಅಂತರಂಗ ಬಹಿರಂಗವಾದರೆ...?

ಅಂದಿಗೆ ವೈವಾಹಿಕ ಜೀವನದ ಅಂತವೆಂದು ತಿಳಿದುಕೊಳ್ಳಬೇಕು.

ಪತಿವ್ರತೆಯಾದರೂ ಪರಗ್ರಹದಲ್ಲಿದ್ದಳೆಂದು ಸೀತಾದೇವಿಯನ್ನು ಅವತಾರಿ ರಾಮಚಂದ್ರ ಅಗ್ನಿಗೆ ಅರ್ಪಿಸಿದ. ದೇವ ದೇವತೆಗಳ ವಿಚಾರವೇ ಗಂಡು ಹೆಣ್ಣಿನ ಸಂಬಂಧದಲ್ಲಿ ಇಂತಿರುವಾಗ ಕ್ಷುಲ್ಲಕ ಮನುಷ್ಯರಂತಿರಬೇಕು....?

ಹಾಗಿದ್ದರೆ ನನ್ನ ಅವಸ್ಥೆ ಏನು...? ಬದುಕಿ ಸಂಸಾರ ಮಾಡುವದು ನನ್ನ ಹಣೆ ಬರಹದಲ್ಲಿ ಬರೆದಿಲ್ಲವೆ...? ಸಂಸಾರ ಮಾಡುವದು ಸಾಧ್ಯವಿಲ್ಲದಾಗ ಬದುಕಿಯಾದರೂ ಮಾಡುವದೇನು ..? ನಾನು ಬದುಕುವದು ಇನ್ನೊಬ್ಬರಿಗೆ ಭಾರವಾಗಿಯೇ ಅಲ್ಲವೆ ? ಯಾರಬ್ಬರ ಅನ್ನ ತಿಂದು ಮೈ ಬೆಳೆಸಿಕೊಳ್ಳುತ್ತ ಬಿದ್ದಿರಬೇಕೆ ? ಜಗತ್ತಿಗೆ ಭಾರವಾಗಿ ಇನ್ನೊಬ್ಬರಿಗೆ ಕಷ್ಟಕೊಡುತ್ತ ಬಾಳುವದಕ್ಕಿಂತ ಬಾಳು ಮುಗಿಸಿದರೇನು ಕಷ್ಟ...? ಯಾರಿಗಾಗಿ ಯಾರೂ ಬದುಕಿ ಬಾಳುವೆ ಮಾಡುವದಿಲ್ಲ ನಿಜ. ಆದರೆ ಯಾರೊಬ್ಬರು ಬದುಕುವದಕ್ಕೆ ಮತ್ತೊಬ್ಬರ ನೆರವು ಅವಶ್ಯ ಒಂಟಿಯಾಗಿ ಬಾಳುವವರು ಇಲ್ಲವೆಂದಲ್ಲ. ಆದರೆ ಅದು ಬದುಕು ಅಲ್ಲ ಅಥವಾ ಅವರು ಮನುಷ್ಯತ್ವದ ಮೇರೆ ಮೀರಿದವರು....

ಸಾವಿಗೆ ಹೆದರಿ ಹೇಗಾದರೂ ಬದುಕಿಯೇ ತೀರಬೇಕೆಂಬ ಹಟದಿಂದ ಬದುಕುತ್ತಾರೆ. ಆದರೆ ಅದು ಬಾಳುವ ದಾರಿಯಲ್ಲಿನ ಬದುಕು ಅಲ್ಲ. ಮಸಣದಲ್ಲಿ ಮನೆ ನಿರ್ಮಿಸಿಕೊಂಡ ಭೂತದ ಬದುಕು.

ಒಂಟಿಯಾಗಿ ಬಾಳುವದು ಭೂತದ ಬದುಕಾದರೆ ಕಾಮಿನಿಯ ಬದುಕು ಎಂತಹದು ?

ಕಾಮಿನಿ ...

ಅವಳೇ ಹೇಳುತ್ತಾಳೆ— 'ತನ್ನ ಬದುಕಿಗೊಂದು ಗೊತ್ತುಗುರಿ ಇಲ್ಲ' ಎಂದು. ಗೊತ್ತು ಗುರಿಯಿಲ್ಲದಾದರೆ ಬದುಕಬೇಕಾದರೂ ಏಕೆ...?

" ಸಾಯಲಿಕ್ಕಾಗದೆಂದು, ಸಾಯಬಾರದೆಂದು ಬದುಕುವವರೆಲ್ಲರೂ ನನ್ನಂತೆ ಬದುಕುತ್ತಾರೆ ಬದುಕಬೇಕಾಗುತ್ತದೆ...." ಎಂದೂ ಹೇಳುತ್ತಾಳೆ.

ಸಾಯಬಾರದೆಂದು ಬದುಕುವದಾದರೆ ನಾನುಕೂಡ ಅವಳಂತೆಯೇ ಬದುಕಬೇಕು. ಅವಳ ದಾರಿಯೇ ನನ್ನ ದಾರಿಯಾಗಬೇಕು.

ಆದರೆ ಅವಳ ದಾರಿ ಎಂತಹದು....? ಯಾವ ರೀತಿಯಲ್ಲಿ ಅವಳು ಬದುಕುತ್ತಿರುವಳು...? ಬದುಕಿನ ಸಾಧನವೆಂದು ನರ್ಸ ಕೆಲಸ ಮಾಡುತ್ತಿದ್ದರೂ ಆದರಿಂದಲೇ ಅವಳು ಬದುಕುತ್ತಿರುವಳೇ...?

ಆದರೆ ಇದನ್ನು ಕೇಳುವದಾದರೂ ಹೇಗೆ....? ಆಗೀಗ ಅವಳ ಮುಖ ದಿಂದ ಅಪ್ಪಿತಪ್ಪಿ ಹೊರಟ ಮಾತುಗಳಿಂದಾದ ಪರಿಚಯು ಅಲ್ಪ

ಅವಳಾರು ಎನ್ನುವ ಪರಿಚಯ ಅಂತರಂಗದ ಪರಿಚಯ ನನಗಾಗಿರ ದಿದ್ದರೂ ಅವಳ ಹೃದಯ ಪರಿಚಯ ಮಾತ್ರ ನನಗಿದೆ. ಅವಳ ಹೃದಯ ತಾಯಿಯ ಹೃದಯ ಅದೇ ಕರುಣೆಯಿಂದ ಅದೇ ಮಮತೆಯಿಂದ ನನ್ನನ್ನು ನೋಡುತ್ತಾಳೆ.

' ಕಂಡ ಗಂಡಸಿಗೆ ಬಸಿರಾದ ಗಯ್ಯಾಳಿ ' ಎಂದು ತಾಯಿ ಕೂಡ ದೂಡಿದಾಗ.

" ಇದು ಅಂತಹ ಮಹಾಪರಾಧವೇ ಅಲ್ಲ, ನಡೆಯುವಾಗ ಎಡುವಿದು ಪಾಪವಲ್ಲ ಇದು ಈ ಜಗದಲ್ಲಿ ನಡೆಯತಕ್ಕದ್ದು " ಎಂದು ಗುಡ್ಡದಂತಹದೆ ಸಂಗತಿಯನ್ನು ಹುಲ್ಲಿಗಿಂತ ಕೀಳು ಮಾಡಿ ನನ್ನನ್ನು ತನ್ನ ಒಡಹುಟ್ಟಿದವ ಳಂತೆ ಕಾಪಾಡಿದಳು. ಯಾವ ರೀತಿಯಲ್ಲಿಯೂ ನಾನು ಕಷ್ಟಿಯಾಗದಂತೆ ನೋಡಿಕೊಳ್ಳುತ್ತಿದ್ದಳು.

" ಮನುಷ್ಯರೆನ್ನಿಸಿಕೊಂಡು ಬಾಳುವವರೆಲ್ಲರೂ ಮಾಡಬೇಕಾದ ಕರ್ತ ವ್ಯವೇ ಇದು. ನೆರೆ ಹೊರೆಯವರಿಗೆ ನೆರವು ನೀಡುವುದೇ ಧರ್ಮ. ಧರ್ಮ-ದಿಂದಿರಬೇಕಾದನೇ ಮನುಷ್ಯ. ನಾನು ನನ್ನ ಧರ್ಮವನ್ನು ಆಚರಿಸಿದ್ದೇನೆ. ಧರ್ಮ ಸಮಾಜದ ಸ್ಥಾನಕ್ಕೆ ವ್ಯಕ್ತಿಯ ಸ್ಥಾನಕ್ಕೆ ಅಲ್ಲದೆ ವ್ಯಕ್ತಿಯ ಸ್ವಾರ್ಥ ಕ್ಕಲ್ಲ. ಕಷ್ಟಿಯಾಗಿ ಬಂದ ವ್ಯಕ್ತಿಯ ಕಡೆಗೆ ಕರುಣೆಯಿಂದ ನೋಡದ

ವ್ಯಕ್ತಿ ಸ್ವಾರ್ಥಿ. ಅಷ್ಟೇ ಅಲ್ಲ ಸಮಾಜ ಸ್ವಾಸ್ಥ್ಯವನ್ನು ಹಾಳು ಮಾಡುವ ಘಾತಕಿ, ದ್ರೋಹಿ ನನಗೆ ಘಾತಕಿಯಾಗಿ ಬದುಕುವದಿಲ್ಲ. ಇನ್ನೊಬ್ಬರ ಕತ್ತು ಕೊಯ್ದು ನನಗೆ ಏನನ್ನೂ ದೊರಕಿಸಬೇಕಿಲ್ಲ. ಅಲ್ಲದೆ ಯಾರಿಗೂ ಏನೂ ಸಿಕ್ಕುವದಿಲ್ಲ ಅಂತಹ ಕಾರ್ಯದಿಂದ." ಎಂದು ಕಾಮಿನಿ ಹೇಳು ವಾಗ ಇವಳು ನಿಜವಾಗಿಯೂ ಇರುವಳಾದರೂ ಯಾರು? ಎನ್ನಿಸುತ್ತದೆ.

ಕ್ರೂರತನದಿಂದ ಕೂಸಿನ ಕತ್ತನ್ನು ಹಿಚುಕುವ ಇವಳಿಂದಲೇ ಇಂತಹ ಮಾತುಗಳು ಹೊರಟಿವೆ. ಹೊರಡುತ್ತಿವೆ ಎಂದು ಭಾವಿಸುವದೂ ಕಠಿಣ. ಆದಕ್ಕೆ ಅವಳು ಹೇಳುವದು "ಮನುಷ್ಯನನ್ನು ಬದುಕಿಸುವ ದಕ್ಕಾಗಿ ಒಮ್ಮೊಮ್ಮೆ ಯಾವುದೊಂದು ಅವಯವವನ್ನು ಕಡಿದುಹಾಕ ಬೇಕಾಗುತ್ತದೆ ಅವಯವವನ್ನು ಕಡಿಯುವದು ಹೇಗೆ ಎಂದರೆ ವ್ಯಕ್ತಿಯೇ ಮರಣದ ಮುಖದಲ್ಲಿ ಮಾಯವಾಗುತ್ತಾನೆ ನೀರಿನ ಅವಶ್ಯಕತೆ ಬೆಳೆಯುವ ಬಳ್ಳಿಗೆ ಅಲ್ಲದೆ ಬೀಜಕ್ಕಲ್ಲ" ಎಂದು.

"ನೀರಿನ ಅವಶ್ಯಕತೆ ಬಳ್ಳಿಗೆ ಅಲ್ಲದೆ ಬೀಜಕ್ಕಲ್ಲ" ಎಂದು ಅವಳು ಹೇಳು ವದು ನಿಜ. ಬೀಜ ಸಸಿಯಾಗಿ ಬೆಳೆಯಬಹುದು. ಬೆಳೆಯದೆಯೂ ಇರಬಹುದು. ಅದು ಭವಿಷ್ಯದ ಗರ್ಭದಲ್ಲಿ ಅಡಗಿದ ಗೌಪ್ಯ. ಆದರೆ ಬೆಳೆಯುತ್ತಿರುವಸಸಿ ಕಣ್ಣೆದುರಿನ ಸತ್ಯ. ನೆರವು ಅದಕ್ಕೆ ಅವಶ್ಯ.

ನಾನು ಕಣ್ಣೆದುರಿನ ಸತ್ಯ, ಜೀವಂತ ವ್ಯಕ್ತಿ, ಜೀವಿಸುವ ವ್ಯಕ್ತಿ ನನಗೆ ನೆರವು ಅವಶ್ಯ. ಕಾಮಿನಿಯ ನೆರವಿನಿಂದ ನಾನು ಒಂದನ್ನು ಕಳೆದುಕೊಂಡರೂ ಹೊಸಬಾಳಾಗಿ ಬಾಳತೊಡಗಿರುವೆ. ಅಜ್ಞಾನದಿಂದಾ ಗಲಿ ಅಥವಾ ಮೋಸದಿಂದಾಗಲಿ ನನ್ನ ಸ್ತ್ರೀತ್ವಕ್ಕೆ ಭಂಗ ಬಂದಿತ್ತು. ಆದರೆ ಇಂದು ಅದರಿಂದ ಮುಕ್ತಳಾಗಿರುವೆ. ಇಂದು ನಾನು ಎಂದಿನಂತೆಯೇ ಎಲ್ಲರಂತೆಯೇ ಸ್ತ್ರೀ; ನನಗೂ ಬಾಳಬೇಕಾಗಿದೆ. ಬಾಳಬೇಕೆಂದವರಿಗೆಲ್ಲ ಬಾಳುವ ಅಧಿಕಾರವಿದೆ ಜಗದಲ್ಲಿ. ಈ ಜಗತ್ತು ಯಾರಸೊತ್ತೂ ಅಲ್ಲ. ವ್ಯಕ್ತಿ ಯಾರ ಹೇಳಿಕೆಯಿಂದ ಹುಟ್ಟುವದಿಲ್ಲ. ಯಾರೂ ಹೇಳಿದರೆಂದು ಸಾಯುವದೂ ಇಲ್ಲ. ಹುಟ್ಟು ಸಾವುಗಳ ಮೇಲೆಯೇ ಯಾರೊಬ್ಬರ ಅಧಿಕಾರ ನಡೆಯದಾಗ ಉಳಿದ ಜೀವನದಲ್ಲಿಯಾದರೂ ಏಕೆ ಇನ್ನೊಬ್ಬರ ಅಧಿಕಾರದ ಹೊರೆ ಹೊತ್ತುಕೊಂಡು ಬಾಳಬೇಕು...?

" ಹುಟ್ಟಿದಂದಿನಿಂದ ಸಾಯುವ ವರೆಗೆ ಮನುಷ್ಯ ಅಸ್ವತಂತ್ರ " ಎಂದು ಕಾಮಿನಿ ಹೇಳುತ್ತಾಳೆ.

" ಪಂಜರದಲ್ಲಿಯ ಗಿಳಿಯಷ್ಟೆ ಸ್ವತಂತ್ರ ಮನುಷ್ಯ " ಎಂದು ಕುಲ ಕರ್ಣಿಯವರೂ ಹೇಳುತ್ತಾರೆ.

ಹಾಗಾದರೆ ಮನುಷ್ಯ ಜೀವನದ ಉದ್ದೇಶವಾದರೂ ಏನು........? ಯಾವುದನ್ನು ಮಾಡಲೂ ಅಸಮರ್ಥ ಮನುಷ್ಯ ಏಕೆಂದರೆ ಅವನು ಅಸ್ವ ತಂತ್ರ. ಅಸ್ವತಂತ್ರತೆಯಿಂದ ಆತ ಬಾಳಬಯಸುವನಾದರೂ ಏಕೆ! 'ಹುಟ್ಟಿ ದ್ದಕ್ಕೆ ಬಾಳಬೇಕು.' ಎಂದು ಆತ ಬದುಕುತ್ತಿದ್ದರೆ ಆತ ಹುಟ್ಟುವನಾದರೂ ಏಕೆ....?

ನಾನು ಹುಟ್ಟಿದೆನಾದರೂ ಏಕೆ ? ಈ ಜಗದಲ್ಲಿ ಜನ್ಮತಾಳಿದ ನನ್ನಿಂದ ನನಗಾಗಿ ಏನನ್ನೂ ಮಾಡಿಕೊಳ್ಳುವ ಸಾಮರ್ಥ್ಯ ನನ್ನಲ್ಲಿಲ್ಲ. ನನ್ನ ಇಚ್ಛೆಗ ನುರೂಪವಾಗಿ ವರ್ತಿಸಲು ನನ್ನಿಂದ ಸಾಧ್ಯವಿಲ್ಲ. ನನಗೆ ಬಯಸಿದ್ದನ್ನು ದೊರ ಕಿಸಿಕೊಳ್ಳುವದಾಗುವದಿಲ್ಲ.

ನಾನು ತಂದೆತಾಯಿಗಳನ್ನು ಬಂಧು ಬಳಗದವರನ್ನು ಬಿಟ್ಟುಬಂದು ಸ್ವತಂತ್ರಳೆಂದು ಬಾಳುತ್ತಿರುವೆ. ನನ್ನ ಮನಕ್ಕೆ ಬಂದುದನ್ನು ನಾನು ಮಾಡು ವದಕ್ಕೆ ನನಗಾರೂ ಅಡ್ಡ ಬರಲಾರರು. ಆದರೂ ನನ್ನಿಂದ ಏನನ್ನೂ ಮಾಡಲು ಸಾಧ್ಯವಿಲ್ಲ.

ಏನನ್ನೂ ಮಾಡಲು ಸಾಧ್ಯವಿಲ್ಲದ ವ್ಯಕ್ತಿ ಬಾಳಬಾರದು. ಹುಟ್ಟಬಾ ರದು

ಆದರೆ ಅದುಕೂಡ ನಮ್ಮ ಕೈಯಲ್ಲಿ ಇಲ್ಲ. ನನ್ನ ಇಚ್ಛೆಯಾಯಿತೆಂದು ನಾನು ಅವತರಿಸಿದೆನೆ...? ಯಾರಿಗೆ ಬೇಕಿತ್ತು ಈ ಹಾಳು ಜೀವನ........?

ಏನಿದೆ ಈ ಜೀವನದಲ್ಲಿ ? ಏನೂ ಇಲ್ಲ... ಹಾಳು.... ಮರುಳುಗಾಡು

ಹಾಳು.... ಮರುಳುಗಾಡು.... ಮರಭೂಮಿ....

ನಾನೇ ನನ್ನ ಜೀವನಕ್ಕೆ ಹಾಳು. ಮರಳುಭೂಮಿ.... ಮರಳುಗಾಡು.... ಎಂದುಕೊಂಡರೆ ಕಾಮಿನಿ ಏನೆಂದುಕೊಳ್ಳಬೇಕು ತನ್ನ ಜೀವನಕ್ಕೆ...?

ಅವಳೇ ಆಗೀಗ ಹೇಳುವಂತೆ ಅವಳ ಜೀವನ "ಸ್ಮಶಾನ"ವಾಗಿದೆ.

ನನ್ನ ಜೀವನ ಮರಭೂಮಿಯು ಮಸಣ- ಮರಭೂಮಿಯಲ್ಲಿ ಏನೂ ಬೆಳೆಯುವದಿಲ್ಲ ಆದರೆ ಮಸಣದಲ್ಲಿ ಬೆಳೆದದ್ದೆಲ್ಲ ಮಣ್ಣಾಗುತ್ತದೆ ಭಸ್ಮವಾಗುತ್ತದೆ ಬೂದಿಯಾಗುತ್ತದೆ. ಮರು ಭೂಮಿಯಲ್ಲಿ ನೀರಿಲ್ಲ, ಹಸಿರಿಲ್ಲ, ಮನೆ ಇಲ್ಲ, ಮನುಷ್ಯರಿಲ್ಲ. ಆದರೆ ಮಸಣದಲ್ಲಿ ಎಲ್ಲವೂ ಇದೆ. ನೀರಿದೆ, ಹಸಿರಿದೆ, ಹೂಗಳಿವೆ, ಮನುಷ್ಯರಿದ್ದಾರೆ. ಆದರೆ ಯಾರ ಉಪಯೋಗವೂ ಇಲ್ಲ. ಯಾವುದರ ಉಪಯೋಗವೂ ಇಲ್ಲ. ನೀರಡಿಸಿದಾಗ ಮಸಣದ ನೀರು ಕುಡಿಯಲು ಸಾಧ್ಯವಿದ್ದರೂ ಕುಡಿಯುವರೆ...? ಹೂ ತಲೆಯಲ್ಲಿ ಮುಡಿಯಬಹುದಾದರೂ ಮಸಣದಲ್ಲಿಯ ಹೂ ಯಾರಾದರೂ ಮುಡಿಯುವರೆ...? ಶವವನ್ನು ಹೊತ್ತು ತಂದ ಮನುಷ್ಯರು ಮಸಣದಲ್ಲಿ ಕೂಡಿದಾಗ ಏನನ್ನು ಮಾಡಬಹುದು....? ಮಸಣದ ಸಮಸ್ತ ಕಾರ್ಯ ಪ್ರೇತಗಳಿಗಾಗಿ- ಶವಕ್ಕಾಗಿ....ಅಲ್ಲದೆ ಜೀವಂತ ಮನುಷ್ಯನಿಗಾಗಿ ಅಲ್ಲ"

ಅದರಂತೆ ನಾನು, ನನ್ನಲ್ಲಿ ಎಲ್ಲವೂ ಇತ್ತು- ಇದೆ. ಆದರೆ ಯಾವುದರ ಉಪಯೋಗವೂ ಇಲ್ಲ. ನನಗೆ ಯಾವುದರ ಉಪಯೋಗವೂ ಇಲ್ಲ. 'ಮಸಣದ ಹೂ' ಪೇಟೆಯಲ್ಲಿ ಮಾರಿದರೆ ಹಣ ದೊರೆಯಬಹುದು. ಅದನ್ನು ಮುಡಿದುಕೊಂಡವರಿಗೆ ಹೂ ಮುಡಿದುಕೊಂಡಿರುವೆವು ಎಂಬ ಸಮಾಧಾನ ವಿದ್ದರೂ ಹೂವಿಗೆ ಅಂತಹ ಸಮಾಧಾನ ಸಂತೋಷ ದೊರೆಯಬಹುದೆ...? ಹೂವಿಗೆ ಕೃತಾರ್ಥತೆ ಎನ್ನಿಸಬಹುದೆ... ? ?

" ಸುಮಿತ್ರಾ....ನಾನು ಹಾಳಾಗಲಿಲ್ಲ. ಆದರೆ ಮೂಲಿಗುಂಪಾಗಿರುವೆ. ನಾನು ತುಳಿದ ತುಳಿಯುವ ದಾರಿಯಾಗಲಿಲ್ಲ. ಮುಳ್ಳುಗೊಂಪೆಯಾದೆ."

" ನನ್ನಲ್ಲಿಯೂ ಬದುಕುವ ಆಶೆ ಇದ್ದಿತು. ಹಸನ್ಮುಖಿಯಾಗಿ ಹಾಳು ಜಗವನ್ನು ನಂದನವನಕ್ಕೆ ಮಾರ್ಪಡಿಸಬೇಕೆಂಬ ಅಭಿಲಾಷೆ ಇದ್ದಿತು. ನಗು ನಗುತ್ತ ಕಷ್ಟವನ್ನು ಎದುರಿಸಬೇಕೆಂಬ ಉತ್ಸಾಹವಿದ್ದಿತು....ಆದರೆ...."

" ....ಆದರೆ ಎಲ್ಲವೂ ಮಣ್ಣುಪಾಲಾಯಿತು. ನನ್ನ ಹಸನ್ಮುಖದಲ್ಲಿ ದುಃಖದ ಛಾಯೆ ಮನೆಮಾಡಿತು ನನ್ನ ಉತ್ಸಾಹ ನಿರಾಶೆಯ ಸೆರೆಮನೆಯಲ್ಲಿ ಬೆಳಕು ಕಾಣದೆ ಕುಳಿತ ಬಂದಿಯಾಯಿತು. ನನ್ನ ಅಭಿಲಾಷೆ ಧೂಳಿ

ಯಲ್ಲಿಯ ಧೂಳಿಯಾಗಿ ಅದರ ಕಣದಲ್ಲಿ ಸೇರಿ ತನ್ನ ಅಸ್ತಿತ್ವದ ಅರಿವೇ ಇಲ್ಲ ದಂತಾಯಿತು. ಇದಕ್ಕೆ ಕಾರಣ......."

"....ಇದಕ್ಕೆ ಕಾರಣ ಗಂಡು...ಗಂಡಸು... ಪುರುಷ...ಪತಿ...."

"....ಪತಿ..."

" ದೇವನೆಂದು ಸ್ತ್ರೀ ಪೂಜಿಸಬೇಕಾದ ಪತಿ..."

" ದೇವನೆಂದು ನಾನು ಪೂಜಿಸಿದ ಪತಿ. ಭಕ್ತಳಾಗಿ ಪೂಜಾರಿಣಿಯಾಗಿ ಏಕಾಗ್ರತೆಯಿಂದ ಸರ್ವ ಆಶೆಗಳನ್ನು ಹರಿದೊಗೆದು ಸರ್ವಬಂಧನಗಳನ್ನು ಕಡಿದೊಗೆದು ಪೂಜಿಸಿದ ಪತಿ — ಪತಿದೇವರು..."

" ದೇವರ ಪೂಜೆಯಿಂದ ಮನುಷ್ಯನಿಗೆ ಸ್ವರ್ಗ ಪ್ರಾಪ್ತಿಯಂತೆ ! "

" ಆದರೆ ದೇವರೆಂದು ಪೂಜಿಸಿಕೊಂಡ ಮನುಷ್ಯನಿಂದ ನನಗೆ ನರಕ ಪ್ರಾಪ್ತಿ. "

" ಆ ಮನುಷ್ಯನೇ ಒಂದು ಕಾಲ ನನಗೆ ದೇವನಾಗಿದ್ದನು. "

" ನಾನು ಭಕ್ತಳು. "

" ಪೂಜೆಗೊಳ್ಳುವ ಪರಮಾತ್ಮ ಭಕ್ತರ ಮನೆಯ ಕಾವಲದಾಳು...

"ಅವನೂ ಒಂದು ಕಾಲ ನನ್ನ ಮನದ ಮನೆಯ ಕಾವಲದಾಳಾಗಿದ್ದನು"

" ಎಷ್ಟೊಂದು ಪ್ರೀತಿ ! "

" ಕಾಮಿನಿ ಕಾಣದಿದ್ದರೆ ಜಗತ್ತೇ ಶೂನ್ಯವಾಗುತ್ತಿತ್ತು ಆತನಿಗೆ ಕಾಮಿನಿ ಅವನ ಕಣ್ಣಾಗಿದ್ದಳು. ದೇಹವಾಗಿದ್ದಳು. ಆಹಾರವಾಗಿದ್ದಳು. ಉಸಿರಾಡಿಸುವ ಉಸಿರಾಗಿದ್ದಳು..."

" ಇದೆಲ್ಲವೂ ಮೋಸವಾಗಿರಲಿಲ್ಲ. ಆರಂಭದಲ್ಲಿ ಸತ್ಯ ಸಂಗತಿಯಾಗಿತ್ತು. "

" ಸತ್ಯದ ಸೆರೆಯಾಳಾಗಿದ್ದೆ ನಾನು "

" ಕಾಲಿಗೆ ಬೀಳಬರುವ ವೈಭವವನ್ನು ಕಾಲಿನಿಂದೊದೆದು ಬಡತನ ವನ್ನು ಸ್ವಸಂತೋಷದಿಂದ ಅಪ್ಪಿಕೊಂಡೆ. ಸಿರಿವಂತರ ಮಗಳು ಬಡವನ

ಹೆಂಡತಿಯಾಗಿ ಸಂಸಾರ ಮಾಡುವಳಾದರೂ ಹೇಗೆ....?....ಇದೆಲ್ಲ ಎರಡು ದಿನದ ಹರೆಯದ ಹುರುಪಿನಾಟ.... ಕೊನೆಗೆ ಬಂದು ಬೀಳುವದು ತವರುಮನೆಯಲ್ಲಿ. ಎನ್ನುತ್ತಿದ್ದರು ಜನ "

" ನಾನು ಎಲ್ಲವನ್ನೂ ಸುಳ್ಳುಮಾಡಿದೆ. ಮಾತನಾಡುವವರ ಬಾಯಿಗೆ ಬೀಗಹಾಕಿಸಿದೆ ನನ್ನ ಕಾರ್ಯದಿಂದ "

" ನಾನು ದುಡಿಯುತ್ತಿದ್ದೆ. ಆವರು.... ಅಂದಿನ ಅವರು ನನ್ನ ಪತಿ ಕಲಿಯುತ್ತಿದ್ದ. ಸಂಸಾರದ ಯಾವ ವಿಚಾರವನ್ನೂ ಅವನ ಹತ್ತಿರ ಸುಳಿಯಗೊಡುತ್ತಿರಲಿಲ್ಲ.... ಉಟ್ಟಬಟ್ಟೆಯನ್ನೇ ಒಣಗಿಸಿ ಉಡುವವರೆಗೂ ನನ್ನ ಅವಸ್ಥೆಯಿತ್ತು. ಆದರೂ ನನ್ನ ಪತಿಗೆ ಉಲನ್ ಬಟ್ಟೆಯಿರುತ್ತಿದ್ದವು "

" ಕಲಿತು ಕಲಿತು ಕೊನೆಗೆ ನೆಲದಮೇಲೆ ತಿರುಗುವದನ್ನು ಬಿಟ್ಟು ಆಕಾಶ ಹಾರುವದಕ್ಕೆ ಆರಂಭಿಸಿದರು. ಅರ್ಥಾತ 'ಪೈಲಾಟ'ನಾದನು. "

" ಅಂದಿನ ನನ್ನ ಸಂಭ್ರಮ...."

"ಆದರ ನೆವಹು ಇಂದು ಕೂಡ ನಗೆತರುತ್ತದೆ ವಿಷಾದ ಮಾಡಿಸುತ್ತದೆ. ಅಂದು ಎಷ್ಟು ಹುಚ್ಚಳಾಗಿದ್ದೆ ನಾನು... ಎಂದು "

ಹಾರುತ್ತಿರುವ ವಿಮಾನ ಕುಪ್ಪಳಿಸಿ ಬಿದ್ದು ಅವನು ಅಂದೇ ಸತ್ತುಹೋಗಿದ್ದರೆ...? ಅವನ ನನ್ನ ಮಿಲನದ ಮಧುರ ಸ್ಮೃತಿಯಲ್ಲಿ ಉಳಿದೊಂದೆರಡು ಕ್ಷಣ ಹೇಗೋ ಕಳೆದು ಬಿಡುತ್ತಿದ್ದೆ...."

" ಅವ ಸಾಯಲಿಲ್ಲ.. "

" ನನ್ನ ಕೊಲೆಮಾಡಿದ. "

" ಹಣ ಕಾಣದ ಕೈಯಲ್ಲಿ ಹಣ ತುಂಬತೊಡಗಿತು. ಅದರಂತೆ ಅವನ ಮನಸ್ಸು ಉಳಿದ ವಿಷಯಗಳಿಗಾಗಿ ತುಂಬತೊಡಗಿತು. "

" ಉಳಿದ ವಿಷಯಗಳನ್ನು ಮನದಲ್ಲಿ ತುಂಬ ತೊಡಗಿದಂತೆ ನಾನು ಹೊರಬರತೊಡಗಿದೆ.

...........ಕೊನೆಗೆ......

" ಸುಮಿತ್ರಾ ಗಂಡಸು ಯಾವನಾದರೂ ಒಂದೆ. ಅವನು ಗಂಡಸೆ. ಒಮ್ಮೊಮ್ಮೆ ಸಮಸ್ತ ಗಂಡಸುಜಾತಿಯನ್ನು ಭಸ್ಮಮಾಡಬೇಕೆನ್ನುವಷ್ಟು ಕೋಪ ಬರುತ್ತದೆ. "

" ಆದರೆ ಕ್ಷಣಿಕ ಗಂಡಸಿಲ್ಲದೆ ಜಗ ನಡೆಯದು. ನನಗೆ ಬೇಡವಾದರೂ ಎಲ್ಲರಿಗೂ ಬೇಡವೆ....?

ಎಂದು ಕಾಮಿನಿ ಉಸಿರ್ಗರೆಯುತ್ತಾಳೆ.

ಅವಳ ಜೀವನ ವಿಚಾರವನ್ನು ಕೇಳಿದಾಗ ಗಂಡಸು ಯಾವನಾದರೂ ಒಂದೇ. ಅವನು ಗಂಡಸೆ. ಎನ್ನುವ ಕಾಮಿನಿಯ ವಿಚಾರ ನನಗೆ ಸತ್ಯವೆನಿಸದೆ?

ನನಗೆ ರಂಗ ಮಾಡಿದಂತೆ ಅವಳಿಗೆ ಅವಳ ಪತಿ ಮಾಡಿರಬಹುದು.

ಅವಳ ಪತಿ........!

ಅವಳ ಪತಿಯಿಂದಲೇ ಕೊನೆಗೆ ಅವಳಿಗೆ ದುರ್ಗತಿ....!

ಪತಿಯಿದ್ದ ಸ್ತ್ರೀಕೂಡ ಸುರಕ್ಷಿತಳಿಲ್ಲವೆ ಈ ಜಗದಲ್ಲಿ...? ಹಾಗಾದರೆ ನಂಬುವದಾದರೂ ಯಾರನ್ನು....? ಯಾರ ವಿಶ್ವಾಸದಿಂದ, ಸ್ತ್ರೀ ಸುರಕ್ಷಿತ ವಾಗಿ ಬಾಳುವದು....?

ರಂಗ ನನ್ನ ಜೊತೆಗೆ ವಿವಾಹ ಮಾಡಿಕೊಂಡಿದ್ದರೆ ನನ್ನ ಅವಸ್ಥೆ ಈ ಮಟ್ಟಕ್ಕೆ ಇಳಿಯುತ್ತಿರಲಿಲ್ಲ ಎಂದಿತ್ತು ನನ್ನ ಕಲ್ಪನೆ. ಅದು ಕೂಡ ಅಸತ್ಯ ಎನ್ನಿಸುತ್ತದೆ. ಕಾಮಿನಿಯ ಉದಾಹರಣೆಯಿಂದ.

ಪತಿ ಇರಲಿ ಇಲ್ಲದಿರಲಿ ಸ್ತ್ರೀ ಸಮಾಜದಲ್ಲಿ ಸರ್ವಕಾಲ ಅಸುರಕ್ಷಿತಳು. ಅವಳ ಸಂರಕ್ಷಣೆಗೆ ದೇವನೊಬ್ಬನೇ ಸಮರ್ಥ. ಆದರೆ ದೇವನೂ ಗಂಡಸಾಗಿ ತನ್ನವರ ಪಕ್ಷವನ್ನೇ ಕಟ್ಟುತ್ತಾನೆ.

ಇಲ್ಲದಿದ್ದರೆ ಕಾಮಿನಿ ಮಾಡಿದ ಅಪರಾಧವೇನು? ಮನೆಮಾರು ವೈಭವ ಎಲ್ಲವನ್ನೂ ತೊರೆದುಬಂದು ವಿವಾಹವಾಗಿ ನಂತರಕೂಡ ತಾನು ದುಡಿದು ಪತಿಗೆ ಹಣಕೊಟ್ಟಳು. ಕೊನೆಗೆ....?

" ಕೊನೆಗೆ ಏನಾಯಿತು.....? 'ಕೊನೆಗೆ' ಏನಾಯಿತು ಎಂದು ಕಾಮಿನಿ ಹೇಳಲೇ ಇಲ್ಲ.

"ಕೊನೆಗೆ" ಎಂದು ತುಂಬಿದ ಸ್ವರದಲ್ಲಿ ಮಾತು ನಿಲ್ಲಿಸಿದಳು. ಏಕೆ...?

ಕೊನೆಗೆ ಏನಾಗಿರಬಹುದು....? ಅವಳನ್ನು ಆವ ಮನೆಯಿಂದ ನೂಕಿರ ಬಹುದೆ...?

ವಿವಾಹ ಮಾಡಿಕೊಂಡಿದ್ದರೂ ಕೂಡ ರಂಗ ಕೊನೆಗೆ ನನ್ನನ್ನು ನೂಕಬಹುದಿತ್ತೆ....? ಇನ್ನಾರಾದರೂ ನನ್ನ ಜೊತೆಗೆ ವಿವಾಹವಾದರೆ ಅವರೂ ಕೂಡ ನನ್ನನ್ನು ನೂಕಬಹುದೆ....?

ನೂಕಿ ಹಾಕಿದರೆ......?

ಎಲ್ಲಿಗೆ ಹೋಗುವದು ..? ಒಂದುಸಲ ಮನೆಯಿಂದ ಓಡಿ ಬಂದಾಗ ಕುಲಕರ್ಣಿಯವರು ದೇವರಾಗಿಬಂದು ಆಶ್ರಯ ಕೊಟ್ಟರು. ಮತ್ತೆ ಅದೇ ಅವಸ್ಥೆ ಬಂದರೆ ...... ?

........ನಾನು ಹುಚ್ಚಿ ........ಕುಲಕರಣಿಯವರ ಮನೆಯಲ್ಲಿ ಕುಳಿತು ಎಂದೂ ಸಾಧ್ಯವಾಗದ ವಿಚಾರವನ್ನು ತಲೆಯೊಳಗೆ ಹಾಕಿಕೊಂಡು 'ಹಾಗಾದರೆ' ...... ? ಎಂಬ ವಿಚಾರ ಮಾಡುವೆ ನನ್ನ ವಿವಾಹವಾದರೂ ಆಗಬಹುದೇ ......? ಯಾರು ಮಾಡಿಕೊಳ್ಳುವವರು ನನ್ನನ್ನು ....? ಮಾಡಿಕೊಂಡರೂ ಸುಖ ಅನುಭವಿಸುವದು ಅಷ್ಟರಲ್ಲಿಯೇ ಇದೆ.

ಬೇಡಿ ಬಯಸಿ ವಿವಾಹ ಮಾಡಿಕೊಂಡ ಕಾಮಿನಿ ಅದಾವ ಸೌಖ್ಯವನ್ನು ಅನುಭವಿಸುತ್ತಿದ್ದಾಳೆ. .......? ಅವಳೇನು ಕುರೂಪಿಯೇ...? ನನ್ನಂತೆ ಅವಿದ್ಯಾವಂತಳೇ...? ಆದರೂ ಅವಳಿಗೆ ಒದಗಿದ ಅವಸ್ಥೆ ಏನು........? ಅವಳ ಅವಸ್ಥೆಯೇ ಆಮಟ್ಟಕ್ಕೆ ಇಳಿದರೆ ನಾನು ತಲ್ಪುವದಾದರೂ ಎಲ್ಲಿಗೆ....?

ವಿವಾಹವಾಗಿಯೂ ಸ್ತ್ರೀಯ ಅವಸ್ಥೆ ಕೀಳುಮಟ್ಟಕ್ಕೆ ಇಳಿಯುವದಾದರೆ ವಿವಾಹವನ್ನಾದರೂ ಯಾವ ಸುಖಕ್ಕೆಂದು ಮಾಡಿಕೊಳ್ಳಬೇಕು....?

ವಿವಾಹವು ಸುಖಕ್ಕಾಗಿಯೇ....?

ಸುಖವಿಲ್ಲದಿದ್ದರೆ ವಿವಾಹವನ್ನಾದರೂ ಮಾಡಿಕೊಳ್ಳಬೇಕೆ....?

ಹಾಗಾದರೆ ವಿವಾಹದ ಉದ್ದೇಶವು ಸುಖವೆ ?

ವೈವಾಹಿಕ ಜೀವನದಲ್ಲಿ ಸುಖವಿದೆಯೆ....?

ಇರಲೇಬೇಕು. ಇಲ್ಲದಿದ್ದರೆ ಒಬ್ಬರ ಹಿಂದೊಬ್ಬರಂತೆ ಜಗತ್ತಿನ ಜನನದಿಂದ ಇಂದಿನವರೆಗೆ ಒಬ್ಬರನ್ನು ಬಿಡದೆ ಎಲ್ಲರೂ ವಿವಾಹ ಬಂಧನದಲ್ಲಿ ಬಂಧಿತರಾಗುತ್ತಿದ್ದಾರೇಕೆ...?

ವಿವಾಹವು ಬಂಧನವೆ....?

"ವಿವಾಹವು ಬಂಧನವಲ್ಲ ಬಾಂಧವ್ಯ. ಆದರೆ ಅಧಿಕಾರಿ ಗಂಡಸರ ಕೈಯಲ್ಲಿ ಸಿಕ್ಕ ಸ್ತ್ರೀಯರ ಪಾಲಿಗೆ ಬಂಧನವಾಗಿದೆ." ಎಂದು ಕಾಮಿನಿ ಕಾಲು ಅಪ್ಪಳಿಸುತ್ತಾಳೆ.

ವಿವಾಹವು ನಿಜಕ್ಕೂ ಬಂಧನವಲ್ಲ ಬಾಂಧವ್ಯ. ಹತ್ತಿಕೊಂಡು ಬಂದ ಬಾಂಧವ್ಯವಲ್ಲದಿದ್ದರೂ ಅಂಟಿಕೊಳ್ಳಬೇಕಾದ ಬಾಂಧವ್ಯ. ಒಂದು ಇನ್ನೊಂದನ್ನು ಹಿಡಿದು ಕೊಳ್ಳುವಾಗ, ಅಥವಾ ಒಂದಕ್ಕೆ ಇನ್ನೊಂದನ್ನು ಅಂಟಿಸುವಾಗ ಹಿಡಿತ ಅಥವಾ ಬಿಗಿತ ಬೇಕಾಗುವದು. ಅದಕ್ಕೆ ಬಂಧನವೆಂದು ಹೇಳಲಾದೀತೆ ..? "

"ಬಂಧನವೆಂದರೆ ಪಾರತಂತ್ರ್ಯ. ಪಾರತಂತ್ರ್ಯದಲ್ಲಿ ಸುಖವೆಲ್ಲಿ? ಪಾರತಂತ್ರ್ಯವೆಂದರೆ ತನ್ನತನವನ್ನು ಬೇಡವಾದರೂ ಮಾರುವದು ಅಲ್ಲದೆ ಮರೆಯುವದಲ್ಲ. "

" ವಿವಾಹವೆಂದರೆ ತನ್ನನ್ನು ಮರೆಯುವದು. ಅದೂ ತನಗಾಗಿ ಅಲ್ಲದೆ ಇನ್ನೊಬ್ಬರಿಗಾಗಿ ಮಾರಿಕೊಳ್ಳುವದಲ್ಲ. "

" ಆದರೆ ಇಂದಿನ ವಿವಾಹವೆಂದರೆ ಮಾರಿಕೊಳ್ಳುವದು. ಅದಕ್ಕೆ ವಿವಾಹ, ಬಂಧನವೆಂದು ಹೇಳುತ್ತಾರೆ. ಅವರು ಹೇಳುವದು ಅಸತ್ಯವೂ ಅಲ್ಲ! ಹೆಣ್ಣು ತಿಳಿದವಳಿರಲಿ, ಅಥವಾ ಅಜ್ಞಾನಿ ಇರಲಿ, ಸಿರಿವಂತಳಿರಲಿ ಅಥವಾ ಬಡವಳಿರಲಿ ಅವಳಿಗೆ ವಿವಾಹವೆಂದರೆ ಬಂಧನ, ಇನ್ನೊಬ್ಬನ—ಗಂಡಸಿನ— ಅಥವಾ ದೊಡ್ಡ ಮಾತಿನಲ್ಲಿ ಹೇಳುವದಾದರೆ ಪತಿದೇವರ ಸೆರೆಯಾಳು. ವಿವಾಹದ ಮರುಕ್ಷಣದಲ್ಲಿ ಅವಳು ಹೇಳಹೆಸರಿಲ್ಲದವಳಾಗಿ ಸೌಭಾಗ್ಯವತಿ- ಪತ್ನಿಯಾಗುವಳು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವಳು" ಎಂದು ಕಾಮಿನಿ ಹೇಳಿದಾಗ ನಾನೊಬ್ಬಳೇ ಅಲ್ಲ ಯಾವ ಸ್ತ್ರೀಯೂ ಕೂಡ "ವಿವಾಹವನ್ನೇಕೆ ಮಾಡಿಕೊಳ್ಳಬೇಕು ? " ಎಂದು ಯೋಚಿಸದೆ ಇರಲಾರಳು.

ಆದರೂ ಅಂತಹ ವಿಚಾರ ಕ್ಷಣಿಕ. "ವಿವಾಹ ಮಾಡಿಕೊಳ್ಳಬೇಕು." ಎಂದು ಮರುಕ್ಷಣದಲ್ಲಿ ಮನದೊಳಗೆ ಬಂದು ಮೂಡುತ್ತದೆ. ಎಲ್ಲರ ವಿಚಾರವು

ಹೀಗೆಯೇ ಎನ್ನುವದನ್ನು ನಾನು ಹೇಳದಿದ್ದರೂ ನನ್ನ ಮತ್ತು ನನ್ನಂತಹರ ವಿಚಾರ ಮಾತ್ರ ಇದುವೆ.

ಏಕೆಂದರೆ ವಿವಾಹವಿಲ್ಲದಿದ್ದರೆ ನನಗೆ ಜೀವನವಿಲ್ಲ. ಬದುಕು ಇಲ್ಲ. ಯಾವನೊಬ್ಬನ ಕೈ ಹಿಡಿಋ ಅವನ ಮನೆ ಸೇರಿದರೆ ಕಾಮಿನಿ ಹೇಳುವಂತೆ ಅವನಿಗೆ ನಮ್ಮನ್ನು ಮಾರಿಕೊಂಡರೆ ತೀರಿತು. ದನ ಕೊಂಡುಕೊಂಡವನು ಅದಕ್ಕೆ ತಿನ್ನಲು ಹಾಕುವದಿಲ್ಲವೆ....? ಹಾಗೆಯೇ ನಮ್ಮ ಕೈ ಹಿಡಿದವನು ನಮ್ಮ ಹೊಣೆಗಾರಿಕೆ ಹೊತ್ತುಕೊಳ್ಳುವನು

ವಿವಾಹವೆಂದರೆ ಹುಡುಗಿಯ ಹೊಣೆಗಾರಿಕೆಯನ್ನು ಹುಡುಗನೊಬ್ಬ ನಿಗೆ ಒಪ್ಪಿಸುವದೆ....? ಹೊಣೆಗಾರಿಕೆ ಹಾರಿಸಿಕೊಳ್ಳುವದು. ವಹಿಸಿಕೊಳ್ಳು ವದೇ ವಿವಾಹದ ಉದ್ದೇಶವೆ...?

ಕಾಮಿನಿ ಹೇಳುವದು—"ವಿವಾಹದ ಉದ್ದೇಶ ಅತ್ಯಾಚಾರಕ್ಕೆ ಬಂಧನ ಹಾಕುವದು. " ಎಂದು.

" ಸುಮಿತ್ರಾ ವ್ಯಕ್ತಿ ಒಂಟಿಯಾಗಿ ಬಾಳಲು ಸಾಧ್ಯವಿಲ್ಲೆಂದು ಒಬ್ಬರಿಗೆ ಇನ್ನೊಬ್ಬರು ಸಹಾಯಕರಾಗಿ ಮಿತ್ರರಾಗಿ ಬಾಳಬೇಕೆಂದು ದೇವ ಗಂಡು ಹೆಣ್ಣನ್ನು ನಿರ್ಮಾಣ ಮಾಡಿದ. ನಿರ್ಮಿತರಾದ ಇಬ್ಬರಲ್ಲಿ ಎರಡು ವಿಚಾರ ತಲೆತೋರಿದಾಗ ಎರಡು ವಿಚಾರಗಳಲ್ಲಿ ಅರ್ಥಾತ್ ಸ್ವಾರ್ಥಗಳಲ್ಲಿ ತಿಕ್ಕಾಟ ನಡೆಯಿತು ಈ ತಿಕ್ಕಾಟದಿಂದ ತಾನು ನಿರ್ಮಿಸಿದ ಸೃಷ್ಟಿಯೇ ಹಾಳಾಗ ಬಹುದೆಂದು ಇಬ್ಬರೂ ಕೂಡಿಕೊಂಡಿರಲಿ ಎಂದು ಇಬ್ಬರನ್ನೂ ಕೂಡಿಸುವ ದಕ್ಕೆ ಜೋಡಿಸುವದಕ್ಕೆ ನಿರ್ಮಾಣವಾಯಿತು ಸಂತಾನ. ಬರಿ ಸಂತಾನೋ ತ್ಪತ್ತಿಗಾಗಿಯೇ ಗಂಡು ಹೆಣ್ಣು ಒಂದಾಗಲು ನಿರಾಕರಿಸಿದಾಗ ಇಬ್ಬರನ್ನೂ ಆಕರ್ಷಿಸುವಂತಹದನ್ನು- ಸುಖವನ್ನು ಕಲ್ಪಿಸಿದ ದೇವ ಕೊನೆಗೆ—"

' ಕೊನೆಗೆ ದೇವನಿಗೇ ನಿರಾಶೆಯಾಗುವಂತೆ ಉಳಿದೆಲ್ಲವನ್ನು ಮರೆತು ಸುಖಕ್ಕಾಗಿಯೇ ಗಂಡು ಹೆಣ್ಣುಗಳು ಕೂಡಲು ಆರಂಭಿಸಿದವು. ಅಂದಿಗೆ ಆರಂಭವಾಯಿತು ಅಧಃಪತನ. ಸುಖದ ಲಾಲಸೆಯೇ ಜಗತ್ತನ್ನು ಮೆಟ್ಟಿ ಆಳುವ ಪ್ರಬಲ ಶಕ್ತಿಯಾಯಿತು. ಶಕ್ತಿ ಇದ್ದವ ಅಶಕ್ತರನ್ನು ಮೆಟ್ಟತೊಡ ಗಿದ ತನ್ನ ಲಾಲಸೆಗಾಗಿ. ಅತ್ಯಾಚಾರವೇ ಜಗದ ಆಚಾರವಾಯಿತು. "

" ಅಂತಹ ಅತ್ಯಾಚಾರವನ್ನು ತಡೆಗಟ್ಟುವದಕ್ಕೆ ನಿರ್ಮಾಣವಾಯಿತು ವಿವಾಹ. 'ಇದು ವಿವಾಹದ ಉದ್ದೇಶ. ಆದರೆ ಆ ಉದ್ದೇಶವಿಂದು ಸ್ವಾರ್ಥಿಗಳ ಕೈಗೆ ಸಿಲುಕಿ ತಲೆ ಕೆಳಗಾಗಿ ಸ್ತ್ರೀಗೆ ಬಂಧನವಾಗಿದೆ." ವಿವಾಹ ಬಂಧನ! ವಿವಾಹ ಬಂಧನವೇ ಸ್ತ್ರೀಯನ್ನು ಬಂಧಿಸುವ ಬಂಧನವಾಗಿದೆ....ಸುಮಿತ್ರಾ–ಆ ಬಂಧನವೇ ಇಂದೂ ಸ್ತ್ರೀಯನ್ನು ಬಂಧಿಸುತ್ತದೆ. "

" ಈ ಬಂಧನದಿಂದ ಮುಕ್ತಿ ಎಂದಿಗೆ....? " ಎಂದು ಕಾಮಿನಿಯೇ ಪ್ರಶ್ನೆ ಕೇಳುತ್ತಾಳೆ.

ಕಾಮಿನಿಯ ಪ್ರಶ್ನೆಗೆ ಉತ್ತರ ಕೊಡಲು ನನ್ನಿಂದ ಸಾಧ್ಯವೆ....? ವಿವಾಹ ಮಾಡಿಕೊಳ್ಳಬೇಕೆಂಬುದು ನನಗೆ ಗೊತ್ತು. ವಿವಾಹದ ನಂತರ ಪತಿಯು ಹೇಳಿದಂತೆ ಕೇಳಿಕೊಂಡು ಇರಬೇಕು— ಎನ್ನುವದನ್ನೂ ನಾನು ತಿಳಿದುಕೊಂಡಿದ್ದೇನೆ. ಆದರೆ ಇದು ' ಬಂಧನ ' ಎಂದು ಕಾಮಿನಿ ಹೇಳುತ್ತಾಳೆ. ಇದು ಬಂಧನ ಹೇಗೆ....?

ನಮ್ಮ ತಾಯಿ, ಕಾಮಿನಿಯ ತಾಯಿ, ಅಲ್ಲದೆ ಸ್ತ್ರೀ ಜಾತಿಯೇ ಅಡವಿ ತುಳಿದು ಮಾಡಿದ ದಾರಿ ಇದುವೆ ಅಲ್ಲವೆ...? ಅವರು ಮಾಡಿದ ದಾರಿಯಿಂದ ನಡೆಯಬೇಕಾದುದು ನಮ್ಮ ಕರ್ತವ್ಯವಲ್ಲವೆ........? ಇದ್ದಬಿದ್ದವರೆಲ್ಲರೂ ಎದ್ದು ' ತಮ್ಮದೇ ಒಂದು ದಾರಿ. 'ತಮ್ಮದೂ ಒಂದು ದಾರಿ' ಎಂದು ಹೊಸ ದಾರಿಯಿಂದ ಸಾಗತೊಡಗಿದರೆ ಗುರಿಯನ್ನು ತಲುಪಬಹುದೆ....? ದಾರಿಯು ಗುರಿಯನ್ನು ತಲುಪುವದಕ್ಕೆ. ಅಲ್ಲದೆ ಚಕ್ರಾಕಾರದಂತೆ ಸುತ್ತಿಸುವುದಕ್ಕೆ ಅಲ್ಲ. ನಮ್ಮ ಹಿರಿಯರು ಕಷ್ಟಪಟ್ಟು ದಾರಿ ಮಾಡಿಟ್ಟಿದ್ದಾರೆ. ನಾವೂ ಅದೇ ದಾರಿಯಿಂದ ಹೋಗಬಾರದೇಕೆ....? ಅದೇ ದಾರಿಯಿಂದ ಸಾಗಿದ ಹಿಂದಿನವರೆಲ್ಲರೂ ದಾರಿ ತಪ್ಪಿ ಹಳ್ಳಕ್ಕೆ ಬಿದ್ದಿರುವರೆ...?

ಆದರೂ ಕಾಮಿನಿಯ ಮಾತು ಅರ್ಥವಿಲ್ಲದ ಬಡಬಡಿಕೆ ಎಂದು ಹೇಳಲು ಬಂದೀತೆ....? ಅವಳು ಹೇಳುವದು " ಗಂಡಸು ಸ್ವಾರ್ಥಿಯಾದ್ದರಿಂದ ವಿವಾಹ ಸ್ತ್ರೀಗೆ ಬಂಧನವಾಗಿ ಪರಿಣಮಿಸಿದೆ " ಎಂದು.

ವಿವಾಹದಿಂದ ಸ್ತ್ರೀ ಅಸ್ವತಂತ್ರಳಾಗುವದು ಅಸತ್ಯವೇನೂ ಅಲ್ಲ. ಆದರೆ ಸ್ತ್ರೀ ಸ್ವತಂತ್ರಳಾಗಿ ಇರುವಳಾದರೂ ಎಂದು...? ಅವಳು ಸ್ವತಂತ್ರತೆ

ಯಿಂದ ಇದ್ದುದೇ ಆದರೆ ಅವಳ ಬಾಲ್ಯಕಾಲದಲ್ಲಿ ಮಾತ್ರ. ಅವಳ ಅವಯವಗಳು ಬೆಳೆಯುತ್ತಿದ್ದಂತೆ ಅವಳ ಮೇಲೆ ತಂದೆಯ ಮನೆಯ ಬಂಧನ ಆರಂಭವಾಗುತ್ತದೆ ವಿವಾಹದ ನಂತರ ಪತಿಯ ಬಂಧನ. ನಂತರ ಅವಳು ತಾಯ್ತನಕ್ಕೆ ಸಮೀಪಿಸಿದಾಗ ನಿಸರ್ಗ ಅವಳನ್ನು ಬಂಧಿಸುತ್ತದೆ. ಬಂಧನದಿಂದಲೇ ಆರಂಭವಾಗಿ ಬಂಧನದಲ್ಲಿಯೇ ಮುಕ್ತಾಯಗೊಳ್ಳುತ್ತದೆ ಸ್ತ್ರೀ ಜನ್ಮ.

ಆದರೆ ತಂದೆ-ತಾಯಿಯ ಪ್ರೀತಿಯ ಆಸರೆಯಲ್ಲಿ, ಮಕ್ಕಳ ಮಮತೆಯ ಮಾಯೆಯಲ್ಲಿ ಬಂಧನ ಸ್ಪಷ್ಟವಾಗಿ ಗೋಚರಿಸುವದಿಲ್ಲ. ಆದರೂ ಬಂಧನ ಅದೃಶ್ಯವಾಗಿ ಬಗೆದೇ ಇರುತ್ತದೆ. ಬೇಡವಾದ ಅಥವಾ ಬೇಸರ ಬಂದ ಪತಿಯು ಮಾತ್ರ ಕೊಂಚ ಬಂಧನಕಾರಿ ಎನ್ನಿಸುತ್ತಾನೆ. ಆದರೆ ಒಳ್ಳೆಯ ಪತಿ ಇದ್ದರೆ ಬಂಧನವೂ ಹಿತಕಾರಿ ಪ್ರಿಯ ಎನ್ನಿಸುತ್ತದೆ. ಅಥವಾ ಬಂಧನವೇ ಬಿಡುಗಡೆಯಾಗಿರುತ್ತದೆ.

' ಬೇಕಾಗಲಿ ಅಥವಾ ಬೇಡವಾಗಲಿ ಹಿತವಾಗಲಿ. ಅಥವಾ ಅಹಿತವಾಗಲಿ ಈ ಬಂಧನದಿಂದ ದೂರ ಇರಲು ಸಾಧ್ಯವಿಲ್ಲ ' ಎನ್ನುವದನ್ನು ಕಾಮಿನಿಯೂ ಒಪ್ಪುತ್ತಾಳೆ. ಏಕೆಂದರೆ ದೇವನ ಸೃಷ್ಟಿಯಲ್ಲಿ ನಿರ್ಮಾಣವಾದ ಗಂಡು ಹೆಣ್ಣುಗಳು ಒಂದಕ್ಕೊಂದು ಆಸರೆಯಾಗಿ ಬೆಳೆಯಬೇಕು. ಒಂದಕ್ಕೊಂದು ಪೂರಕವಾಗಿ ಜೀವನ ಸಾಗಿಸಬೇಕು.

ಜೀವಕ್ಕೊಂದು ದೇಹ, ದೇಹಕ್ಕೆ ಅವಯವ ಎನ್ನುವದು ಸೃಷ್ಟಿಯ ನಿಯಮವಿದ್ದಾಗ ವ್ಯಕ್ತಿಗೂ ಒಂದು ವಿಚಾರ, ಒಂದು ಸ್ವಾರ್ಥ ಎಂಬ ಮಾತನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಒಂದೊಂದು ವಿಚಾರದ ವ್ಯಕ್ತಿ ತನಗನುಕೂಲವಾದ ರೀತಿಯಲ್ಲಿ ಅಥವಾ ತನಗೆ ಸರಿ ಎನ್ನಿಸಿದ ರೀತಿಯಲ್ಲಿ ನಡೆದುಕೊಳ್ಳುವನು.

" ಸಂಸಾರದಲ್ಲಿ ಈ ರೀತಿಯಾಗಿ ನಡೆಯುವದೇ ತಪ್ಪು " ಎಂದು ಕಾಮಿನಿಯ ವಾದ.

" ಏಕೆಂದರೆ— ವ್ಯಕ್ತಿಗೂ ಒಂದು ವಿಚಾರ ಒಂದು ಸ್ವಾರ್ಥವಿದ್ದರೆ ಎರಡು ವ್ಯಕ್ತಿಗಳ ವಿಚಾರ ಸ್ವಾರ್ಥ ಒಂದಕ್ಕೊಂದು ತಾಕಲಾಡುತ್ತವೆ. ಆಗ ಘರ್ಷಣ ಉತ್ಪನ್ನವಾಗುತ್ತದೆ. ಅಲ್ಲಿಯೇ ಇದೆ ಕಲಹದ

ಮೂಲ. ತನ್ನಂತೆ ಇನ್ನೊಬ್ಬರಿಗೂ ವಿಚಾರ ಶಕ್ತಿಯಿದೆ. ಅವರಿಗೂ 'ಬೇಕು ಬೇಡ'ಗಳಿವೆ ಎಂಬುದನ್ನರಿತ ವ್ಯಕ್ತಿ ಇನ್ನೊಬ್ಬರಿಗೆ ಹೊಂದಿಕೊಂಡು ಹೋಗುವ ರೀತಿಯಲ್ಲಿ ತನ್ನ ನೀತಿಯನ್ನು ಬದಲಾಯಿಸಿದರೆ ಯಾವ ಘರ್ಷಣೆಯೂ ಹುಟ್ಟುವದಿಲ್ಲ. ಆಗ ಸಂಸಾರ ಸ್ವರ್ಗವಾಗುತ್ತದೆ. ಆದರೆ—"

"—ಆದರೆ ಸ್ತ್ರೀ ಯಾವಾಗಲೂ ಹೊಂದಿಕೊಳ್ಳುವದಕ್ಕೆ ಯತ್ನಿಸುತ್ತಾಳೆ. ಅವಳು ಹೊಂದಿಕೊಳ್ಳುವದಕ್ಕೆ ಯತ್ನಿಸಿದಷ್ಟೂ ಗಂಡಸು ಆವಳನ್ನು ಮೆಟ್ಟುತ್ತಾನೆ. ಅಂತೆಯೇ ಕೋಲಾಹಲ " ಎಂದೂ ಅವಳ ವಾದ.

ಕಾಮಿನಿಯ ವಾದ ಸತ್ಯ. ಆದರೆ ಅದರಿಂದಾಗಿ ಗಂಡಸಿನಿಂದ ದೂರಿರಲು ಸಾಧ್ಯವೆ...? ಗಂಡಸು ಅತ್ಯಾಚಾರಿ ಎಂದು ಅವನಿಂದ ಬೇರೆಯಾಗಿ ಸ್ತ್ರೀ ಸಾಮ್ರಾಜ್ಯ ಸ್ಥಾಪಿಸಿಕೊಂಡಿರಲು ಸಾಧ್ಯವೆ....?

ನನಗೂ ರಂಗನಿಂದಾಗಿ ಗಂಡಸರ ಮೇಲೆಲ್ಲ ಕೋಪ. ಆದರೆ ಆ ಕೋಪದಿಂದ ನಾನು ಒಬ್ಬಳೇ ಇರಲು ಸಾಧ್ಯವೆ....? ಕುಲಕರ್ಣಿಯವರೂ ರಂಗನ ಜಾತಿಯವರೇ ಅಲ್ಲವೆ....? ರಂಗನನ್ನು ಹಾಳು ಮಾಡಿದರೆ ಕುಲಕರ್ಣಿಯವರು ಉದ್ಧಾರಕ್ಕೆ ಟೊಂಕಕಟ್ಟಿಲ್ಲವೆ....?

ಅವರಿಂದ ನನ್ನ ಉದ್ಧಾರ ಸಾಧ್ಯವೇ...?

ಅವರಿಂದ ಅಸಾಧ್ಯವಾದರೆ ಇನ್ನಾರಿಂದಲೂ ಸಾಧ್ಯವಿಲ್ಲ. ಇನ್ನಾರಿಗೂ ಸಾಧ್ಯವಿಲ್ಲದನ್ನು ಅವರು ಮಾಡಿದ್ದಾರೆ ಅಂದಮೇಲೆ ಇದು ಅವರಿಗೆ ಅಸಾಧ್ಯವಲ್ಲ ಆದರೆ ಅವರು ಮನಸ್ಸು ಮಾಡಬೇಕು.

ನನಗಾಗಿ ಏತಕ್ಕೆ ಅವರು ಮನಸ್ಸು ಮಾಡಬೇಕು....? ನಾನೇನೂ ವಿಶ್ವಾಮಿತ್ರನನ್ನು ಆಕರ್ಷಿಸಿದ ಮೇನಕೆಯಲ್ಲ. ವಿಶ್ವಾಮಿತ್ರನನ್ನು ಆಕರ್ಷಿಸಿದ ಮೇನಕೆ ನಾನಾಗಿರದಿದ್ದರೂ ಮೇನಕೆಯೇನೂ ಸುಳ್ಳಲ್ಲ.

ಅಲ್ಲ...ನಾನು ಮೇನಕೆಯೂ ಅಲ್ಲ. ಮೇನಕೆಯಂತೆ ನಾನೂ ಕೂಡ ಶಕುಂತಲೆಯನ್ನು ಹೆತ್ತಿದ್ದರೆ ಕುಲಕರ್ಣಿಯವರು ಕಣ್ವರಾಗಿ ಕೂಸನ್ನು ಭರತನನ್ನಾಗಿ ಮಾಡಬಹುದಿತ್ತು. ಆದರೆ...!

ಆದರೆ ಕುಲಕರ್ಣಿಯವರು ಕಣ್ವರಾಗುವದು ಬೇಕಿರಲಿಲ್ಲ ನನಗೊಬ್ಬ ಳಿಗೇ ಅಲ್ಲ ಕಾಮಿನಿಗೆ ಕೂಡ. ಅವಳೇ ಆಗೀಗ ಆಡಿ ತೋರಿಸಲಿಲ್ಲವೆ....?

" ಈ ಕಾರ್ಯವಂತೂ ಮುಗಿಯಲಿ ಆ ಮೇಲೆ ಮುಂದಿನ ಕಾರ್ಯಕ್ಕೆ ನಾನಿರುವೆ" ಎಂದು ಕುಲಕರ್ಣಿಯವರ ಜೊತೆಗೆ ನನ್ನ ವಿವಾಹ ಪ್ರಸ್ತಾವ ದಲ್ಲಿ ಹೇಳಿದ್ದಳು.

ಆದರಿಂದಾಗಿ ನನಗೂ ಕುಲಕರ್ಣಿಯವರಲ್ಲಿ ಆಶೆ.

ಅವರಿಗಾಗಿ ಯಾವ ಹೆಣ್ಣಿನಲ್ಲಿ ಆಶೆ ಹುಟ್ಟಲಿಕ್ಕಿಲ್ಲ...?

" ಅಂತಹ ಪತಿ ದೊರೆಯಬೇಕಾದರೆ ಸಾವಿರ ಜನ್ಮ ತಪಶ್ಚರ್ಯ ಮಾಡಿರಬೇಕು" ಎಂದು ಕಾಮಿನಿ ಹೇಳಬೇಕಾದರೆ ಕುಲಕರ್ಣಿಯವರು ಅದ್ಭುತರಿರಲೇಬೇಕು. ಸಮಸ್ತ ಗಂಡು ಜಾತಿಯನ್ನೇ ನಿರ್ಮೂಲನ ಮಾಡ ಬೇಕೆನ್ನುತ್ತಿರುವ ಕಾಮಿನಿಯಿಂದ ಕೂಡ ಅವರು ಹೊಗಳಿಸಿಕೊಳ್ಳುತ್ತಿರು ವರು !!

ಅವರೇ ನನಗೆ ಪತಿಯಾಗಿ ದೊರೆತರೆ....?

ದೊರೆಯಬಹುದೆ....?

"ನೀನು ಸಿದ್ಧಳಾಗು. ಉಳಿದೆಲ್ಲ ಕಾರ್ಯದ ಹೊಣೆ ನನ್ನ ಮೇಲೆ ಎಂದು ಕಾಮಿನಿ ಹೇಳುತ್ತಾಳೆ.

ನಾನು ಬಾಯಿಬಿಚ್ಚಿ " ಹೂಂ " ಎಂದು ಹೇಗೆ ಹೇಳಲಿ ? ಅಲ್ಲದೆ ಅವರಲ್ಲಿದ್ದುಕೊಂಡು ಆಶ್ರಯಕೊಟ್ಟವರ ಮೇಲೆ ಕಣ್ಣು ಹಾಕಿದಂತಾಗು ವದಿಲ್ಲವೆ...? ಅದು ಪಾಪ ಅಲ್ಲವೆ ?

"ಪಾಪ ಪುಣ್ಯದ ಕೃತಿಗಿಂತ ಪರಿಣಾಮವನ್ನವಲಂಬಿಸಿರುತ್ತದೆ" ಎಂದು ಕಾಮಿನಿಯು ಹೇಳುತ್ತಾಳೆ.

" ಪರಿಣಾಮ ಒಳ್ಳೆಯದಾದರೆ ಪುಣ್ಯ. ಕೆಡಕಾದರೆ ಪಾಪ. ವಿವಾಹಹ ಪೂರ್ವ ಬಸಿರಾಗುವದು ಪಾಪ ಎಂದು ಹೇಳುತ್ತಾರೆ. ಆದರೆ ಶಕುಂತಲೆಯ ಮಗ ಭರತ ಪುಣ್ಯ ಪುರುಷನೆ ? ಅಥವಾ... ಪಾಪಿಯೇ ? ವಿಶ್ವಾಮಿತ್ರನ ಮಗಳಿಂದ, ಕಣ್ವಋಷಿಯ ಸಾಕುಮಗಳಿಂದ ಪಾಪದ ಕಾರ್ಯವಾಗ

ಬಹುದೆ....? ಅದು ಪಾಪವೇ ಆಗಿದ್ದರೆ ಇಂದಿಗೂ ಅವಳ ಕತೆ ನಾಡಿನ ನುಡಿ ಗಳಲ್ಲಿ ಏಕೆ ಪ್ರತಿಧ್ವನಿಸುತ್ತಿತ್ತು....? ಕೃತಿಯಾಗುವದು ಕರ್ತವ್ಯದ ಅಥವಾ ಕರ್ಮದ ಒತ್ತಾಯದಿಂದ. ಆಗ್ಗೆ ಅಲ್ಲಿ ವಿಚಾರಕ್ಕೆ ಅವಕಾಶವಿರುವದಿಲ್ಲ. ಕೃತಿ ನಡೆದನಂತರ ಮುಂದೆ ಸರಿಯಾಗಿ ಸಾಗಿಸಿಕೊಂಡು ಹೋದರೆ ಅದು ಪುಣ್ಯ. ಅದನ್ನು ಅಡ್ಡ ದಾರಿಯಲ್ಲಿ ಸಾಗಿಸಿದರೆ ಪಾಪ."

"ವಿವಾಹ ನಿನ್ನ ಪಾಲಿಗೆ ಒಂದು ಕರ್ಮ. ಕುಲಕರ್ಣಿಯವರಿಗೆ ಕರ್ತವ್ಯ. ಕರ್ತವ್ಯಪಾಲನೆಯಾಗಲಿ, ಕರ್ಮಾಚರಣೆಯಾಗಲಿ ........ಪಾಪ ವಲ್ಲ...." ಎಂದು ಕಾಮಿನಿ ಸಾರುತ್ತಾಳೆ.

ನಾನು ಕಾಮಿನಿ ಇಬ್ಬರೂ ಕೂಡ "ಇದು ಪಾಪವಲ್ಲ" ಎಂದು ಅಂದುಕೊಂಡರೂ ಕುಲಕರ್ಣಿಯವರೂ ಅದಕ್ಕೆ ಒಪ್ಪಬಹುದೆ...?

ಅನೇಕ ದಿನಗಳಿಂದ ಅವರ ಸಹವಾಸದಲ್ಲಿದ್ದರೂ ಈ ವಿಷಯ ಅವರೊ ಡನೆ ಹೇಳಲು ಹೆದರಿಕೆ. ನಾಚಿಕೆ. ವಿವಾಹ ಮಾಡಿಕೊಳ್ಳುವದಕ್ಕೆ ರೋಮ ರೋಮಗಳು ತವಕಿಸುತ್ತಿದ್ದರೂ "ವಿವಾಹ ಮಾಡಿಕೊಳ್ಳುವಿಯಾ?" ಎಂದು ಸ್ತ್ರೀಯನ್ನು ಪ್ರಶ್ನಿಸಿದಾಗ ಅವಳು ಹೇಳುವದು ನಕಾರಾತ್ಮಕದಲ್ಲಿಯೇ. ಅದಕ್ಕೆ ಕಾರಣ ಲಜ್ಜೆ.

ಅದೇ ಲಜ್ಜೆಯೇ ನನ್ನಲ್ಲಿ. ಏಕೆಂದರೆ ನಾನೂ ಸ್ತ್ರೀ. ಸ್ತ್ರೀ ಸಹಜವಾದ ಲಜ್ಜೆಯಿಂದ ಅವಳು ಆದಾವ ಕಾಲದಲ್ಲಿ ಅದೆಂತಹ ಪರಿಸ್ಥಿತಿಯಲ್ಲಿಯೂ ದೂರಿರಲಾರಳು. ಅದು ಅವಳ ಜನ್ಮದ ಜೊತೆಗೆ ಅವಳಿಗೆ ಅಂಟಿಕೊಂಡು ಬಂದಿದೆ.

ಅವರೇ ಬಂದು ನನ್ನನ್ನು ಕೇಳಬಾರದೇಕೆ....? ಅವರಿಗೇನು ನನ್ನ ವಿಚಾರ ಗೊತ್ತಿಲ್ಲವೆ? ಮನೆ-ಮಾರು ತಂದೆ-ತಾಯಿಗಳನ್ನು ತೊರೆದು ಬಂದ ನನ್ನನ್ನು ಒಂದು ದಾರಿಗೆ ಹಚ್ಚಲೇಬೇಕಲ್ಲವೆ...? ಈ ಭಾರವನ್ನು ತಾವಾಗಿಯೇ ಅವರು ತಮ್ಮ ಮೇಲೆ ಹೊತ್ತುಕೊಂಡಿಲ್ಲವೆ....?

ಸ್ತ್ರೀಯನ್ನು ದಾರಿಗೆ ಹಚ್ಚುವದೆಂದರೆ ಅವಳ ಭಾರವನ್ನು ಯಾರಿ ಗೊಬ್ಬರಿಗೆ ವಹಿಸಿಕೊಡುವದು ಅಲ್ಲವೆ...? ಅವಳು ಚಿಕ್ಕವಳಿದ್ದಾಗ, ಅನಾಥೆ

ಯ್ಯಾದರೆ ಯಾರೊಬ್ಬರು ಸಲಹಬಹುದು. ಅವಳು ವಯಸ್ಸಿಗೆ ಬಂದ ನಂತ್ತರ ಸಲಹುವದು ಎಂದರೆ "ಅವಳ ಜೊತೆಗೆ ವಿವಾಹ" ಎಂದೇ ಅಲ್ಲವೆ ?

ಇಂತಹ ವಿಚಾರಗಳು ಕುಲಕರ್ಣಿಯವರಲ್ಲಿ ಇರಲಿಕ್ಕಿಲ್ಲವೆ...?

ಇದ್ದಿರಲೇಬೇಕು. ಅವರು ಜ್ಞಾನಿಗಳು ಅವರಿಗೆ ಎಲ್ಲ ವಿಷಯದ ವಿಚಾರವೂ ಇದೆ ನನ್ನನ್ನು ಕರೆದುಕೊಂಡು ಬಂದಾಗ ನನ್ನ ಭವಿತವ್ಯದ ವಿಚಾರವಿದ್ದಿರದಿದ್ದರೂ ಇಂದು ಆ ವಿಚಾರವಿಲ್ಲವೆ....?

ಅಥವಾ ಅವರೂ ಕೂಡ ನನ್ನ ವಿಷಯದಲ್ಲಿ ಉದಾಸೀನರಾಗಿರುವರೇ...? ನನ್ನ ಹಳೆಯ ಕೃತ್ಯವನ್ನು ಅವರು ಕ್ಷಮಿಸಿದ್ದರು. ಆದರೆ ಹೊಸ ಕೆಲಸ ಅವರಿಗೆ ನನ್ನ ವಿಷಯದಲ್ಲಿ ತಿರಸ್ಕಾರವನ್ನುಂಟು ಮಾಡಿರಬಹುದು !

ಅಹುದು ಅದು ಯಾರಲ್ಲಿಯೂ ತಿರಸ್ಕಾರವಮಾಡಿಸುವಂತಹ ಕೀಳು ಕಾರ್ಯ. ನಾನು ಕಾರ್ಯಕ್ಕೆ ಕೈಹಾಕಬಾರದಾಗಿದ್ದಿತು.

ಆದರೆ ಆದು ನನ್ನ ಕಾರ್ಯವಲ್ಲ ನನ್ನಿಂದ ಅದು ಅದೆಂದಿಗೂ ಸಾಧ್ಯವಿಲ್ಲ. ಕಾಮಿನಿಯೇ ಆ ಕಾರ್ಯವನ್ನು ಮುಗಿಸಿದಳು. ಅವಳು ಕೊಲೆಪಾತಕಿ.......ಕನಿಕರ, ಮಾಯೆ, ಮಮತೆ ಯಾವುದನ್ನೂ ಅರಿಯದ ರಾಕ್ಷಸಿ ಅವಳು.

ಅವಳ ಕಾರ್ಯದಿಂದ ಅವಳ ಮೇಲೆ ತುಂಬ ಕೋಪಬರುತ್ತದೆ ಒಂದು ಸಲ. ಆದರೆ ಅವಳು ಹೇಳಿದುದನ್ನು ಕೇಳಿದರೆ ಅವಳು ಮಾಡಿದ್ದೇ ಯೋಗ್ಯ ಎನ್ನಿಸುತ್ತದೆ. ಅಲ್ಲದೆ ಹೆರವರಿಗಾಗಿ ಎಂತಹ ಕ್ರೂರ ಕೃತ್ಯಗಳನ್ನು ಮಾಡಿ ತನ್ನ ಉಡಿಯಲ್ಲಿ ಪಾಪ ಕೊಳ್ಳುವಳಲ್ಲ ಎಂದು ಕೆಡಕೆನ್ನಿಸುತ್ತದೆ.

ಅವಳು ಹೇಳುವದರಲ್ಲಿ ಅಸತ್ಯವಾದರೂ ಏನಿದೆ.......? ಗಂಡನಿಲ್ಲದೆ ಹೆತ್ತ ಕೂಸಿನ ತಾಯಿಯನ್ನು ವಿವಾಹ ಮಾಡಿಕೊಳ್ಳಬೇಕಾರು....? ಅದೂ ಕೂಸು ತಾಯಿಯ ಜೊತೆಗೆ ಇದ್ದಾಗ...?

ನಾನು ಕಂಕುಳಲ್ಲಿ ಕೂಸನ್ನೆತ್ತಿಕೊಂಡು ವಿವಾಹದ ಹಸೆಯ ಮೇಲೆ ಕುಳಿತುಕೊಳ್ಳಬಹುದೆ....? ಇದನ್ನು ನನ್ನ ಮನ ಕೂಡ ಒಪ್ಪದು ಅಂದ ಮೇಲೆ ವಿವಾಹ ಮಾಡಿಕೊಳ್ಳುವ ಗಂಡಹು ಹೇಗೆ ಒಪ್ಪುವನು...?

ತಾವು ಸಾವಿರ ಹೆಣ್ಣಿಗಾಗಿ ಮನದಲ್ಲಿ ಮಂಡಿಗೆ ಹಾಕುತ್ತಿದ್ದರೂ ತಮ್ಮ ಹೆಂಡತಿ ಇನ್ನೊಬ್ಬರ ವಿಚಾರ ಮಾಡುವದನ್ನೂ ಸಹಿಸದ ಗಂಡುಜಾತಿ ಯಾರೊಬ್ಬರ ಮಗನ ತಾಯಿಯನ್ನು ವಿವಾಹವಾಗಲು ಹೇಗೆ ಒಪ್ಪು ವರು....?

"ಸುಮಿತ್ರಾ.......ಒಂದು ಸುಖಕ್ಕಾಗಿ ಇನ್ನೊಂದಕ್ಕೆ ತಿಲಾಂಜಲಿ ಕೊಡಬೇಕಾಗುತ್ತದೆ. ವೈವಾಹಿಕ ಜೀವನದ ಸುಖಕ್ಕಾಗಿ ತಂದೆ-ತಾಯಿ ಗಳ ಸುಖಕ್ಕೆ ನಾವು ಎರವಾಗಬೇಕಾಗುತ್ತದೆ. ನಿನ್ನ ಸಂಸಾರದ ಸುಖ ಕ್ಕಾಗಿ ನೀನು ಮಗುವಿನ ಸುಖದ ಆಶೆ ಬಿಡಬೇಕಾಗಿದೆ........ಸುಮಿತ್ರಾ .. ಜಗ ತುಂಬಾ ಕಠೋರವಿದೆ. ಆದರ ಅರಿವು ನಮಗಿದ್ದರೂ ಮರೆತುಬಿಡು ತ್ತೇವೆ. ಯಾವುದೊಂದು ವಿಚಾರದಲ್ಲಿ ವ್ಯೆಮರೆತು ಜನರು ನಿನ್ನ ಪ್ರಾಮಾ ಣಿಕ ಮನವನ್ನೊಪ್ಪಿಕೊಳ್ಳುವದಿಲ್ಲ. ನಿನ್ನ ದೇಹವನ್ನು ನೋಡುತ್ತಾರೆ. ನಿನ್ನ ಕೃತಿಯನ್ನು ಕಾಣುತ್ತಾರಲ್ಲದೆ ಕೃತಿಯಹಿಂದೆ ಅಡಗಿದ ಇನ್ನೊಬ್ಬರ ಕರಾಳ ಕೃತಿಯನ್ನು ನೋಡುವದಿಲ್ಲ. ವಿಚಾರ ಮಾಡುವದಿಲ್ಲ. ಬೀದಿಯಲ್ಲಿ ನಾಯುತ್ತ ಬಿದ್ದ ನಾಯಿಗೆ ನೀರು ಹಾಕಿ ಪರೋಪಕಾರದ ಪುಣ್ಯ ಕಟ್ಟಿ ಕೊಳ್ಳಬಯಸುವವರು ಕೆಟ್ಟ ಹೆಣ್ಣಿಗಾಗಿ ಸಹಾನುಭೂತಿ ವ್ಯಕ್ತಪಡಿಸುವ ದಿಲ್ಲ. ಮನದಲ್ಲಿ ಅದೇ ಹೆಣ್ಣಿಗಾಗಿ ಎಳೆತವಿದ್ದರೂ ಕೂಡ ಬೀದಿಯಲ್ಲಿ ಸಹಾನುಭೂತಿ ವ್ಯಕ್ತಪಡಿಸಿ ಒಳಕ್ಕೆ ಕರೆಯಲಾರರು. ಆದರೆ ಜನರಿಗೆ ಗೊತ್ತಾಗದ ರೀತಿಯಲ್ಲಿ ಹಿತ್ತಲಬಾಗಿಲು ತೆರೆದಿಡುತ್ತಾರೆ. ಅವಳು ಬರು ವಳೆಂದು ಭಾವಿಸಿ ಬಾಗಿಲುತೆರೆದು ಬೆಳಗಿನವರೆಗೂ ನಿದ್ರೆಯಿಲ್ಲದೆ ಕೂಡು ವರು ಈಜನ.......ಪ್ರತಿಯೊಬ್ಬನೂ ಇದನ್ನೇ ಮಾಡುತ್ತಿದ್ದರೂ ಬಹಿರಂಗ ದಲ್ಲಿ ಎಲ್ಲರೂ ಶುಕಮುನಿಯ ದತ್ತಕ ಪುತ್ರರು. ನಿನ್ನ ಕೃತಿಯನ್ನೇ ನಿಂದಿಸಿ ತನ್ನ ಸಜ್ಜನತೆಯನ್ನು ಮಣಮಣವಾಗಿ ಹೆಚ್ಚಿಸಿಗೊಳ್ಳುವವನೇ ನಿನ್ನ ನಿಂದೆಗೀಡುಮಾಡುವ ಕೃತಿಮಾಡಿದ ಮಹಾನುಭಾವನಾಗಿರುತ್ತಾನೆ...."

"ಸುಮಿತ್ರಾ.... ಈ ಜಗವನ್ನು, ಈ ಜನವನ್ನು ನೋಡಿ ನೋಡಿ ನನ್ನ ಕಣ್ಣು ಅಂಧವಾಗತೊಡಗಿವೆ. ಈ ಜನದ ಕೃತಿಯನ್ನು ಹೃದಯ ದಲ್ಲಿಟ್ಟು ಹೃದಯ ಬಿರಿಯುವಂತಾಗಿದೆ. ಎಲ್ಲಿಯೇ ನೋಡಲಿ ಅವೇ

ಕಂಗಳು. ಅವೇ ತಿವಿಯುವ ಕಂಗಳು. ವರುಷವರುಷದಿಂದ ಊಟವಿಲ್ಲದೆ ತಿರಗುವ ಬಿಕ್ಷುಕ ಮಗುವಿನಂತಹ ಆಶೆಬುರುಕ ಕಂಗಳು...ಎಲ್ಲೆಲ್ಲಿಯೂ ಅವೇ ಕಂಗಳು. ದೊಡ್ಡವರಲ್ಲಿ, ಚಿಕ್ಕವರಲ್ಲಿ, ತರುಣರಲ್ಲಿ, ಮುದುಕರಲ್ಲಿ, ವಿವಾಹಿತರಲ್ಲಿ, ಅವಿವಾಹಿತರಲ್ಲಿ, ಜ್ಞಾನಿಗಳಲ್ಲಿ, ಅಜ್ಞಾನಿಗಳಲ್ಲಿ ಎಲ್ಲೆಲ್ಲಿಯೂ ಅವೇ. ಅವೇ ಆಶೆಯಿಂದ ಸ್ತ್ರೀಯನ್ನು ಹರಿದು ತಿನ್ನುವ ಕಂಗಳು.... ಮೇಲೆ ಆ ಪರಮಹಂಸರು ಕೂಡ ಹೇಳದಂತಹ ವೇದಾಂತ— ಒಳಗೆ ತಾವೇ ಕೃಷ್ಣ ಕಂಡ ಸ್ತ್ರೀಯರೆಲ್ಲ ಗೋಪಿಕಾ ಸ್ತ್ರೀಯರು ಎನ್ನುವ ವಿಚಾರ...."

" ಎಲ್ಲರನ್ನೂ ಸಿಗಿದು ಹಾಕಬೇಕೆನ್ನಿಸುತ್ತದೆ. ಸುಟ್ಟು ಹಾಕಬೇಕೆನ್ನಿಸುತ್ತದೆ ಸುಮಿತ್ರಾ ನಾನು ತಾಯಿಯ ಮಮತೆಯಿಂದ ರೋಗಿಯ ಆರೈಕೆ ಮಾಡುತ್ತೇನೆ. ಅದನ್ನುಹುಂಬ ಹುಚ್ಚ ಗಂಡು ಅವನನ್ನು ಮೋಹಿಸಿ ತೋರುವ ಪ್ರೀತಿ ಎಂದು ಭಾವಿಸುತ್ತಾನೆ. ಅದಕ್ಕಾಗಿ ಹೇಸಿಗೆ ಬರುತ್ತದೆ. ಆದರೂ ನರಳುವ ರೋಗಿ ಅಜ್ಞಾನಿ ಮಗು ಎಂದು ಭಾವಿಸಿ ಅವನ ಆರೈಕೆ ಮಾಡುವೆ. ಯಾರ ಜೊತೆಗಾದರೂ ಮಾತನಾಡಿದರೆ ನಾನು ಅವರವಳಾದೆನೆಂದೇ ಭಾವಿಸಿ ಇದ್ದ ಕೆಲಸವನ್ನು ಬಿಟ್ಟು ನನಗಾಗಿ ದಾರಿಕಾಯುತ್ತ ನಿಲ್ಲುತ್ತಾರೆ ಈ ಜನ.... ಯಾರ ಕೈಗೂ ಸಿಕ್ಕದಾಗಲು ಕೊನೆಗೆ ಎಲ್ಲರೂ ಹೇಳುವದು "ಕಾಮಿನಿ ಕೇಳು... ಕಂಡ ಗಂಡಸರನ್ನೆಲ್ಲ ಬುಟ್ಟಿಗೆ ಹಾಕಿಕೊಳ್ಳುವ ಬೇಟೆಗಾರ್ತಿ" ಎಂದು...

" ಹೇಗಿದೆ ಜಗತ್ತು....? ಬೇಡವೆನ್ನಿಸುತ್ತದೆ ಬಾಳಲು. ಆದರೂ ಬಾಳಬೇಕಾಗಿದೆ. ಏಕೆ......? "

" ಅದಕ್ಕೆ ಉತ್ತರ ನನ್ನಲ್ಲಿಲ್ಲ. "

"ಆಶೆಯಿಂದ ಹೃದಯ ತುಂಬಿದಾಗ 'ಬದುಕುವದೇ?' ಎನ್ನುವ ಪ್ರಶ್ನೆಗೆ ಉತ್ತರ ಕೊಡಬಹುದಿತ್ತು. ಆದರೆ ಆಶೆಯ ಭಸ್ಮವನ್ನೇ ಮುಖಕ್ಕೆ 'ಪಾವಡರ' ಹೆಂದು ಹಚ್ಚಿಕೊಂಡಾಗ ಅದಕ್ಕೆಉತ್ತರ ಕೊಡಲು ಸಾಧ್ಯವಿಲ್ಲ. ಅಲ್ಲದೆ ಅದಕ್ಕೆ ಉತ್ತರ ನನಗೆ ಗೊತ್ತಿಲ್ಲ. "

" ಆದರೂ ಬದುಕುತ್ತಿದ್ದೇನೆ..... ನನ್ನ ಜೀವನದಲ್ಲಿ ಆನಂದವಿಲ್ಲ. ದೊರೆಯುವದೂ ಸಾಧ್ಯವಿಲ್ಲ. ಏಕೆಂದರೆ ನನ್ನ ಮನಸ್ಥಿತಿಯೆ ಹಾಗಿದೆ. ...."

ಭದ್ರವಾಗಿ ಉಳಿಯಬಹುದೆಂದು ಎತ್ತಿಕೊಂಡ ಬಾಳಿನ ಮಡಿಕೆ ಚೂರು ಚೂರಾಗಿದೆ. ಅದು ಒಂದಾಗುವದು ಸಾಧ್ಯವಿಲ್ಲ. ಇನ್ನೊಂದನ್ನು ತೆಗೆದುಕೊಳ್ಳ ಬಾರದೆಂದು ಹೇಳುವವಳು ನಾನಲ್ಲ. ಆದರೆ ಅದು ನನ್ನಿಂದ ಸಾಧ್ಯವಿಲ್ಲ. ಏಕೆಂದರೆ ಅದಕ್ಕಾಗಿ ನನಗೆ ಹೇಸಿಗೆ ಬಂದಿದೆ. 'ಎಲ್ಲರೂ ಒಂದೇ' ಎನ್ನುವ ಭಾವನೆ ಬಲವಾಗಿ ಬೆಳೆದು ಬಂದಿದೆ. 'ಎಲ್ಲರೂ ಒಂದೇ' ಅಲ್ಲ. ಎನ್ನುವದು ನನಗೂ ಗೊತ್ತಿದೆ. ಇದೇ ಜಗದಲ್ಲಿ ನನ್ನ ಪತಿಯೂ ಇರುವನು. ನಿನ್ನ ರಂಗನೂ ಇರುವನು. ಅದರಂತೆ ಕುಲಕರ್ಣಿಯವರೂ ಇರುವರು.... ಆದರೂ ನನಗೆ ಯಾವದೂ ಬೇಡವಾಗಿದೆ. "

ಹಾಗಾದರೆ ಬಾಳುವದಾದರೂ ಏಕೆ?"

" ಈ ಪ್ರಶ್ನೆ ತಿರುತಿರುಗಿ 'ಮಗುವಿನ ಹಟದಂತೆ' ನನ್ನನ್ನು ಕಾಡು ತ್ತಿದೆ. 'ಬಾಳುತ್ತಿರುವೆ ' ಎಂದು ಹೇಳುವೆನಲ್ಲದೆ ? 'ಏಕೆ' ಎನ್ನುವ ಪ್ರಶ್ನೆಗೆ ಉತ್ತರ ಕೊಡುವದಿಲ್ಲ. ಏಕೆಂದರೆ ನನ್ನಲ್ಲಿ ಅದಕ್ಕೆ ಉತ್ತರವಿಲ್ಲ."

ಸುಮಿತ್ರಾ.... ನಾನು ಬೇರೆ ಯಾವುದಾದರೂ ಕಡಿಮೆ ತೊಂದರೆಯ ಕೆಲಸ ಮಾಡಿಕೊಂಡಿರಬಹುದಿತ್ತು. ಶಾಲೆಯಲ್ಲಿ ಶಿಕ್ಷಕಿಯಾಗಲು ಸಾಧ್ಯವಿತ್ತು ಆದರೆ ಜೀವನದಲ್ಲಿ ನಿರಾಶೆ ಹೊಂದಿದವಳು ಬೆಳೆಯುವ ಮಕ್ಕಳಲ್ಲಿ ಹೊಸಜೀ ವನಕ್ಕಾಗಿ ಹೊಸ ಜಗಕ್ಕಾಗಿ ಆಶೆ ತುಂಬಲು ಅಂದು ಅಸಾಧ್ಯವೆನ್ನಿಸಿತು. ನಾನೂ ದುಃಖಿ ದುಃಖಿಗಳಿಗೆ ದುಃಖ ತೀವ್ರ ಕಾಣುತ್ತದೆ.....ಅಂತೆಯೇ.... ಸೇವೆ ಎಂದು ಈ ಕಾರ್ಯಕ್ಕೆ ಇಳಿದಿರುವೆ."

" ಸೇವೆ ಮಾಡವಾಗ ಕೂಡ ಪಾಪವನ್ನು ಉಡಿಯಲ್ಲಿ ಕಟ್ಟಿಕೊಳ್ಳುವೆ. ಏನು ಮಾಡಲಿ...? ನಾನು ಆ ಪಾಪವನ್ನು ಮಾಡದಿದ್ದರೆ ಬಾಳುವ ನೀನು ಮುಗ್ಗರಿಸಿ ಬೀಳಬಹುದಿತ್ತು. ನಿನ್ನ ಬಾಳನ್ನು ರೂಪಿಸುವ ಶಕ್ತಿ ನನ್ನಲ್ಲಿಲ್ಲ. ನಿಜ. ಆದರೆ ರೂಪಿಸಿಕೊಳ್ಳುವದಕ್ಕೆ ಸಹಾಯ ಮಾಡುವುದೂ ಕೂಡ ಸಾಧ್ಯವಿ ಲ್ಲವೆ...?

" ಪಾಪವಿರಲಿ ಪುಣ್ಯವಿರಲಿ ನನ್ನಿಂದಾದ ರೀತಿಯಲ್ಲಿ ಇನ್ನೊಬ್ಬರಿಗೆ ಸಹಾಯ ಮಾಡುವೆ. ಅದರಲ್ಲಿಯೇ ದೊರಕಿದ ಆನಂದದಲ್ಲಿ ದಿನ ಕಳೆಯುವೆ."

" ನಾನು ಕೆಲಸ ಮಾಡುವದು ದೊರಕಿಸಲಿಕ್ಕಲ್ಲ. ಬದುಕಲಿಕ್ಕೆ.... ಬದುಕಿಸಲಿಕ್ಕೆ "

" ತಂದೆಗೆ ಒಬ್ಬಳೇ ಮಗಳಾದ ನನಗೆ ತಂದೆಯ ಮನೆಯಲ್ಲಿ ನನ್ನದೇ ಆದ ವೈಭವ ಸಾಕಷ್ಟಿದೆ, ತಾನಾಗಿಯೇ ಬಂದು ಕರೆದರೂ ಹೋಗದ ನಾನು ನಾನಾಗಿಯೇ ಹೋದರೆ ತಂದೆ ಆನಂದದಿಂದ ಸ್ವಾಗತ ಮಾಡುವ. ಆದರೂ ಹೋಗುವ ಇಚ್ಛೆಯಿಲ್ಲ. ' ಪರಿತ್ಯಕ್ತೆ 'ಯಾಗಿ ತಂದೆಯ ಮನೆ ಸೇರಿ ಅವನಿಗೊಂದು ಬೇಳೆಯಾಗಿರುವದು ನನಗೆ ಬೇಡವಾಗಿದೆ. ಸಾಧ್ಯವಿರುವಷ್ಟು ದಿನಸ ಬದುಕುವೆ. ಬದುಕುವದು ಅಸಾಧ್ಯವೆನ್ನಿಸಿದಾಗ ನನ್ನನ್ನು ತನ್ನ ಉಡಿಯಲ್ಲಿ ತೆಗೆದುಕೊಳ್ಳಲು ಜಲದೇವತೆ ಸಿದ್ಧಳಿರುವಳು. ಆ ಶಕ್ತಿಯು ನನ್ನಲ್ಲಿದೆ. ಅದನ್ನು ಸಾಧ್ಯಮಾಡಿಕೊಂಡಿರುವೆ.

ಸುಮಿತ್ರಾ ಒಂಟಿಯಾಗಿ ಬಾಳುವದು ನನ್ನಿಂದ ಅಸಾಧ್ಯವಲ್ಲ ಆದರೆ ನಿನ್ನಿಂದ ಅದು ಸಾಧ್ಯವಿಲ್ಲ ಸಾವಿರ ಗಂಡಸರ ಮಧ್ಯದಲ್ಲಿ ಕೂಡ ನಾನು ಸುರಕ್ಷಿತಳಾಗಿ ಬಾಳಬಲ್ಲೆ. ಹಾಗೆ ಬಾಳುವದಕ್ಕೆ ನಿನ್ನ ಮನಸ್ಥಿತಿಯಲ್ಲಿ ಸಾಧ್ಯವಿಲ್ಲ.

ಅದಕ್ಕೆ ನಾನು ನಿನಗೆ ವಿವಾಹ ಮಾಡಿಕೊ ಎಂದು ಹೇಳುವೆ ವಿವಾಹದ ದಾರಿಯಲ್ಲಿ ಅಡ್ಡಬರುವ ತೊಂದರೆಯನ್ನು ನಿವಾರಿಸಿದೆ....ತೀವ್ರವಾಗಿ ನಿನ್ನ ವಿವಾಹ ಮಾಡುವದಕ್ಕೂ ಪ್ರಯತ್ನಿಸುವೆ. "

ಎಂದು ಕಾಮಿನಿ ಹೇಳಿ ನನ್ನ ವಿವಾಹ ಮಾಡುವದಕ್ಕೂ ಸಿದ್ಧಳಾಗುತ್ತಾಳೆ.

ಅವಳಂತೆ ನಾನೂ ವಿವಾಹವಿಲ್ಲದೆ ಇರಬೇಕು, ಎನ್ನಿಸುತ್ತದೆ ಆದರೆ ಅವಳು ಹೇಳುವಂತೆ ಅದು ನನಗೆ ಅಸಾಧ್ಯ ಏಕೆಂದರೆ ನನ್ನ ಮನಸ್ಸು ಚಂಚಲವದೆ.

ಎಲ್ಲರೂ ಕಾಮಿನಿಯರಾಗಲು ಸಾಧ್ಯವೆ....? ಪತಿಯ ಕೃತಿಗೆ ಹೇಸಿ ಅವನಿಂದ ದೂರಾಗುವ ಸತಿಯರು ಎಷ್ಟು ನಮ್ಮಲ್ಲಿ....? ವೈಭವವೇ ಅವಳೆದುರು ರಾಸಿಯಾಗಿ ಬಿದ್ದಿದ್ದರೂ ಅದನ್ನು ತ್ಯಜಿಸಿ ತನ್ನ ಹೊಟ್ಟೆಗಾಗಿ ದುಡಿಯುವವರೆಷ್ಟು ಜನ ನಮ್ಮಲ್ಲಿ....?

ಕಾಮಿನಿ ಸಾಮಾನ್ಯಳಲ್ಲ. ಅವಳಲ್ಲಿ ಶಕ್ತಿಯಿದೆ.

ಪತಿ ಎಂತಹನೇ ಇರಲಿ ಏನೇ ಮಾಡಲಿ ಎಂದು ಅವನ ದಾಸಿಯು ರಾಗಿ ಬಿದ್ದುಕೊಂಡಿರುವವರು ನಾವು. ಏಕೆಂದರೆ ಅವನಿಗೆ ವಿರುದ್ಧವಾಗಿ ಪ್ರತಿಭಟಿಸುವ ಶಕ್ತಿ ನಮ್ಮಲ್ಲಿಲ್ಲ....ನನ್ನಲ್ಲಿಲ್ಲ.

ಅಂತಹ ಶಕ್ತಿ ಇದ್ದುದಾದರೆ ನಾನು "ನನಗೇನೂ ಅರಿಯದು" ಎಂದು ಹೇಳಿದ ರಂಗನ ಕೈಹಿಡಿದು "ನಿನಗಾವ ವಿಷಯ ಅರಿಯದ್ದಿದೆ...? ಎಂದು ಕೇಳಬಹುದಿತ್ತು.

ಆದರೆ ಅಂತಹ ಧೈರ್ಯವಿಲ್ಲದ್ದಕ್ಕಾಗಿ ಮುಖ ಮುಚ್ಚಿಕೊಂಡು ರಾತ್ರಿ ಯಲ್ಲಿ ಹೊರಟೆ ಮನೆಯಿಂದ. ನನ್ನ ಸ್ಥಳದಲ್ಲಿ ಕಾಮಿನಿ ಇದ್ದರೆ...?

ಕಾಮಿನಿ ಕೂಡ ಮನೆ ಬಿಡುವಾಗ ತನ್ನ ಪತಿಯ ಜೊತೆಗೆ ಕಾದಾಡಿ ಬಂದಿರಬಹುದೆ ...? ಅಥವಾ ನನ್ನಂತೆಯೇ ಸದ್ದಿಲ್ಲದೆ ರಾತ್ರಿ ಓಡಿಬಂದಿರ ಬಹುದೆ...?

ಓಡಿ ಬರುವ ಹೆಣ್ಣು ಕಾಮಿನಿ ಅಲ್ಲ. ಅಲ್ಲದೆ ಅವಳು ಓಡಿ ಬರುವ ಪ್ರಸಂಗವಾದರೂ ಏನು....? ವಿವಾಹ ಮಾಡಿಕೊಂಡ ಪತಿಯ ಮನೆಯಲ್ಲಿರು ವಾಗ ಅಂತಹ ಪ್ರಸಂಗವಾದರೂ ನಿರ್ಮಾಣವಾಗುವದು ಹೇಗೆ...? ಅವಳು ಓಡಿ ಬಂದಿರಲಾರಳು.

ತನ್ನಮೇಲೆ ಅನ್ಯಾಯಮಾಡಿದ ಪತಿಯನ್ನು ತಾನೇ ತ್ಯಜಿಸಿ ಬಂದಿರ ಬಹುದು.

ತಾನು ಪತಿಯನ್ನು ತ್ಯಜಿಸಿಬಂದು ಇನ್ನೊಬ್ಬರಿಗೆ ಪತಿ ದೊರಕಿಸಿ ಕೊಡಲು ಹೊರಟಿದ್ದಾಳೆ. ಅವಳು ತನ್ನ ಕಾರ್ಯದಲ್ಲಿ ಯಶಸ್ವಿಯಾಗಬ ಹುದೆ...?

" ಯಶಾಪಶಯಶಗಳ ವಿಚಾರ ಮಾಡದೆ ಕಾರ್ಯ ಕೈಕೊಳ್ಳಬೇಕು. ಆದರೆ ಕಾರ್ಯ ಕೈಕೊಳ್ಳುವ ಪೂರ್ವದಲ್ಲಿ ಕೈಕೊಳ್ಳುವ ಕಾರ್ಯ ಒಳ್ಳೆಯ ದಿದೆ. ಎನ್ನುವದನ್ನು ಮನಗಾಣಿಸಿಕೊಳ್ಳಬೇಕು .... ಒಳ್ಳೆಯ ಕಾರ್ಯಕ್ಕೆ ಎಂದೂ ಅಪಶಯ ದೊರೆಯದು "ಎಂದು ಕುಲಕರ್ಣಿಯವರೂ ಹೇಳುತ್ತಾರೆ. ಕಾಮಿನಿ ಕೂಡ ಅದನ್ನೇ ಹೇಳುತ್ತಾಳೆ.

ನನಗೆ ಪತಿಯನ್ನು ದೊರಕಿಸುವ ಕಾರ್ಯ ಒಳ್ಳೆಯದಲ್ಲವೆ....? ಸಾವಿರ ಸುಳ್ಳು ಹೇಳಿ ಒಂದು ಕಲ್ಯಾಣ ಕಟ್ಟಬೇಕು. ಹಿರಿಯರೂ ಹೇಳುತ್ತಾರೆ.

ಕಲ್ಯಾಣ ಕಟ್ಟುವ ಕಾರ್ಯವು ಪುಣ್ಯದ ಕಾರ್ಯ. ಪುಣ್ಯದ ಕಾರ್ಯಕ್ಕೆ ಜಯ ಸಿಕ್ಕಲೇ ಬೇಕು.

ಆದರೆ ಇದು ಪುಣ್ಯದ ಕಾರ್ಯವೆ...?

'ಅಹದು' ಎಂದು ನಾನು ಹೇಳಬಹುದು. ಆದರೆ ಜನರು ನನ್ನ ಮಾತಿಗೆ ಒಡಂಬಡುವರೆ . ?

ಜನರ ದೃಷ್ಟಿಯಲ್ಲಿ ನಾನು ಪಾಪಿ ಪಾಪಿಗೆ ಕಲ್ಯಾಣ ಮಾಡುವದರಿಂದ ಪಾಪದ ಬೆಳವಣಿಗೆಯಾಗುವದಲ್ಲದೆ ಪುಣ್ಯವು ಬೆಳೆಯಲಾರದು. 'ಸತ್ಪಾತ್ರ ದಲ್ಲಿ ದಾನಮಾಡಬೇಕು.' ಎಂಬುದು ತಲೆತಲಾಂತರದಿಂದ ಸಾಗಿಬಂದ ವಿಚಾರ. ದುರ್ಗುಣಿಗೆ ಹೆಣ್ಣು ಕೊಡುವದು ಪುಣ್ಯದ ಕಾರ್ಯವೆ....? ಸಾವಿರ ಸುಳ್ಳುಹೇಳಿ ಅಂತಹ ಕಲ್ಯಾಣ ಕಟ್ಟಬಹುದೆ....?

ಸಾವಿರ ಸುಳ್ಳುಹೇಳಿ ಅಂತಹ ಲಗ್ನ ಮುರಿಯುವದರಲ್ಲಿಯೇ ಹುಡುಗಿಯ ಕಲ್ಯಾಣವಿದೆಯಲ್ಲವೆ...?

ಜನರ ಕಣ್ಣಲ್ಲಿ ನಾನೂ ದುರ್ಗುಣಿ. ನಾನು ಕೂಡ ಅವರ ಮಾತನ್ನು ಒಪ್ಪಲೇಬೇಕು. ನಾನು ಸದ್ಗುಣಿಯಾಗಿ ತೋರುವದು ಕಾಮಿನಿಗೆ. ಕುಲ ಕರ್ಣಿಯವರಿಗೆ.

ನನ್ನಂತಹದೇ ಕಷ್ಟ ಅನುಭವಿಸಿದವಳು ಕಾಮಿನಿ.

ನನ್ನಂತಹರ ಕಷ್ಟದಿಂದ ಮನಕರಗಿದವರು ಕುಲಕರ್ಣಿ.

ಒಬ್ಬಳು ಸಹಕಷ್ಟಿ. ಇನ್ನೊಬ್ಬರು ದೇವರಂತಹರು

ಅಲ್ಲ ದೇವರು.

ದೇವರ ದೃಷ್ಟಿಯಲ್ಲಿ ಯಾರೂ ಅಪರಾಧಿಗಳಲ್ಲ. ಮಗಳು ಪಾಪಿ ಯಾದರೂ ತಾಯಿ ಅವಳನ್ನು ದೂಡುವಳೆ...? ಮಗಳಿಗೆ ಬುದ್ಧಿಹೇಳಿ ಮತ್ತೆ ಸರಿ ದಾರಿಗೆ ಹಚ್ಚಲು ಪ್ರಯತ್ನಿಸುವಳು.

ತಾಯಿಯ ಹೃದಯವೇ ದೇವರ ಹೃದಯ– ತಾಯಿಯ ಹೃದಯ ದಲ್ಲಿರುವವ ದೇವ. ಅಂತೆಯೇ ಮಕ್ಕಳ ಸಂರಕ್ಷಣೆ.

ಅದೇ ಹೃದಯವಿದೆ ಕುಲಕರ್ಣಿಯವರಲ್ಲಿ. ಇಲ್ಲದಿದ್ದರೆ ಮೊದಲು ಅವರು ನನ್ನನ್ನು ಕರೆಯುತ್ತಿರಲಿಲ್ಲ. ಕರೆದಿದ್ದರೂ ಇಂದಿದ್ದಂತೆ ಇರುತ್ತಿರ

ಲಿಲ್ಲ. ಬೆಳೆದ ಹೆಣ್ಣು ಉಡಿಯಲ್ಲಿ ಬಿದ್ದಿರುವಾಗ ಆದರ ಉಪಯೋಗವನ್ನು ತೆಗೆದುಕೊಳ್ಳದ ಗಂಡಸು ಯಾರು...?

ವೈಭವ, ವಿಲಾಸ ಉಪಯೋಗ, ಉಪಭೋಗ ಸರ್ವಸ್ವವನ್ನು ತೊರೆದು ತಪಶ್ಚರ್ಯಕ್ಕೆ ಕುಳಿತ ವಿಶ್ವಾಮಿತ್ರ ಮರುಳಾದುದು ಸ್ತ್ರೀಗೆ....ಸ್ತ್ರೀಗಾಗಿ ಸರ್ವಸ್ವವನ್ನು ಸೂರೆಗೊಂಡ ಉದಾಹರಣೆಗಳು ಒಂದಲ್ಲ ಹಲವು.

ಆದರೆ ಆ ಹಲವರನ್ನು ಮೀರಿಸಿದವರು ಕುಲಕರ್ಣಿಯವರು ಅಂತೆಯೇ ಶ್ರೇಷ್ಠರು, ವಂದ್ಯರು, ದೇವರು. ಅವತಾರ ತಾಳಿದ ದೇವರೂ ಕೂಡ ಮನುಷ್ಯರಂತೆ ಬಾಳಬೇಕಾಗುತ್ತದಂತೆ! ದೇವರೂ ಮನುಷ್ಯರಾಗಿ ಬಾಳತೊಡಗಿದರೆ ಆದರಿಂದ ಲಾಭವಾರಿಗೆ........? ಅಲ್ಲದೆ ಅವತಾರದ ಉದ್ದೇಶವಾದರೂ ಏನು....?

ಮನುಷ್ಯರ ಬಾಳಲ್ಲಡಗಿದ ವಿಷವನ್ನು ತೆಗೆದು ಅವರ ಜೀವನವನ್ನೂ ನಿರ್ಮಲಗೊಳಿಸುವದು ಶುಚಿಗೊಳಿಸುವದು. ಅವರನ್ನು ಮನುಷ್ಯತ್ವದ ತತ್ವದಂತೆ ಆಚರಿಸಲು ಹಚ್ಚುವದು ಅವತಾರದ ಉದ್ದೇಶ. ಆದರೆ ದೇವರೂ ಮನುಷ್ಯರಾಗಿ ಮನುಷ್ಯರ ಮಧ್ಯದಲ್ಲಿ ಕೂಡಿಹೋದರೆ ಉಪಯೋಗವೇನು....? ಅಲ್ಲದೆ ಅವನಿಗೆ ದೇವನೆಂದು ಅನ್ನುವದಾದರೂ ಹೇಗೆ.......? ಏಕೆ.......?

ಕುಲಕರ್ಣಿಯವರು ತಮ್ಮ ಸದ್ವರ್ತನೆಯಿಂದ ದೇವತ್ವದ ದಾರಿಯಲ್ಲಿ ಸಾಗುತ್ತಿರಬಹುದು. ಆದರೆ ಅವರು ನನ್ನನ್ನು ವಿವಾಹವಾಗಲು ಅನುಮತಿಸಿದರೆ ಅವರೂ ಮನುಷ್ಯರೇ ಆದಂತಾಗುವದಿಲ್ಲವೆ....?

ಕೀಳು ಆಸೆಗೆ ಬಲಿಬೀಳದಿರುವದೂ, ಕೀಳಾದುದನ್ನು ಬೀದಿಯಲ್ಲಿ ಬೀಸಾಕುವದೂ ಎರಡೂ ಹೆಚ್ಚು-ಕಡಿಮೆ ಒಂದೇ ಅಲ್ಲವೆ...?

"ದುರ್ಬಲರನ್ನು ದೇವ ರಕ್ಷಿಸುತ್ತಾನೆ" ಎಂದು ಕುಲಕರ್ಣಿಯವರು ಹೇಳುತ್ತಾರೆ. ಅವರು ಹೇಳುವದನ್ನು ಸತ್ಯವೆಂದು ನಾನು ನಂಬುವದಾದರೂ ಹೇಗೆ...?

ನಾನು ದುರ್ಬಲಳಲ್ಲವೆ...? ಆದಾವ ಶಕ್ತಿ ನನ್ನಲ್ಲಿದೆ....? ಏನನೂ ಮಾಡಲಾಗದ ಅಬಲೆ ನಾನು. ಅಂತೆಯೇ ನನ್ನಿಂದ ಪಾಪವಾಯಿತು. ನಾನೂ ಸಶಕ್ತಳಿದ್ದರೆ...ನನ್ನಿಂದ ಅಂತಹ ಕಾರ್ಯವಾಗುತ್ತಿರಲಿಲ್ಲ.

ಪಾಪಿ ಬಲಿಷ್ಠನಲ್ಲ, ದುರ್ಬಲ. ತನ್ನ ಅಶಕ್ತತೆಯಿಂದಾಗಿ ಅವನ ಮನ ಕೀಳು ವಿಚಾರದತ್ತ ಹರಿಯುತ್ತದೆ. ಅದನ್ನು ತಡೆಹಿಡಿಯುವ ಶಕ್ತಿ ಇಲ್ಲವಾದಾಗ ಕೀಳು ವಿಚಾರ ಅವನನ್ನು ಎಳೆದುಕೊಳ್ಳುತ್ತದೆ.

ನನ್ನ ಕತೆಯೇ ಅದು. ಅಬಲೆಯಾದರೂ ದುರ್ಬಲಳು. ಅಂತೆಯೇ ಕಂಡವರ ಕೈಯಲ್ಲಿಯ ವಸ್ತುವಾದೆ. ಅದಕ್ಕೆ ದೊರೆಯುತಕ್ಕ ಪ್ರತಿಫಲವೂ ದೊರೆತಿತು. ಆದರೂ ಅಬಲೆ ಸಬಲೆಯಾಗಲಿಲ್ಲ. ದುರ್ಬಲತೆಯು ನನ್ನಲ್ಲಿದೆ. ಇನ್ನೊಬ್ಬರು ಬಲಿಷ್ಠರು ನನಗೆ ಕೈಕೊಟ್ಟು ನೆರವು ನೀಡದಿದ್ದರೆ ದುರ್ಬಲತೆಯ ಹುಚ್ಚು ಹಳ್ಳದಲ್ಲಿ ಕೊಚ್ಚಿಕೊಂಡು ಹೋಗುವೆ.

'ದುರ್ಬಲರನ್ನೂ ದೇವ ರಕ್ಷಿಸುವ' ಎನ್ನುವದು ಸತ್ಯವಾದರೆ ದೇವರು ಧಾವಿಸಿ ಬಂದು ಕೈಕೊಟ್ಟು ನನ್ನನ್ನು ಮೇಲಕ್ಕೆತ್ತಿಕೊಳ್ಳಬೇಕು. ಎತ್ತಿಕೊಂಡು ತನ್ನ 'ರಕ್ಷಕ' ನೆಂಬ ಬಿರುದನ್ನು ಸಾರ್ಥಕವಮಾಡಿಕೊಳ್ಳಬೇಕು.

ಇಲ್ಲದಿದ್ದರೆ.,.....ಅದೂ ಕೂಡ ಒಂದು ಅಜ್ಜಿಯ ಕತೆ ಎನ್ನಿಸಬಹುದು.

"ವ್ಯಕ್ತಿಯ ಸ್ವಾರ್ಥದ ಸಿದ್ಧಿಗೆ ದೇವರು ಧಾವಿಸಲಾರ" ಎಂದೂ ಕುಲ ಕರ್ಣಿಯವರು ಹೇಳುತ್ತಾರೆ.

ಅಹುದು ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಚಿಕ್ಕಪುಟ್ಟ, ಉಚ್ಚನೀಚ ಸ್ವಾರ್ಥಗಳಿಗಾಗಿ ಕೂಗಿದಾಗ ದೇವ ಬರತೊಡಗಿದರೆ ಆತನ ಅನಂತತ್ವವೂ ಕೂಡ ಚಿಕ್ಕದಾದೀತು. ದೇವನು ಸರ್ವವ್ಯಾಪಿ ಎಂದು ಹೇಳುವದಾದರೂ ಮನುಷ್ಯನ ಸ್ವಾರ್ಥ 'ಸರ್ವವ್ಯಾಪಿಯುವ್ಯಾಪಿ' ಎಂದೇ ಹೇಳಬೇಕಾದೀತು.

ನಾನು ದೇವನನ್ನು ಕೂಗುವದು ನನ್ನ ಸ್ವಾರ್ಥಕ್ಕಲ್ಲ. ನನ್ನ ಉದ್ಧಾರಕ್ಕೆ.

ಉದ್ಧಾರವೂ ವ್ಯಕ್ತಿಯ ಸ್ವಾರ್ಥವೆ...?

ಉದ್ಧಾರವೆಂದರೆ ಪಾಪ ವಿಮೋಚನೆ.

ಪಾಪವಿಮೋಚನೆಗೆ ಸ್ವಾರ್ಥವೆಂಬ ಕೀಳು ಅರ್ಥವಾದರೆ ಪ್ರಪಂಚದ ನದಿಗಳೆಲ್ಲ ಕೂಡಲೇ ಬತ್ತಿ ಹೋದಾವು. ದೇವತ್ವವು ಕೂಡ ಮುಕುಟ ಕಳೆದು ಹೋದ ರಾಜನಾಗಬೇಕಾದೀತು.

ನಾನು ದೇವನನ್ನು ಕರೆಯುವದು ಪಾಪ ವಿಮೋಚನೆಗೆ ನಾನು ದೇವನನ್ನು ಕೂಗುವದು ನನ್ನ ಉದ್ಧಾರಕ್ಕೆ.

ನಾನು ಪಾಪಿ ಆದಕ್ಕಾಗಿ ನನ್ನ ಉದ್ಧಾರವಾಗಲೇಬೇಕು.

ನನ್ನ ಉದ್ಧಾರವಾಗಿಲ್ಲ. ಏಕೆಂದರೆ ನಾನು ಪಾಪಿ.

" ಉದ್ಧಾರಕ್ಕೆ ಕೂಡ ಶಕ್ತಿಬೇಕು" ಎಂದು ಕುಲಕರ್ಣಿಯವರು ಹೇಳಿದಾಗ ಅವರೇ ಹೇಳಿದ್ದು.

" ದೇವರು ದುರ್ಬಲರನ್ನು ಕೂಡ ರಕ್ಷಿಸುತ್ತಾನೆ " ಎನ್ನುವದು ಸತ್ಯವೇ ಎನ್ನಿಸುತ್ತದೆ.

ದೇವನು ಅನಂತ ಎನ್ನುವಂತೆ ಆತನ ಎರಡು ವಿಚಾರಗಳಲ್ಲಿಯು ಅಂತರವೂ ಅನಂತವೆಂದು ಗೋಚರಿಸುತ್ತದೆ.

ಆದರೆ ಕುಲಕರ್ಣಿಯವರು " ಎರಡೂ ಒಂದಕ್ಕೊಂದು ಹೊಂದಿಕೊಂಡಿವೆ" ಎಂದು ಮುಗುಳ್ನಗೆ ಬೀರುತ್ತಾರೆ. ಹಿಂದಿನಿಂದ ತಿಳಿಸಿ ಹೇಳುತ್ತಾರೆ.

" ಉದ್ಧಾರವಾಗಲೇಬೇಕು " ಎನ್ನುವ ದೃಢನಿಶ್ಚಯವೇ ಆ ಶಕ್ತಿ. ಅದು ಮಹಾ ಶಕ್ತಿ ಆ ಶಕ್ತಿಯಿಲ್ಲದಿದ್ದರೆ ಕಾರ್ಯ ಅಶಕ್ಯ. ಎಂದು.

ದುರ್ಬಲರಲ್ಲಿ ದೃಢನಿಶ್ಚಯವೆಲ್ಲಿಂದ ಬಂದೀತು ? ದೃಢನಿಶ್ಚಯವೇ ಇದ್ದುದಾದರೆ ಅವರು ದುರ್ಬಲರಾಗಿ ಉಳಿಯುವರಾದರೂ ಹೇಗೆ...? ದೇವರ ವಿಚಾರವೇ ವಿಚಿತ್ರವಾಗಿದೆ. ಒಂದಕ್ಕೊಂದು ವಿರೋಧ ಯಾವುದೂ ತಿಳಿಯದು. ಆದಕ್ಕೆ 'ವೇದಾಂತ'ವೆಂದುಕೊಂಡು ಸಾಮಾನ್ಯರು ಅದರಿಂದ ದೂರಿರುವರು. ತಿಳಿಯದ ವಿಚಾರದಲ್ಲಿ ತಲೆ ಸೇರಿಸಿದೆ ತಲೆ ಕೆಡಸಿಕೊಳ್ಳುವದಕ್ಕಿಂತ ಆದರಿಂದ ದೂರಿರುವದೇ ವಾಸಿ ಎನ್ನುವದು ಸಾಮಾನ್ಯರ ವಿಚಾರ. ಅಲ್ಲದೆ ಆದರಿಂದ ಯಾವ ಪ್ರಾಪ್ತಿಯೂ ಇಲ್ಲ. ವ್ಯಕ್ತಿ ಬದುಕಬೇಕಾದರೆ 'ಪ್ರಾಪ್ತಿ'ಯಾಗುತ್ತಿರಬೇಕು. ಪ್ರಾಪ್ತಿಯಿಂದಲೇ ಮನುಷ್ಯರ ಬದುಕು ಬಾಳುವೆ ಎಂಬುದೂ ಒಂದು ವಿಚಾರ. ಅದು ಅಸತ್ಯವೂ ಅಲ್ಲ.

ನನಗೆ ಏನಾದರೂ ಬೇಕಾಗಿದೆ. ಎಂದು ನಾನು ದೇವರನ್ನು ಕೂಗುತ್ತಿರುವೆ. ಬಾರದ್ದಕ್ಕೆ ಅವನನ್ನು ದೂಷಿಸುತ್ತಿರುವೆ. ಕೂಗಿದರೂ ಬಾರದವನಿಗಾಗಿ ಕೂಗುವದು ವ್ಯರ್ಥ. ಎಂದೂ ಬಾರದವನ ವಿಚಾರವಾಗಿ ಕಲ್ಪನೆಯ ರಾಜಭವನವನ್ನು ಆಗಸದಲ್ಲಿ ನಿರ್ಮಿಸಲು ಸಾಧ್ಯವೆ....?

ಸಾಮಾನ್ಯರ ವಿಚಾರ ಇಂತಿದ್ದರೂ ಕುಲಕರ್ಣಿಯವರ ವಿಚಾರ ಇದಕ್ಕೆ ವಿರುದ್ಧವಾಗಿ. ಅವರು ಹೇಳುವದು " ಸರ್ವಸ್ವವೂ ದೊರೆಯುವದು ಅವನಿಂದಲೆ. ಬೇಡುವದಕ್ಕಿಂತ ಮೊದಲು ಬೇಡುವದನ್ನು ಕೊಡುವದಕ್ಕೆ ಕೈಯಲ್ಲಿ ಹಿಡಿದು ನಿಂತುಕೊಂಡಿದ್ದಾನೆ ಆತ" ಎಂದು.

ಇದು ನಿಜವಾದರೆ ಆತ, ನಾನು ಕೂಗಿ ಕೂಗಿ ಕೇಳುತ್ತಿದ್ದರೂ ನನ್ನ ಕ್ಷುಲ್ಲಕ ಬೇಡಿಕೆಯನ್ನು ಪೂರೈಸಬಾರದೇಕೆ ? ಅದೊಂದು ಬೇಡಿಕೆಯ ಮೇಲೆಯೇ ನನ್ನ ಆಯುಷ್ಯದ ಮುಂದಿರದ ಭವಿತವ್ಯ ಅವಲಂಬಿಸಿದೆ. ಅದು ಪೂರ್ಣವಾಗದಿದ್ದರೆ ನಾನು ಮಣ್ಣುಪಾಲು. ಅದು ಪೂರ್ಣವಾದರೆ ನಾನು ಒಬ್ಬ ಮನುಷ್ಯಳು.

ನಾನು ಮನುಷ್ಯಳಾಗಿ ಬಾಳಬೇಕಾದರೆ ನನ್ನ ವಿವಾಹವಾಗಲೇಬೇಕು ಇಲ್ಲದಿದ್ದರೆ.........?

ನನ್ನ ವಿವಾಹವಾಗದಿದ್ದರೆ.........?

ಅಂತಹ ವಿಚಾರ ಕೂಡ ಅಸಹ್ಯ.

' ಸರ್ವಸ್ವವೂ ದೊರೆಯುವದು ದೇವನಿಂದ. ನಮಗೆ ಬೇಕಾದುದನ್ನು ಕೊಡುವವ ದೇವ.... ಆ ದೇವನೂ ನನ್ನ ಪಾಲಿಗೆ ಕಿವುಡನಾಗಿರುವನೆ...? ನಾನು ಉದ್ಧಾರಕ್ಕೆ ಅನರ್ಹಳೆ...? ದೇವನ ಮಹಾ ಶಕ್ತಿಗೂ ಹಣಿಯಲು ದುಷ್ಟು ನನ್ನ ಪಾಪವು ಹಿರಿಯದೆ...?

" ಅನಾಥರನ್ನು ದೇವ ರಕ್ಷಿಸುತ್ತಾನೆ. "

" ಜಗತ್ತನ್ನು ದೇವರು ರಕ್ಷಿಸುತ್ತಾನೆ "

ನಾನೂ, ಜಗತ್ತಿನಲ್ಲಿ ಒಂದು ಪ್ರಾಣಿಯಲ್ಲವೆ...? ನಾನೂ ಕೂಡ ಅನಾಥಳಲ್ಲವೆ...?

ಯಾರಿರುವರು ಈ ಜಗದಲ್ಲಿ ನನ್ನವರೆನ್ನುವವರು...? ಯಾರೂ ನನ್ನವರಿಲ್ಲ...ಯಾರೂ ಇಲ್ಲ, ಯಾರೂ ನನ್ನವರಿಲ್ಲ ಎಂತಲೇ— ಯಾರಿಗೂ ನನ್ನ ವಿಷಯ ಗೊತ್ತಿಲ್ಲ— ನನ್ನ ವಿಚಾರ ಸುತ್ತಲಿನವರಿಗೆ ತಿಳಿದರೆ....?

ಇನ್ನೂ ಸುತ್ತಲಿನವರಿಗೆ ನನ್ನ ವಿಷಯ ತಿಳಿದಿಲ್ಲವೇ....? ನನ್ನನ್ನು ಯಾರೆಂದು ತಿಳಿದುಕೊಂಡಿರುವರು ಅವರು....? ಒಬ್ಬರ ವಿಚಾರ ಇನ್ನೊಬ್ಬರು

ಮಾಡುವುದಿಲ್ಲವೆಂದರೂ ಒಬ್ಬರನ್ನು ಯಾರೆಂದು ತಿಳಿದುಕೊಳ್ಳುವ ಮಾನಸ ಸಹಜವಾದ ಕುತೂಹಲ ಮನುಷ್ಯರಲ್ಲಿ ಇಲ್ಲದೆ ಇದ್ದೀತೆ....?

ಹಾಗಿದ್ದರೆ ನನ್ನ ವಿಚಾರಕ್ಕೆ ಅವರು ತಿಳಿದುಕೊಂಡದ್ದೇನು....? ನನ್ನ ವಿಷಯದ ಸಂಶಯ ಜನರ ಮನದಲ್ಲಿ ಉದ್ಭವಿಸಿಲ್ಲವಷ್ಟೆ....?

ಸಂಶಯ...!

ಎಂತಹ ಸಂಶಯ....?

ನಾನು ಹಾಳು ಕೆಲಸ ಮಾಡಿ ಓಡಿಬಂದಿರುವೆನೆಂಬುದು ಯಾರಿಗೂ ತಿಳಿಯದಷ್ಟೆ...?

ತಿಳಿದಿರಲಿಕ್ಕಿಲ್ಲ. ತಿಳಿಯಲು ಸಾಧ್ಯವಿಲ್ಲ.

ಇಲ್ಲಿಗೆ ನಾನಾಗಿ ಬರಲಿಲ್ಲ. ನಾನು ಬಂದುದು ಕುಲಕರ್ಣಿಯವರ ಜೊತೆಗೆ. ಬರುವಾಗಷ್ಟೆಕುಲಕರ್ಣಿಯವರು ನನ್ನನ್ನು ಕರೆದುಕೊಂಡು ಬಂದರು.

ಅವರು ನನ್ನನ್ನು ಕರೆದುಕೊಂಡು ಬಂದಾಗ ಜನ ಅವರನ್ನು ಕೇಳಿರ ಬಹುದಲ್ಲವೆ....?

ಕೇಳಿರಲೇ ಬೇಕು. ಆದರೆ........

ಆದರೆ... ಏನೆಂದು...?

ಇವಳಾರು ಎಂದೆ....?

ಇಲ್ಲ. ಹಾಗಲ್ಲ ಆದಕ್ಕಿಂತ ಒಂದು ಹೆಜ್ಜೆ ಮುಂದೆಹೋಗಿ........

ತರುಣಿ ಆದರಲ್ಲಿ ಬಸಿರು........

ಅಯ್ಯೋ... ನನ್ನಿಂದಾಗಿ ಕುಲಕರ್ಣಿಯವರು ಹಾಗೆಲ್ಲ ಕೇಳಿಸಿ ಕೊಂಡರೆ.......?

ಅವರು ಅಡಕ್ಕೆ ಪ್ರತಿಯಾಗಿ ಉತ್ತರಕೊಟ್ಟದ್ದೇನು...?

" ಅವಳು ನನ್ನ ಹೆಂಡತಿಯಲ್ಲ " ಎಂದು ಹೇಳಿದರೆ...?

ಅವರು ಹಾಗೆಲ್ಲ ಹೇಳಿದ್ದರೆ.... ನನ್ನ ವಿಷಯಕ್ಕೆ ಜನದಲ್ಲಿ ಇಲ್ಲದ ಕಲ್ಪನೆಗೆ ಬೇರು ಬಿಟ್ಟಿರಬಹುದಲ್ಲವೆ.......?

"ಅಹುದು" ಎಂದು ಹೇಳಿರಬಹುದೆ...?

ಹಾಗೆ ಹೇಳಿರಲಾರರು.......

ಏಕೆಂದರೆ ನಾನವರ ಆಶ್ರಿತಳಾಗಿದ್ದೆ ಅಲ್ಲದೆ ಹೆಂಡತಿಯಲ್ಲ.

ಕಂಡ ಹೆಂಗಸರಿಗೆ 'ಹೆಂಡತಿ' ಎಂದು ಹೇಳುವರಾದರೂ ಹೇಗೆ....? ಹೆಂಡತಿ ಎಂದು ಹೇಳಿರದಿದ್ದರೆ........?

ಜನಕ್ಕೆ ಮನದಲ್ಲಿ ಸಂಶಯು ಕಲ್ಪಿಸಲು ಅವಕಾಶ ..

ಚಿಕ್ಕದಾದ ಒಂದೇ ಒಂದು ಕೋಣೆಯ ಮನೆ. ಅದರಲ್ಲಿರುವವರು ನಾನು-ಕುಲಕರ್ಣಿಯವರು ಅಣ್ಣನ ಮನೆಗೆ ಬಂದ ತಂಗಿ ಇರುವದಾದರೆ ಒಂದು ತಿಂಗಳು, ನಾಲ್ಕು ತಿಂಗಳು, ಅಲ್ಲದೆ ದಿನಗಳೆಯಲು ಅಲ್ಲ. ತಿಂಗಳಾನು ತಿಂಗಳು, ವರುಷಾನು ವರುಷ ಒಂದೇ ಕೋಣೆಯಲ್ಲಿ ಸಂಸಾರ ಮಾಡಿಕೊಂಡಿರುವವರು ಯಾರು....? ಸಂಬಂಧವಿಲ್ಲದ ಅಪರಿಚಿತ ತರುಣ ತರುಣಿಯರು ಇರಬಹುದೆ ..? ತರುಣ-ತರುಣಿಯರು ಸಂಬಂಧವಿಲ್ಲದಂತೆ ಉಳಿಯಲು ಸಾಧ್ಯವೆ....?

ಜನದ ಪ್ರಶ್ನೆಗೆ ನಾವೆಷ್ಟು ದೊಡ್ಡದಾಗಿ ಉತ್ತರ ಕೊಟ್ಟರೂ ಅದು ಸತ್ಯವೆನ್ನಿಸಲಾರದು.

....ಈ ವಿಚಾರ ಕುಲಕರ್ಣಿಯವರಿಗೆ ಇಲ್ಲವೆ....? ಇದ್ದರೆ ಅದಕ್ಕೆ ಅವರು ಯೋಚಿಸಿರುವ ಪರಿಹಾರವಾವುದು....? ಆರಂಭದಲ್ಲಿ ಏನೊಂದನ್ನು ಹೇಳಿ ಮುಕ್ತರಾಗಿದ್ದರೂ ಇಂದು ಅವರಿಗೆ ಮುಕ್ತಿದೊರಕುವದು ಹೇಗೆ....? ಈ ವಿಷಯ ಈ ವಿಚಾರ ಕುಲಕರ್ಣಿಯವರನ್ನು ಕಂಗೆಡಿಸಿರಬಹುದು.

ಅವರಿಗೆ ನನ್ನಿಂದಾಗಿ ಎಂತಹ ತೊಂದರೆ....? ' ಹೆಣ್ಣು ' ಎಂದರೆ ದೇವತೆ ಎಂದು ಕರೆಯುವದು ಹುಚ್ಚುತನದ್ದು. ಹೆಣ್ಣು ದೇವತೆಯಲ್ಲ; ಮಾರಿ.

ಅವಳನ್ನು ರಕ್ಷಿಸುವದಕ್ಕೆಂದು ಇಟ್ಟು ಕೊಂಡರೂ ಸಾಂಕ್ರಾಮಿಕ ರೋಗದಂತೆ ರಕ್ಷಿಸುವವರನ್ನೇ ತಿನ್ನುವದಕ್ಕೆ ಸಿದ್ಧಳಾಗುವಳು.

ದಯಾ ಹೃದಯರಾದ ಅವರು ದಯೆಯಿಂದ ಮೃತ್ಯುವಿನ ಮುಖದಿಂದ ನನ್ನನ್ನೆತ್ತಿ ತಂದರು.

ಅವರ ದಯೆಯೇ ಅವರಿಗೆ ಇಂದು ಉರುಲಾಗಿದೆ. ಅದು ಅವರನ್ನು ಬಿಗಿಯುತ್ತಿದೆ.

ಅವರು ಇದರಿಂದ ಮುಕ್ತರಾಗುವದು ಹೇಗೆ...?

ನನ್ನ ಮೃತ್ಯು ಅವರನ್ನು ಈ ಉರುಲಿನಿಂದ ಮುಕ್ತಮಾಡಬಹುದು. ನನ್ನ ಸಾವು ಸಾವಿರ ಸಂಕಟಗಳನ್ನು ಪರಿಹಾರ ಮಾಡುವ ಸಂಜೀವಿನಿಯಾಗಿದೆ.

ಕುಲಕರ್ಣಿಯವರ ಸಂಕಟ ಪರಿಹಾರವಾಗುವದು.

ಕಾಮಿನಿಯ ಕಳವಳ ಕಡಿಮೆಯಾಗುವದು.

ತಂದೆ ತಾಯಿಗಳು ನಿಶ್ಚಿಂತರಾಗುವರು.

ರಂಗನ ಹೆದರಿಕೆ ಇಲ್ಲದಾಗುವದು.

ರಂಗನಿಗೆ ತಾನು ನನಗೆ ಮಾಡಿದ ಅನ್ಯಾಯಕ್ಕಾಗಿ ಹೆದರಿಕೆ. ಒಂದಿಲ್ಲೊಂದು ದಿನ ನಾನಿಲ್ಲಿ ಬಂದು ತನ್ನ ಎದೆಯ ಮೇಲೆ ಈ ಮಗುವಿನ ಸಹಿತವಾಗಿ ಕುಳಿತುಕೊಳ್ಳುವೆನೋ ಎಂದು.

ಈ ಹಾಳಾದ ಕಲಂಕಿತೆಯಾದ ಹೆಣ್ಣು ಬಂದು ಮತ್ತೆ ಎಲ್ಲಿ ತಮ್ಮ ಮಾನಕ್ಕೆ ಕಪ್ಪು ಸವರುವದೋ ಎಂಬ ಚಿಂತೆ ತಂದೆ-ತಾಯಿಗಳಲ್ಲಿ.

ಇವಳನ್ನು ದಾರಿಗೆ ಹಚ್ಚುವಕಾರ್ಯ ಇನ್ನೂ ನನ್ನಿಂದಾಗಿಲ್ಲವಲ್ಲ ಎಂಬ ಕಳವಳ ಕಾಮಿನಿಯಲ್ಲಿ.

ದಾರಿಯಲ್ಲಿ ಹೋಗುವ ಭೂತವನ್ನು ತಂದು ಕೊರಳಲ್ಲಿ ಕಟ್ಟಿಕೊಂಡ ಸಂಕಟ ಕುಲಕರ್ಣಿಯವರಲ್ಲಿ

ಈ ಎಲ್ಲದಕ್ಕೆ ಒಂದೇ ಒಂದಾದ ಪರಿಹಾರ—

ಮೃತ್ಯು ನನ್ನ ಮೃತ್ಯು.......

ನಾನು ಸಾಯಬೇಕು.

ಬದುಕುವ ಆಶೆಯಿದೆ. ಸಾಯಲು ಬೇಡವಾಗಿದೆ.

ನಾನು ಸಾಯುವದು ಬೇಡವಾದರೆ ಇನ್ನೊಬ್ಬರು ಸಾಯಬೇಕು ನನ್ನ ಬದುಕುವ ಆಶೆಗೆ ಇನ್ನೊಬ್ಬರು ತಮ್ಮ ಬದುಕಿನ ಆಶೆ ಬಿಡಬೇಕು.

ಇದರಿಂದ ನಾನು ದೊರಕಿಸುವದಾದರೂ ಏನು....? ಕುಲಕರ್ಣಿಯವರ ಕೊರಳಿಗೆ ಉರುಲು ಹಾಕಿ ನಾನು ಬದುಕುವದಾದರೂ ಏಕೆ....? ಹೇಗೆ?

ಮುಣುಗುವವನ ಮೇಲೆ ಮತ್ತೊಂದು ಭಾರ... ಆದರಿಂದ....

ಆದರಿಂದ ಇಬ್ಬರಿಗೂ ಜಲಸಮಾಧಿ.

ಮುಳುಗುವವನ ಭಾರ ಕಡಿಮೆಯಾದರೆ....?

ಹೇಗೊ ಕೈ ಬಡೆಯುತ್ತ ತೀರವನ್ನು ತಲುಪಬಹುದು.

ನನ್ನ ತ್ಯಾಗದಿಂದ ಕುಕರ್ಣಿಯವರು ಬದುಕಲು ಸಾಧ್ಯವಿದೆ.

ನನ್ನ ಸ್ವಾರ್ಥದಿಂದ ಇಬ್ಬರೂ ಬದುಕುವದು ಅಸಾಧ್ಯ....

ನನ್ನನ್ನು ಬದುಕಿಸಿದವನ್ನು ನಾನು ಕೊಲ್ಲಬೇಕೆ....?

ಆದರಿಂದ ನನಗೆ ದೊರೆಯುವ ಲಾಭ....?

ಏನೂ ಇಲ್ಲ. ಅವರ ಜೊತೆಗೆ ನಾನೂ ಸಾಯುವೆ.

ಏನಾದರೂ ನನಗೆ ಸಾವು ತಪ್ಪಿದ್ದಲ್ಲ. ಆದ್ದರಿಂದ ನಾನು ಸತ್ತು ಅವರನ್ನಾದರೂ ಬದುಕಿಸಬಾರದೇಕೆ ? ಅವರು ಬದುಕಿದರೆ ನನ್ನಂತಹ ಸಾವಿರ ಜನರಿಗೆ ನೆರಳಾಗುವ ಮರವಾದಾರು. ನನ್ನ ಮರಣ ಅವರ ಬಾಳಿನ ಮರಕ್ಕೆ ಹಣಿಸಿದ ನೀರು ಆಗಲಿ ಅದರಿಂದ ನಾನು ಕೃತಾರ್ಥಳು.

ಹಾಳಾದ ಜೀವಕ್ಕೊಂದು ಸಮಾಧಾನ ಸಾವಿನಿಂದ

ಸಾವಿನಿಂದ ನನಗೂ ಸಮಾಧಾನ. ಉಳಿದವರಿಗೂ ಸಮಾಧಾನ. ಹಿಂದೊಂದು ದಿನ ಹಾಳಾಗಿ ಎಲ್ಲರಿಗೂ ಬೇಡವಾಗಿ ಸಾಯಲು ಹೊರಟಿದ್ದೆ. ಇಂದು ಎಲ್ಲರಿಗೂ ಬೇಕಾಗಿ ಸಾಯಲು ಹೊರಟಿರುವೆ.

ಎಲ್ಲರಿಗೂ ಬೇಕಾಗಿ ಸಾಯುವದರಲ್ಲಿಯೇ ಮಾನವನ ಜೀವನದ ಕೃತಾರ್ಥತೆ, ಸಾರ್ಥಕತೆ.

ಸಾವು ಯಾರಿಗೂ ಬಿಟ್ಟಿದ್ದಲ್ಲ. ಬೇಡವೆಂದರೂ ಬಿಡದು ಸಾವು. ಹೆದರಿ ದೂರೋಡಲು ಪ್ರಯತ್ನಿಸಿದರೂ ಮೃತ್ಯುವಿನ ಹಸ್ತದಲ್ಲಿಯೇ ಮಾನವನ ಸುತ್ತಾಟ.

ಸಂಸಾರದ ಸಮಸ್ತ ನರ್ತನ ಮೃತ್ಯುವಿನ ಹಸ್ತದ ಮೇಲೆ.

ಎಂದಾದರೂ ಸಾಯಲೇಬೇಕು. ಇಂದು ಸಾಯುವದರಿಂದ ನನ್ನವರಿಗೆ ಸುಖವಿದೆ. ನನ್ನಿಂದಾಗಿ ಅಸುಖಿಗಳಾದವರಿಗೆ ಸುಖ ದೊರೆಯುವದು. ನನ್ನಿಂದಾಗಿ ದುಃಖಿಗಳಾದವರ ದುಃಖದ ಕೊನೆ ನನ್ನ ಸಾವಿನಿಂದಾಗುವದು........

...ನಾನು ಹುಚ್ಚಿ....ನನ್ನಿಂದಾಗಿ ದುಃಖಿಗಳಾದವರಾದರೂ ಯಾರು ? ದುಃಖವಡಗಿರುವದು ಪ್ರೀತಿಯಲ್ಲಿ. ನನ್ನನ್ನು ಪ್ರೀತಿಸುವವರು ಯಾರಾದರೂ ಇರುವರೆ ಈ ಜಗದಲ್ಲಿ .......?

ಇಲ್ಲ ...ಯಾರೂ ಇಲ್ಲ ಒಬ್ಬರೂ ಇಲ್ಲ. ಯಾರೊಬ್ಬರೂ ಇಲ್ಲ.

ಎಲ್ಲರೂ ಸ್ವಾರ್ಥಿಗಳು. ಎಲ್ಲರಲ್ಲಿಯೂ ಸ್ವಾರ್ಥವಡಗಿದೆ. ಎಲ್ಲರಿಗೂ– ತಮ್ಮ ಸುಖಬೇಕು. ತಮ್ಮ ಸ್ವಾರ್ಥಬೇಕು.

ಹೆತ್ತವರ ನೆತ್ತರವೇ ಮೂರ್ತಿಮತ್ತಾಗಿ ಬೆಳೆಯುವದು ಸಂತಾನದ ರೂಪದಲ್ಲಿ.

ತಮ್ಮ ಮಾನಕ್ಕೆ ತಮ್ಮ ಸುಖಕ್ಕೆ ಬಾಧೆ ಬರುವದೆಂದು ಹೆತ್ತವರೇ ತಮ್ಮ ನೆತ್ತರದ ಮೂರ್ತಿಯ ಸಂತಾನದ, ನನ್ನ ಕತ್ತಿಗೆ ಕೈಹಾಕಿದರು ! ತಪ್ಪು ಯಾರಿಂದಲೂ ಆಗುವದೇ ಇಲ್ಲವೆ...? ತಮ್ಮ ಮಗಳಿಂದ ತಪ್ಪುಗಳಾಗದಂತೆ ದಕ್ಷತೆ ವಹಿಸುವದು ತಂದೆ ತಾಯಿಗಳ ಕರ್ತವ್ಯವಲ್ಲವೆ....? ಹೆಣ್ಣಾಗಿ ಹುಟ್ಟಿದವರೆಲ್ಲರೂ ಸಾವಿತ್ರಿಯ ಅವತಾರಿಯೇ ಇರುವರೇ......? ತಂದೆ ತಾಯಿಗಳ ಶಿಕ್ಷಣದಿಂದಾಗಿಯೇ ಅಲ್ಲವೆ ಸಾವಿತ್ರಿಯು ಯಮನಿಂದ ಹೋರಾಡಿ ಪತಿಯ ಪ್ರಾಣರಕ್ಷಿಸಿದ್ದುದು....?

ಅಂತಹ ಶಿಕ್ಷಣ ನನ್ನನ್ನು ಹೆತ್ತವರು ನನಗೆ ಕೊಟ್ಟಿದ್ದರೆ....? ಕರ್ತವ್ಯ ಚ್ಯುತಿಗಾಗಿ ಶಿಕ್ಷೆಯಾಗಬೇಕಾದುದು ಹೆತ್ತವರಿಗೆ.

ಆದರೆ ಆದದ್ದು ನನಗೆ.

ಅವರಲ್ಲಿಯೇ ನನಗಾಗಿ ಪ್ರೀತಿಯಿದ್ದುದಾಗಿದ್ದರೆ—? ಪರಿಸ್ಥಿತಿಯನ್ನೆದುರಿಸಲು ಹೇಳುತ್ತಿದ್ದರು. ಧೈರ್ಯ ಕೊಡುತ್ತಿದ್ದರು. ನನ್ನನ್ನು ಆ ಅವಸ್ಥೆಗೆ ಗುರಿಮಾಡಿದ 'ದುಷ್ಯಂತ'ನನ್ನು ಎಳೆದು ತರುತ್ತಿದ್ದರು.

ಹಾಗೆ ಯಾವುದೂ ನಡೆಯಲಿಲ್ಲ. ಏಕೆಂದರೆ ಅವರಿಗೆ ತಮ್ಮ ಮಾನದ ವಿಚಾರ. ತಮ್ಮ ಸುಖದ ವಿಚಾರ ಆದಕ್ಕೆ ಅವರು ಹೇಳಿದರು—

"ನೀನು ಸತ್ತರೆ ನಾವು ನಿಶ್ಚಿಂತರಾಗುವೆವು." ಎಂದು

ಇದು ತಾವು ಹೆತ್ತ ತಮ್ಮ ಮಗಳಿಗೆ ಕೊಟ್ಟ ಪ್ರೀತಿಯ ಉಡುಗೊರೆ.

ಪ್ರೀತಿಯಂತೆ ! !

ಆ ಶಬ್ದದ ಅರ್ಥವಾದರೂ ಜನಕ್ಕೆ ಗೊತ್ತಿದೆಯೆ....?

ರಂಗನೂ ಮಾತು ಮಾತಿಗೆ ಹೇಳುತ್ತಿದ್ದ. "ನಿಮ್ಮಿ...ನಾನು ನಿನ್ನನ್ನು ಪ್ರೀತಿಸುವೆ" ಎಂದು 'ವಿಮಲೆ'ಯನ್ನು ಹಾಳುಮಾಡಿ 'ನಿಮ್ಮಿ' ಎಂದು ಅಪ ಭ್ರಂಶ ಗೊಳಿಸಿದವನಲ್ಲಿ ಪ್ರೀತಿ ಎಲ್ಲಿಯದು ? ಬೆಳೆಯುವ ದೇಹದ ತೇಜದಿಂದ ಅಂಧನಾದ ಆತ ದೇಹದ ಬೆಳವಣಿಗೆ ಸರಿಯಾಗಿ ತಲೆ ಬೆಳೆಯದಿದ್ದ ನನ್ನನ್ನು ಛಿನ್ನ ವಿಚ್ಛಿನ್ನ ಮಾಡಿದ. ಹಾಗೆಲ್ಲ ಮಾಡುವಾಗಲೂ ಆತ ಹೇಳುವದು "ನಾನು ನಿನ್ನನ್ನು ಪ್ರೀತಿಸುವೆ." ಎಂದು.

ಕೊನೆಗೆ ಅದೇ ಪ್ರೀತಿಯಿಂದಲೇ "ನನಗೇನೂ ಅರಿಯದು ಎಂದು ಹೇಳಿದ.

ಪ್ರೀತಿಯಂತೆ ಪ್ರೀತಿ !

ಇವರನ್ನು ಸುಟ್ಟುಹಾಕುವಷ್ಟು ಕೋಪ ಬರುತ್ತದೆ. ಕಾಮಿನಿ ಹೇಳು ವದೇನೂ ಅಸತ್ಯವಲ್ಲ. ಈ ಗಂಡಸು ಜಾತಿಗೆ ನೀತಿಯನ್ನುವದಿಲ್ಲ. ಮಂಗ ಗಳು ಬಾಲವನ್ನು ಕಳೆದುಕೊಂಡು ಬಾಯಿ ಪಡೆದುಕೊಂಡಿದ್ದಾರೆ ಅಷ್ಟೆ. ಬಾಯಿಗೆ ಬಂದ ಆಶ್ವಾಸನ ಕೊಟ್ಟು ನೀತಿಯನ್ನು ಮೆಟ್ಟಿ ತಮ್ಮ ಸ್ವಾರ್ಥ ವನ್ನೂ ಸಾಧಿಸಿಕೊಳ್ಳುವರು. ಕೊನೆಗೆ ಬೀಸಾಡುವರು ರಸವನ್ನು ಹೀರಿದ ಸಿಪ್ಪೆಯಂತೆ.

ನಾನು ಮೋಸ ಹೋದೆ. ಮಗುವಿಗೆ ತಿನ್ನಲು ಕೊಟ್ಟು ಕೊರಳಲ್ಲಿಯ ದನ್ನು ಕಸಿದುಕೊಳ್ಳುವ ಕಳ್ಳನಂತೆ ರಂಗ ನನಗೆ ತೋರಿಕೆಯ ಪ್ರೀತಿಯನ್ನು ಕೊಟ್ಟು ನನ್ನ ಮಾನವನ್ನು ಕಸಿದುಕೊಂಡು ಹೋದ...ನಾನು ಹಾಳಾದೆ... ಹಾಳಾದೆ....

ಪ್ರೀತಿಯ ಮೋಸದಿಂದ ಹಾಳಾದೆ. ಈ ಸ್ವಾರ್ಥಿಗಳ ಜಗದಲ್ಲಿ ಸ್ವಾರ್ಥಿ ಗಳ ಸ್ವಾರ್ಥಕ್ಕೆ ಬಲಿಯಾಗಿ ನಾನು ಹಾಳಾದೆ..... ಅಷ್ಟೇ ಅಲ್ಲ. ನನ್ನನ್ನು ಉಳಿಸಲು ಸಿದ್ಧರಾದವರನ್ನು ಹಾಳುಮಾಡಲು ಹೊರಟಿರುವೆ.

ಬೇಡ....ಈ ಜೀವ ಬೇಡ. ಈ ಹಾಳಾದ ಜೀವ ಬಾಳುವದರಿಂದ ಇನ್ನುಳಿದವರೂ ಹಾಳಾಗುವರು.

ಇಲ್ಲ ... .. ನನ್ನನ್ನು ಬಾಳಿಸಿದವರನ್ನು ನಾನು ಕಾಡಿಸಲಾರೆ. ನನ್ನನ್ನು ಉಳಿಸಿದವರನ್ನು ನಾನು ಹಾಳು ಮಾಡಲಾರೆ. ನನ್ನ ಉಪಕಾರಿಗೆ ಅಪಕಾರ ಮಾಡಲಾರೆ.

ಅವರು ಉಪಕಾರಿಗಳು. ಅವರು ಮಹಾನುಭಾವರು. ಅವರು ದೇವರಂತಹರು. ಅವರು ಸಾಧುಗಳು. ಅವರನ್ನು ನಾನು ದೊರಕಿಸದಿದ್ದರೂ ಅವರ ಸನ್ನಿಧಿಯಲ್ಲಿ ನಾನು ದೊರಕಿಸಿದ್ದುದು ತುಂಬ. ಯಾವಾಗಲೂ ಅವರ ಅಡಿಯಲ್ಲಿ ಬಿದ್ದುಕೊಂಡಿರಬೇಕೆಂಬ ನನ್ನ ಇಚ್ಛೆ ಪೂರ್ಣವಾಗದಿದ್ದರೂ ನನ್ನ ಚಿತೆಗೆ ಅವರ ಹಸ್ತದಿಂದಲೇ ಬೆಂಕಿ ಕೊಡುವ ಇಚ್ಛೆಯಾದರೂ ಪೂರ್ಣವಾಗುವದು.

ಅವರೇ ನನ್ನ ಚಿತೆಗೆ ಬೆಂಕಿ ಕೊಡುವವರು. ಅವರಲ್ಲದೆ ಇನ್ನಾರು ನನಗೆ ಈ ಜಗದಲ್ಲಿ ? ಅವರೇ ನನ್ನ ಸರ್ವಸ್ವ ಅವರಿಂದಲೇ ಬಾಳಿದೆ ಇಲ್ಲದಿದ್ದರೆ ಅನಾಥ ಹೆಣವಾಗಿ ಹದ್ದು ಕಾಗೆಗಳಿಗೆ ಅನ್ನವಾಗುತ್ತಿದ್ದೆ.

ಅವರು ಬದುಕಿಸಿದರು. ಅವರು ಬಾಳಿಸಿದರು.

ಅಂದು ಬದುಕಿಸಿದವರು— ಇಂದಿನವರೆಗೆ ಬಾಳಿಸಿದವರು. ಇಂದು ಕೂಡ ಬದುಕಿಸಲಾರರೆ ...? ಇನ್ನುಮುಂದೆ ಬಾಳಿಸಲಾರರೆ...? ಅದಕ್ಕೆ ಅವರು ಅಸಮರ್ಥರೆ... ?

ಜನರು ಅವರಿಗೆ ಏನೆಂದರು ಎನ್ನುವದನ್ನು ಇಂದು ವಿಚಾರ ಮಾಡಿ ಪ್ರಯೋಜನವೇನು...? ಹೇಳುವವರು ಹಿಂದಯೇ ಹೇಳಿದ್ದಾರೆ.

ಹಾಗೆಲ್ಲ ಹೇಳಿಸಬಾರದೆಂಬ ವಿಚಾರವನ್ನು ಅಂದು ಮಾಡಬೇಕಿತ್ತಲ್ಲದೆ ಇಂದು ಅಲ್ಲ. ಅಂದು ನಾನು ಅವರ ಮನೆಯಲ್ಲಿ ಕಾಲಿಟ್ಟಿದ್ದಕ್ಕೊಂದು ಅಪವಾದ. ಇಂದು ನಾನವರ ಮನೆಯಿಂದ ಕಾಲುಕಿತ್ತಿದ್ದಕ್ಕೆ ಮತ್ತೊಂದು ಅಪವಾದ.

ಅಂದು ನಾನವರ ಮನೆಯಲ್ಲಿ ಕಾಲು ಹಾಕಿದಾಗ ಜನರು ನನ್ನನ್ನು ಅವರ ಪತ್ನಿ ಎಂದು ತಿಳಿದುಕೊಂಡಿರಬಹುದು. ಆದಕ್ಕಿಂತ ಹೆಚ್ಚಿಗೆ ತಿಳಿದುಕೊಳ್ಳುವ ಶಕ್ತಿ ವಿಚಾರವಾದರೂ ಎಲ್ಲಿದೆ ಜನರ ಹತ್ತಿರ ? ಇಂದು ನಾನವರ ಮನೆಯಿಂದ ಹೊರಗೆ ಹೋಗಿ ಮೃತ್ಯುವಿಗೆ ಆಹುತಿಯಾದರೆ— ಜನ ಅದರ

ಅಪವಾದವನ್ನು ಹೊರಿಸುವದು ಆ ನಿಷ್ಪಾಪ ನನ್ನ ಉಪಕಾರ ಕರ್ತೃವಿಗೆ ಅಲ್ಲವೆ ?

ಅಹುದು ಜಗ ಹಾಗೆಯೇ ಹೇಳುವದು. ಕುಲಕರ್ಣಿಯವರೇ ಕೊಲೆ ಮಾಡಿರಬೇಕು ಎನ್ನುವರು. ಜನದ ನಾಲಿಗೆಗೆ ಎಲಬಿರುವದೆ ?

ಬದುಕಿ ಅವರಿಗೆ ಕಷ್ಟಕೊಟ್ಟೆ

ಸತ್ತುಕೂಡ ಕಷ್ಟಕೊಡಲು ಹೊರಟಿರುವೆ.

ಸಾಯುಬಾರದಾದರೆ ಇದ್ದು ಮಾಡುವದಾದರೂ ಏನು... ?

ನಾನು ಇರುವದರಿಂದಾದರೂ ಅವರು ಸುಖಿಯಾಗಬಹುದೆ...?

ಅವರನ್ನೇ ಕೇಳಿ ಬಿಡಬೇಕೆನ್ನಿಸುತ್ತದೆ. ಆದರೆ ಕೇಳುವದಾದರೂ ಹೇಗೆ. . ? ಈ ವಿಚಿತ್ರಸನ್ನಿವೇಶದಿಂದ ಬಿಡುಗಡೆಯಾಗುವದು ಹೇಗೆ....? ನಿತ್ಯ ಹಗಲು ರಾತ್ರಿ ಇದುವೇ ತಲೆ ತಿನ್ನುವ ತಲೆ ಕೆಡಿಸುವ ವಿಚಾರ. ಯಾವುದೊಂದು ನಿರ್ಧಾರಕ್ಕೆ ಬರಲೇಬೇಕು.

ನಿರ್ಧಾರಕ್ಕೆ ಬರುವವರಾರು....? ನನ್ನದಂತೂ ನಿರ್ಧಾರವಿದೆ. ಉಳಿದುದು ಅವರ ವಿಚಾರ.

ಅವರ ವಿಚಾರ ನನ್ನ ವಿಚಾರಕ್ಕೆ ಸರಿ ಹೋಗುವಂತಿದ್ದರೆ ಸರಿ. ಇಲ್ಲದಿದ್ದರೆ...? ಹಾಳಾದ ಹೆಣ್ಣು ತಾನಾಗಿ ಹೋಗಿ ವಿವಾಹದ ವಿಚಾರವನ್ನೆತ್ತಿದರೆ ಮಾಡಿಕೊಳ್ಳಬೇಕಾದವರು ಒಪ್ಪಬೇಡವೆ....?

ನಾನು ಕೇಳುವದಾದರೂ ಹೇಗೆ...? ಅವಿವಾಹಿತೆ ನಾನಾದರೂ ಕನ್ನೆಯಲ್ಲ. ಕನ್ನೆಯಲ್ಲದವಳು ವಿವಾಹಕ್ಕೆ ಸಿದ್ಧಳಾಗಿರುವದು ಸ್ವಾಭಾವಿಕ. ಏಕೆಂದರೆ ವಿವಾಹದಿಂದಲೇ ಹಾಳು ಜೀವನಕ್ಕೆ ಮುಕ್ತಿ. ಆದರೆ ಮುಕ್ತಮಾಡುವವರು ಸಿದ್ಧರಾಗಬೇಕಲ್ಲವೆ ?

ಅಂತಹ ವಿವಾಹಕ್ಕೆ ವಿರೋಧ ಹೆಚ್ಚು. ಮನೆಯವರ ವಿರೋಧ. ಹೊರಗಿನವರ ವಿರೋಧ. ಅಲ್ಲದೆ ಅವಹೇಳನೆ. ಹಾಳಾದವಳ ಜೊತೆಗೆ ವಿವಾಹಕ್ಕೆ ನನ್ನ ಅಣ್ಣ ಸಿದ್ಧನಾದರೆ ಅದಕ್ಕೆ ನಾನು ಕೂಡ ವಿರೋಧಿಸುವೆ! ಅದಕ್ಕೆ ಕಾರಣ ಹಾಳಾದ ವ್ಯಕ್ತಿಗಾಗಿದ್ದ ದ್ವೇಷವಲ್ಲ. ಸಮಾಜದ ನೀತಿ ರೀತಿಯ

ಪರಂಪರೆಯಲ್ಲಿ ಬೆಳೆದ ಮನ ವಿಚಾರಕ್ಕೆ ಒಪ್ಪಿತವಾದ ವಿಷಯಗಳನ್ನು ಕೂಡ ಮಾಡಲು ಸಿದ್ಧರಾಗುವದಿಲ್ಲ ನಾವು.

ಆದೇ ಮನಸ್ಥಿತಿ ಕುಲಕರ್ಣಿಯವರದಿದ್ದರೆ....?

ಅವರ ವಿಚಾರಗಳು ಉನ್ನತವಾಗಿವೆ. ಆದರೆ ಅವರು ಕೂಡ ಸಮಾಜದ ಪರಂಪರೆಯಲ್ಲಿ ಬೆಳೆದು ಬಂದವರಲ್ಲವೆ ..? ಸಮಾಜದಲ್ಲಿ ಬಾಳುವವರಲ್ಲವೆ ?

ನಾನು ಅವರ ಬಾಳುವೆಯ ದಾರಿಯಲ್ಲಿಯ ಅಡ್ಡಗಲ್ಲಾಗಬಹುದು. ನನ್ನನ್ನು ಕಟ್ಟಿಕೊಳ್ಳುವದರಿಂದ ಸಮಾಜದ ಅವಹೇಳನೆಗೆ ಅವರು ಗುರಿಯಾಗಬಹುದು...

ಆದರೆ ಇವೆಲ್ಲ ನನ್ನ ವಿಚಾರಗಳು. ನಿರಾಶೆಯಲ್ಲಿ ಬೆಂದವಳ ಆಶೆಯ ವಿಚಾರ. ಹಾಳಾದ ದೇಹದಲ್ಲಡಗಿದ ವಿಕ್ರುತ ಮನದ ವಿಚಾರ....ವಿಚಾರ....

ರಾತ್ರಿಯಲ್ಲಿ ವಿಚಾರ .... ಹಗಲಲ್ಲಿ ವಿಚಾರ... ಬೆಳಕಿನಲ್ಲಿ ವಿಚಾರ... ಕತ್ತಲೆಯಲ್ಲಿ ವಿಚಾರ....

ಈ ವಿಚಾರದ ಗರ್ಭವನ್ನೊಡೆದು ಆಚಾರದ ಜನನವಾಗಬೇಕಿತ್ತು.

ಜನನವಾಗುವದೆಂಬ ಆಶೆ ಇರದಿದ್ದರೂ ಜನನವಾಗಬೇಕೆಂಬ ಆಶೆ ಇತ್ತು. ಆಶೆಯ ಸಂತಾನ ಅನಂತವಾದರೂ ಒಂದೊಂದು ಅಂತವಾಗಲೇ ಬೇಕು. ಒಂದು ಆಶೆ— ಪೂರ್ಣವಾದರೂ ಆಗಬೇಕು. ಇಲ್ಲವೇ ನಿರಾಶೆ ಯಲ್ಲಾದರೂ ಪರಿಣಮಿಸಬೇಕು. ಏನೇ ಆದರೂ ಅದಕ್ಕೂ ಅಂತವಿದೆ. ಅಂತವಾಗುವದು. ಅಂತವಾಗಲೇಬೇಕು ಇದು ಜಗದ ನಿಯಮ.

ಮನುಷ್ಯ ನಿರ್ಮಿತ ನಿಯಮ ಮುರಿದು ಹೋಗಬಹುದು. ಆದರೆ ನಿಸರ್ಗದ ನಿಯಮ ಮುರಿಯಲಾರದು. ಏಕೆಂದರೆ ಮುರಿಯುವಂತಹ ನಿಯಮಗಳನ್ನು ನಿಸರ್ಗ ನಿರ್ಮಿಸುವದೇ ಇಲ್ಲ.

ನನ್ನ ಆಶೆಗೂ ಕೂಡ ಒಂದು ದಿನ ಅಂತವಾಯಿತು.

ನಿರಾಶೆಯಲ್ಲಿ ಅಲ್ಲ. ಆಶಾಪೂರ್ತಿಯಾಗಿ.....

ಆಶಾಪೂರ್ತಿ......

ಅಹುದು ನನ್ನ ಆಶಾಪೂರ್ತಿ ನಿರ್ಮಲೆಯ ಆಶಾಪೂರ್ತಿ. ಸುಮಿತ್ರೆಯ ಆಶಾಪೂರ್ತಿ—

"ನಿಮ್ಮ ಜೊತೆಗೆ ವಿವಾಹ ಮಾಡಿಕೊಳ್ಳುವೆ" ಎಂದು ಕುಲಕರ್ಣಿಯು ವರು ಒಂದುದಿನ ಹೇಳಿದರು.

ತಮ್ಮ ವಿಚಾರವನ್ನು ಹೇಳಿದರು. ತಮ್ಮ ಜೀವನದ ಕತೆ ಹೇಳಿದರು. ಬರಬಹುದಾದ ಕಷ್ಟಗಳ ವಿಚಾರ ಹೇಳಿದರು. ನಾನು ಮಾಡಬೇಕಾದ ಕರ್ತವ್ಯಗಳನ್ನು ಹೇಳಿದರು. ತಾವು ನನಗಾಗಿ ಮಾಡಬಹುದಾದುದನ್ನು ಹೇಳಿದರು .... ಎಲ್ಲವನ್ನೂ ಹೇಳಿದರು ಯಾವುದನ್ನೂ ಬಿಡದೆ ಹೇಳಿದರು. ಮತ್ತೆ ಹೇಳಿದರು "ನಿಮ್ಮ ಜೊತೆಗೆ ವಿವಾಹ ಮಾಡಿಕೊಳ್ಳುವೆ" ಎಂದು.

ಎಂದೂ ವಿವಾಹವನ್ನೇ ಮಾಡಿಕೊಳ್ಳಬಾರದೆಂದು ನಿರ್ಧರಿಸಿದ ತಾವು ಕೂಡ ವಿವಾಹಕ್ಕೆ ಸಿದ್ಧರಾಗಬೇಕಾದುದನ್ನು ಹೇಳಿದರು. ನನಗಾಗಿ ತುಂಬ ವಿಚಾರ ಮಾಡುತ್ತಿದ್ದಾರೆಂದು ಹೇಳಿದರು. ನಾನು ಅವರಲ್ಲಿಗೆ ಬಂದಂದಿನಿಂದ ನನ್ನ ವಿಚಾರ ಅವರ ತಲೆ ತಿನ್ನುತ್ತದೆಂದು ಹೇಳಿದರು. ನಿತ್ಯವೂ ತಿರುತಿರುಗಿ ಅವರ ತಲೆ ಕೆಡಿಸುವ ಪ್ರಶ್ನೆ "ಇವಳ ವಿಚಾರವೇನು....? ಇದರಲ್ಲಿ ನನ್ನ ಪಾತ್ರವೇನು....?" ಎಂಬುದನ್ನು ವಿಚಾರ ಮಾಡಿದುದಾಗಿ ಹೇಳಿದರು.

ಅವರು ರಂಗನಿಗೂ ಕೂಡ ಓಲೆ ಬರೆದಿದ್ದರಂತೆ ಆದರೆ ಆತ ನಿಜಕ್ಕೂ ರಾಕ್ಷಸ.... ನೀತಿ ನಿಯಮಗಳ ಸಭ್ಯತೆಗಳನ್ನರಿಯದ ಹುಂಬ.... ಅವ ತಿರುಗಿ ಅವರಿಗೆ ಬರೆದುದು—

"ನಿಮ್ಮ ಪಾಪದ ಹೊರೆಯನ್ನು ನನ್ನ ತಲೆಯಮೇಲೇಕೆ ಹೊರಿಸುವಿರಿ?" ಎಂದು.

ಕುಲಕರ್ಣಿಯವರಂತಹ ದೇವರಂತಹ ಮನುಷ್ಯರಿಗೆ ಆ ರೀತಿ ಬರೆದವನ ಸಂಸಾರ ಜೀವನ ಎಂದಾದರೂ ಸುಖಮಯವಾಗಿ ಸಾಗಬಹುದೆ...? ಅವನಿಗೆ ಅನ್ನ ನೀರಾದರೂ ದೊರೆಯಬಹುದೆ...?

ಯಾರ ಜೀವನವೂ ಹಾಳಾಗಬಾರದು.... ಮನುಷ್ಯರೆನ್ನುವವರಿಂದ ತಪ್ಪುಗಳಾಗುವದು ಸ್ವಾಭಾವಿಕ ' ಎನ್ನುವ ಮಹಾ ಉದ್ದೇಶದಿಂದ "ಹೊಸ ತಾರುಣ್ಯದಲ್ಲಿ ಇಂತಹದು ನಡೆಯುವದು, ಅದಕ್ಕಾಗಿ ಯಾರೂ ನಾಚಿಕೆ ಪಟ್ಟುಕೊಳ್ಳಬೇಕಾಗಿಲ್ಲ. ಯಾವುದೋ ಅವ್ಯಕ್ತ. ಹೆದರಿಕೆಯಿಂದ ಇಂತಹ ತಪ್ಪುಗಳಾಗುವವು. ಆದರೆ ಆ ತಪ್ಪುಗಳನ್ನು ತಿದ್ದಿಕೊಳ್ಳುವದರಲ್ಲಿ ಪುಣ್ಯ

ಷಾರ್ಥವಿದೆ. ಹೆಮ್ಮೆಯಿದೆ...." ಮುಂತಾಗಿ ಕುಲಕರ್ಣಿಯವರು ಆತನಿಗೆ ಬರೆದರೆ

ಆತ " ನನಗೆ ಹೆದರಿಕೆ ಎಂಬುದೇ ಇಲ್ಲ... ನನ್ನಿಂದ ಯಾವ ತಪ್ಪೂ ಆಗಿಲ್ಲ. ತಪ್ಪು ಮಾಡದ ನಾನು ಹೆದರುವದಾದರೂ ಏತಕ್ಕೆ .. ? ಯಾರಿಗೆ...? ....ನಾನು ಯಾವುದೊಂದು ಕಾರ್ಯವನ್ನು ವಿಚಾರ ಪೂರ್ವಕವಾಗಿಯೇ ಮಾಡುವೆ ಆದುದರಿಂದ ನನ್ನಿಂದ ತಪ್ಪುಗಳಾಗುವದು ಸಾಧ್ಯವೇ ಇಲ್ಲ........ ನನಗೆ ಯಾರಿಂದಲೂ ಏನನ್ನೂ ಕಲಿಯಬೇಕಾಗಿಲ್ಲ.... ಯಾರೋ ಅಪರಿಚಿತ ರಾದ ನೀವು ಚಿರಪರಿಚಿತರಂತೆ ಹೇಳಲು ಬಂದದ್ದು ಆಶ್ಚರ್ಯದ ಸಂಗತಿ...." ಎಂದು ಬರೆದು ಮುಗಿಸಿದ್ದರೆ .. ಅಜ್ಞಾನಿ.... ಅಪರಾಧಿ ತನ್ನನ್ನು ತಾನೇ ಸಮರ್ಥಿಸಿಕೊಳ್ಳುತ್ತಾನೆ. ಎಂದು ಹೇಳಬಹುದಾಗಿತ್ತು. ಆದರೆ ಆತ ಸಭ್ಯತೆಯ ಸರ್ವ ನಿಯಮಗಳನ್ನು ಕಾಲ್ಕೆಳಕ್ಕೆ ಮೆಟ್ಟಿ ಮುಂದೆ—

" ಅವಿವಾಹಿತ ತರುಣಿ ಬಸಿರಾದುದನ್ನು ತಂದೆ ತಾಯಿಗಳು ಕೂಡ ಸಹಿಸರು.......ನೀವು ಹೇಳುವ ತರುಣಿ ಇರುವದು ನಿಮ್ಮಲ್ಲಿ....ಇದೊಂದೇ ಸಂಗತಿ ಅಪರಾಧಿಗಳು ಯಾರು ಎನ್ನುವದನ್ನು ಸ್ಪಷ್ಟಪಡಿಸುವದಕ್ಕೆ ಸಾಕ ಲ್ಲವೇ....? " ಎಂದೂ ಬರೆದಿರುವ....

ರಾಕ್ಷಸ....ನನ್ನಲ್ಲಿ ದೇವತೆಯ ಶಕ್ತಿಯಿದ್ದುದಾದರೆ ಈ ರಾಕ್ಷಸನ ನೆತ್ತರ ದಲ್ಲಿ ಕೈ ತೊಳೆಯುತ್ತಿದ್ದೆ. ದೇವನ ಶಕ್ತಿಯಿದ್ದುದಾದರೆ ಕರುಳುಗಳ ಮಾಲೆ ಯನ್ನು ಕೊರಳಿಗಿಟ್ಟುಕೊಳ್ಳುತ್ತಿದ್ದೆ.

ನನಗೆ ಅನ್ಯಾಯ ಮಾಡಿರುವ....ನನ್ನಮೇಲೆ ಅತ್ಯಾಚಾರ. ಮಾಡಿ ರುವ, ಪೂರ್ವ ಜನ್ಮದ ವೈರಿಯಾಗಿ ನನ್ನನ್ನು ಮನೆಯಿಂದ ದೂರ ಮಾಡಿ ರುವ... ಬೀದಿಯ ಪಾಲು ಮಾಡಿರುವ, ಪೂರ್ವಜನ್ಮದ ನನ್ನ ಪುಣ್ಯ ಸಾಕ್ಷಾ ತ್ಕರಿಸಿದಂತೆ ನನ್ನ ಉದ್ಧಾರಕ್ಕಾಗಿ ಬಂದಿರುವ ದೇವರಿಗೆ ಕೂಡ ಅಂತಹ ಮಾತು ಹೇಳುವದೆ...? ಅಂತಹ ಮಾತುಗಳನ್ನು ಹೇಳಿ ಮುಗಿಸದೆ ಕೊನೆಗೆ-

"....ಇದು ಶುದ್ಧ ಮೋಸಗಾರಿಕೆ....ನೀವುಕೂಡ ಮೋಸಕ್ಕೆ ಹೋಗಿರು ವಂತೆ ಕಾಣುತ್ತದೆ... ಅಂತಹದೆ ಕೀಳು ಕೆಲಸ ಮಾಡಿ ಹಣ ದೊರಕಿಸುವ, ಹೊಟ್ಟೆ ತುಂಬಿಕೊಳ್ಳುವವರಿಂದ ನೀವು ದೂರಿರುವದು ಒಳಿತು.......ನೀವು

ಸಕಾಲದಲ್ಲಿ ಎಚ್ಚತ್ತು ಸರಿಯಾದ ದಾರಿಯನ್ನು ಹಿಡಿಯಿರಿ......" ಎಂದೂ ಬರೆದಿರುವ.

ಅವನಿಂದಾಗಿ ಹೆತ್ತ ಮನೆಯಿಂದ ಹೊರತಾದೆ. ಎಂತಹದೇ ಇರಲಿ ಅದು ನನ್ನ ಮನೆಯಾಗಿತ್ತು. ಅವರು ಎಂತಹರೇ ಇರಲಿ ತಂದೆ ತಾಯಿಗ ಳಿದ್ದರು. ಹೆತ್ತ ಮನೆಯಿಂದ ಹೊರಡಿಸಿದ ಹೆತ್ತ ತಂದೆ ತಾಯಿಗಳಿಂದ ಅಗಲಿಸಿದ ಕೊನೆಯಲ್ಲಿ— ಕರುಣೆಯಿಂದ ಆಶ್ರಯ ಕೊಟ್ಟವರ ಮನದಲ್ಲಿ ಕೂಡ ವಿಷದ ಬೀಜವನ್ನು ಬಿತ್ತಲು ಹೊರಟಿದ್ದಾನೆ....ಪಾಪಿ...

ಆತನ ಮಾತನ್ನು ಇವರು ನಂಬಿದ್ದರೆ....?

ನಂಬಿದ್ದರೆ ಮತ್ತೆ ಬೀದಿಯ ಪಾಲು. ಸಾವಿನೊಂದಿಗೆ ಸರಸ. ಇಲ್ಲದಿದ್ದರೆ...

ಮೈಮಾರಿ ಮೈ ಬಾಳಿಸುವದು, ಮೈ ತೆರೆದು ಮೈ ಮುಚ್ಚಿ ಕೊಳ್ಳುವದು....

ಎಂತಹ ಪುಣ್ಯವಂತನು ಆತ. ಯಾವ ಸುಮುಹೂರ್ತದಲ್ಲಿ ಆತ ನನ್ನು ಅವನ ತಾಯಿ ಹೆತ್ತಿರಬಹುದು ? ನಾಗರ ಹಾವಿನ ಜಾತಿಯವನು... ! ಅವನನ್ನು ಬಸಿರಿದ್ದಾಗ ಆವನ ತಾಯಿಯಮೇಲೆ ನಾಗರ ಹಾವಿನ ನೆರಳು ಬಿದ್ದಿರಬಹುದು. ಅವನ ತಾಯಿ....

ಅವನ ತಾಯಿ ಎಂತಹ ಪುಣ್ಯವಂತಳು. ಎಂತಹ ಪುಣ್ಯವಂತಳ ಹೊಟ್ಟೆಯಲ್ಲಿ ಎಂತಹ ರಾಕ್ಷಸ ಹುಟ್ಟಿದ್ದಾನೆ....! ಇಂತಹ ಮಕ್ಕಳಿಂದ ತಂದೆ ತಾಯಿಗಳ ಉದ್ಧಾರವೆ....! ಇಂತಹರನ್ನು ನಂಬಿದರೆ ಮುಗಿದು ಹೋಯಿತು. ಕೂದಲಿನಿಂದ ಕೊರಳು ಕೊಯ್ಯುವ ವಿಶ್ವಾಸ ಘಾತಕಿ....

ಕಾಮಿನಿ ಹೇಳುವದೇನೂ ಅಸತ್ಯವಲ್ಲ. "ಹಾವನ್ನು ನಂಬು ಆದರೆ ಗಂಡಸರನ್ನು ನಂಬಬೇಡ. ನಂಬಿಗೆಗೆ ಯೋಗ್ಯವಾದ ಜಾತಿಯೇ ಅದಲ್ಲ. ಕ್ರೂರ ಮೃಗಗಳಂತೆ ಆಡವಿಯಲ್ಲಿ ವಾಸಿಸಬೇಕಾದ ಜನಾಂಗ ಅದು. ಆದರೆ ಸಾಧು ಸ್ತ್ರೀ ಜಾತಿಯ ಕರುಣೆಯಿಂದ ಊರಲ್ಲಿ ಬಾಳುವದಕ್ಕೆ ಬಂದಿದ್ದಾರೆ. ಅಷ್ಟೆ ಆದರೆ ಆದರ ಉಪಕಾರವನ್ನೂ ಕೂಡ ತೀರಿಸತೊಡಗಿದ್ದಾರೆ! ವಿಶ್ವಾಸ ಘಾತಕಿಗಳು....ಉಂಡ ಮನೆಗೆ ಎರಡು ಬಗೆಯುವವರು. ಪಾಪ....ಎಂದು

ಆಶ್ರಯ ಕೊಟ್ಟರೆ ಆಶ್ರಯ ಕೊಟ್ಟವರನ್ನೇ ಮನೆಯಿಂದ ಬೀದಿಗೆ ದೂಡುವ ನೀಚರು........

ಅಲ್ಲದೆ ಮತ್ತೇನು .. ...?

ಆ ರಾಕ್ಷಸನಿಗೆ ನಾನುಮಾಡಿದ ಅಪರಾಧವೇನು....? ಸಂಧಿ ಸಿಕ್ಕಾಗೆಲ್ಲ ನನ್ನನ್ನು ಹಿಡಿದೆಳೆದು ಘಾಸಿ ಮಾಡುತ್ತಿದ್ದ. ವೇದನೆಯಿಂದ ವಿರೋಧ ವ್ಯಕ್ತ ಪಡಿಸಿದರೂ ಕೋಪಗೊಳ್ಳುತ್ತಿದ್ದ. ಎಲ್ಲವನ್ನೂ ಅವನಿಗಾಗಿ ಸಹಿಸುತ್ತಿದ್ದೆ. ಸಹಿಸಿದೆ. ಅದಕ್ಕೆಲ್ಲ ಆತಮಾಡಿದ ಉಪಕಾರ...

ಉಪಕಾರವಂತೆ...! ಅಂತಹ ವಿಚಾರವಲ್ಲ ಆ ಶಬ್ದ ಕೂಡ ಆತನಿಂದ ಸಾವಿರ ಹರದಾರಿ ದೂರ ಓಡುತ್ತದೆ ಹೆದರಿ. ಉಪಕಾರ ಮಾಡುವ ಜಾತಿಯಲ್ಲ ಅದು.

ಹಾಲು ಹಾಕಿದ ಹಾವು ಕೂಡ ಕಚ್ಚುವದಿಲ್ಲ ಹಾಲು ಹಾಕಿದವರಿಗೆ. ದೇಹವನ್ನೇ ಇವನಿಗೆ ಅರ್ಪಿಸಿದರೆ ಅದನ್ನೆಲ್ಲ ಹೀರಿ ಸುಲಿದು ನಿರ್ಜೀವಮಾಡಿ ನಿಃಸತ್ವಗೊಳಿಸಿ ಉರಿಬಿಸಿಲಿನಲ್ಲಿ ಬೀದಿಗೆ ಬೀ ಸಾ ಕಿ ನೊಣಕುಳಿತರೆಲ್ಲಿ ಆ ದೇಹಕ್ಕೆ ನೆರಳಾಗುವದೋ ಎಂದು ಅದೂ ಕೂಡದಂತೆ ದೂರೋಡಿಸುವ ನೀಚ ಪ್ರವೃತ್ತಿಯ ಕಠೋರ ವೃತ್ತಿಯ ಕಠಿಣ ಹೃದಯದ ರಾಕ್ಷಸಿ ವಿಚಾರ ಹೀನನು ಆತ...

ಆತನ ವಿಚಾರದಿಂದ ದೇಹ ಮಲಿನವಾಗುತ್ತದೆ. ಮಾನ ಮೈಲಿಗೆಯಾಗುತ್ತದೆ. ಸಾವಿರ ಭಗೀರಥರು ಲಕ್ಷವರ್ಷ ತಪಶ್ಚರ್ಯಮಾಡಿ ಕೋಟ್ಯಾವಧಿ ಗಂಗೆಯರನ್ನು ಭೂಮಿಗಿಳಿಸಿದರೂ ಆ ಪಾಪ ತೊಳೆಯದು. ಅದು ಅಂತಹ ಮಹಾಪಾಪ. ಭೀಕರ ಪಾಪ....

ಅವನು ಪಶ್ಚಾತ್ತಾಪದಿಂದ ದಗ್ಧನಾಗಿ ಅನ್ನ ನೀರು ತೊರೆದು ಯುಗ ಯುಗಗಳ ವರೆಗೆ ತಪಶ್ಚರ್ಯ ಮಾಡಿದನಂತರವೂ ಗಂಗಾಮಾತೆಯು ಹತ್ತಿರ ಬಂದರೆ ಅವಳು ಕೂಡ ಅದೃಶ್ಯಳಾಗಬಹುದು ಅಂತಹ ಪಾಪಿ ಆತ........

ಆತ ಮುಟ್ಟಿದ ದೇಹವನ್ನು ಸುಲಿದು ಹಾಕಬೇಕು. ಸುಟ್ಟು ಹಾಕಬೇಕು. ಆತ ತುಳಿದ ಭೂಮಿಕೂಡ ಮೈಲಿಗೆಯಾಗುತ್ತಿರುವಾಗ ದೇಹ ಮೈಲಿಗೆಯಾಗದೇ ಉಳಿದೀತೆ...?

ಈ ದೇಹವನ್ನು ಸುಟ್ಟು ಹಾಕಬೇಕು. ಈ ದೇಹ ಸ್ಪರ್ಶಮಾಡಿದವನನ್ನೇ ಸುಟ್ಟುಹಾಕಬೇಕು. ಆದರೆ ಈ ಸಾಧು ಕುಲಕರ್ಣಿಯವರು ಹೇಳುತ್ತಾರೆ—

"ಅವನನ್ನು ಕ್ಷಮಿಸಬೇಕು." ಎಂದು

ಈ ಸಾಧುಗಳು ಸಂಸಾರಮಾಡಲು ಯೋಗ್ಯರಲ್ಲ. ಈ ಸಂಸಾರದಲ್ಲಿ ಇರಲುಕೂಡ ಯೋಗ್ಯರಲ್ಲ. ಎಲ್ಲಿಯೋ ಅಡವಿಸೇರಿ ಬೂದಿಯಿಂದ ದೇಹ ಮುಚ್ಚಿಕೊಂಡು ಬಂದವರಿಗೆಲ್ಲ ಅವರು ಯಾರೆ ಇರಲಿ— ಅವರಿಗೆ ಹರಿಸುತ್ತ ಕೂಡುವದಕ್ಕೆ ಯೋಗ್ಯರು.

ಆದರೆ ನನಗಾಗಿ ಸಂಸಾರಕ್ಕಿಳಿಯಬೇಕಾಗಿದೆ. ನನ್ನಿಂದಾಗಿ ಸಂಸಾರಿಗಳಾಗಬೇಕಾಗಿದೆ. ಇದು ನೀನವರಿಗೆ ಮಾಡಿದ ಉಪಕಾರ.

ಆದಕ್ಕೆ ಅವರು ಹೇಳುತ್ತಾರೆ " ನಮಗೆ ಬೇಕಾಗಲಿ ಬೇಕಾಗದಿರಲಿ ಮಾಡುವದೆಲ್ಲವನ್ನೂ ಮಾಡಲೇಬೇಕು. ಗೃಹಸ್ಥಾಶ್ರಮವೇ ಬೇಡ ಎಂದು ಕಠೋರ ತಪದಲ್ಲಿ ಕುಳಿತ ಅಗಸ್ತ್ಯ ಮಹರ್ಷಿಗೆ ಗೃಹಸ್ಥಾಶ್ರಮಿಯಾಗದೆ ನಿನ್ನ ಉದ್ಧಾರವೇ ಇಲ್ಲ. ನಿನ್ನ ಪಿತೃಗಳ ಉದ್ಧಾರವೂ ಇಲ್ಲ " ಎಂದು ದೇವ ಹೇಳಿದಾಗ ಅವನು ಸಂಸಾರಿಯಾಗಬೇಕಾಯಿತು. ಗೃಹಸ್ಥಾಶ್ರಮವು ಕೆಟ್ಟದ್ದು ಅಲ್ಲ. ಕಾಮದ ಜೀವನಕ್ಕೆ ಗೃಹಸ್ಥಾಶ್ರಮವೆಂದರೆ ಅಥವಾ ಸಂಸಾರವೆಂದರೆ ಅದು ಕೇಡು. ತನ್ನ ಜೊತೆಗೆ ತನ್ನವರ ಉದ್ಧಾರ ಮಾಡುವದಕ್ಕೆ ಗೃಹಸ್ಥಾಶ್ರಮವೆಂದರೆ ಅದು ಸನ್ಯಾಸಕ್ಕಿಂತ ಹಿರಿದು...." ಎಂದು ಹೇಳಿ ಅಲ್ಲಿಯೂ ಭವ್ಯತೆಯನ್ನು ಪವಿತ್ರತೆಯನ್ನು ಉದಾತ್ತತೆಯನ್ನು ನಿಮಿಸುತ್ತಾರೆ.

ಅವರ ಪಾದಧೂಳಿ ಸ್ಪರ್ಗದಿಂದ ನರಕವು ಸ್ವರ್ಗವಾಗುತ್ತದೆ. ಪಾಪವು ಪುಣ್ಯವಾಗುತ್ತದೆ. ಪಾಪಿಯು ಉದ್ಧಾರವಾಗುತ್ತದೆ.

" ಪಾಪಿಗಳ ಉದ್ಧಾರಕ್ಕೆ ಪರಮಾತ್ಮ ಅವತರಿಸುತ್ತಾನೆ " ಎನ್ನುವದು ಅಸತ್ಯವಲ್ಲ. ಅವರ ಜನ್ಮ ಈ ಪಾಪಿಯ ಉದ್ಧಾರಕ್ಕಾಗಿಯೇ ಇದ್ದಿರಬಹುದು.

ಪಾಪಿಗಳ ಉದ್ಧಾರಕ್ಕಾಗಿ ಪರಮಾತ್ಮ ಅವತರಿಸುವದಕ್ಕಿಂತ ಪಾಪವೇ ಘಟಿಸದಂತೆ ಮಾಡಿದರೆ...? ಪರಮಾತ್ಮ ಸರ್ವಶಕ್ತ ಅಂದಮೇಲೆ ಇದು ಅವನಿಗೆ ಅಸಾಧ್ಯವೂ ಅಲ್ಲ.

ಉದ್ಧಾರದ ಅವಶ್ಯಕತೆ ಪಾಪಿಗೆ. ಜಗದಲ್ಲಿ ಪಾಪವೇ ಇಲ್ಲದಾದರೆ...? ಪಾಪವೇ ಇಲ್ಲದಾದಾಗ ಪಾಪಿಗಳಿಲ್ಲ. ಪಾಪಿಗಳಿಲ್ಲದಾದಾಗ ಉದ್ಧಾರದ ಮಾತೇ ಇಲ್ಲ. ಆಗ್ಗೆ—

ಆಗ್ಗೆ ಜಗ ನಂದನವನವಾಗುವದು. ಭೂಮಿಗೆ ಆಕಾಶವೇ ಇಳಿದು ಬರುವದು.

ಹಾಗಾಗಲಾರದೆ....?

ಹಾಗಾಗಬಾರದೇಕೆ....?

ಈ ಪ್ರಶ್ನೆಗೆ ಉತ್ತರ ಕೊಡುವವರಾರು...?

“ ಹಾಗಾಗಬೇಕೆಂಬ ವಿಚಾರ ಪ್ರತಿಯೊಬ್ಬರಲ್ಲಿ ಮೂಡಿದಾಗ ಹಾಗಾಗುವದು ಅಸಾಧ್ಯವಲ್ಲ...” ಎಂದು ಕುಲಕರ್ಣಿಯವರು ಹೇಳುತ್ತಾರಾದರೂ ಅದು ನನ್ನ ಪ್ರಶ್ನೆಗೆ ಉತ್ತರವೆಂದು ನನಗನ್ನಿಸುವದಿಲ್ಲ. ಏಕಂದರೆ ನಾನು ಕೇಳುವದು ಮನುಷ್ಯರಿಗಲ್ಲ.

“ ಎಲ್ಲವೂ ನನ್ನಿಂದ ” ಎನ್ನುವ ದೇವ ಪಾಪವೊಂದನ್ನು ಈ ಜಗದಿಂದ ತೆಗೆದು ಹಾಕಿಬಿಟ್ಟರೆ ಎಲ್ಲ ಕಾರ್ಯವೂ ಸುಗಮವಾಗುವದು. ಆಗ್ಗೆ ‘ ಒಳ್ಳೆಯದಾಗಬೇಕು ’ ಎನ್ನುವ ವಿಚಾರ ಯಾರಲ್ಲಿಯೂ ಬರುವದೇ ಇಲ್ಲ. ಏಕಂದರೆ ‘ ಕೆಡಕು ’ ಎನ್ನುವದೇ ಜಗದಲ್ಲಿ ಉಳಿದಿರುವದಿಲ್ಲ. ಕೆಡಕು ಇಲ್ಲದಿರುವದೇ ಪಾಪಿಗಳಿಲ್ಲದಿರುವದರ ಹೆಗ್ಗುರುತಲ್ಲವೆ...?

ಆದರೆ ಇದು ಸಾಧ್ಯವಿಲ್ಲ. ಏಕೆಂದರೆ ದೇವನಿಗೆ ಪ್ರಾಣಿಗಳ ಹಿಂಸೆಯಲ್ಲಿಯೇ ಸುಖವೆನಿಸುತ್ತಿರಬಹುದು. ನನ್ನಂತಹ ಅಸಂಖ್ಯಾತ ಜನ ಮರಗುವದೇ ಅವನಿಗೆ ಪ್ರೀಯವಾಗಿರಬಹುದು.

ಕುಲಕರ್ಣಿಯವರು ಹೇಳುವದು “ ಇದೆಲ್ಲ ಮಾಯೆ...ದೇವನ ರಾಜ್ಯದಲ್ಲಿ ಪಾಪವೇ ಇಲ್ಲ. ಅಂತೆಯೇ ಪುಣ್ಯವೂ ಇಲ್ಲ. ಮರಗುವದು ಕೊರಗುವದು ಎಲ್ಲವೂ ಮಾಯೆ. ಆ ಮಾಯೆಯ ಆವರಣದಿಂದ ಹೊರ ಬರಬೇಕು. ಹೊರಬಂದವರಿಗೆ ಯಾವ ಕೆಡಕೂ ಇಲ್ಲ. ಯಾರೂ ಕೆಡಕು ಕಾಣಿಸುವದಿಲ್ಲ. ಮಾಯೆ ಮುಕ್ತನಿಗೆ ಎಲ್ಲರೂ ಸಜ್ಜನರು...” ಎಂದು.

ಇದರಿಂದ ಅವರಿಗೆ ಸಮಾಧಾನವೆನಿಸುತ್ತಿದ್ದರೂ ನನ್ನಂತಹ ಸಾಮಾನ್ಯ ವ್ಯಕ್ತಿಗೆ ಸಮಾಧಾನವೆನ್ನಿಸದು. ಅಂತೆಯೇ ನಮ್ಮಂತಹರಿಗೆ ದೇವರಲ್ಲಿ ಸಧಾ ಸಂಶಯ. ಕಷ್ಟಗಳು ಸುತ್ತುವರಿದು ಮುತ್ತಿ ಘಾಸಿಗೊಳಿಸುತ್ತಿರುವಾಗ ' ಯಾರೂ ಇಲ್ಲ ' ಎಂದು ದೇವನಿಗೆ ಮೊರೆಯಿಡುತ್ತಿರುವೆವಾದರೂ ಅಂತ ರಿಕವಾದ ಸಂಶಯವಿದ್ದೇ ಇರುತ್ತದೆ. " ಇರುವನೆ....? ಬರಬಹುದೇ....?" ಎಂದು.

ಅದಕ್ಕೆ ಕುಲಕರ್ಣಿಯವರು ಹೇಳುತ್ತಾರೆ " ಮೊದಲು ನಾವು ಮಾಡ ಬೇಕಾದುದು ನಂಬುವದು. ಸಂಪೂರ್ಣವಾಗಿ ನಂಬುವದು. ಅಚಲವಿಶ್ವಾಸ ವಿಡುವದು. ನಮ್ಮ ನಖಶಿಖಾಂತಗಳಲ್ಲಿ ಎಲ್ಲಿಯೂ ಅವಿಶ್ವಾಸದ ಅಣುವು ಕೂಡ ಸುಳಿಯದಿರುವದು. ಅದು ನಮ್ಮ ಕಾರ್ಯ. ಅದು ನಮ್ಮ ಕರ್ತವ್ಯ. ಆ ನಮ್ಮ ಕರ್ತವ್ಯವನ್ನು ನಾವು ಪಾರುಗಾಣಿಸಿದಾಗ ದೇವ ತನ್ನ ಕರ್ತವ್ಯ ಕ್ಕಾಗಿ ಸಿದ್ಧನಾಗುತ್ತಾನೆ. ತನ್ನ ಕರ್ತವ್ಯ ತಾನು ಪಾರುಗಾಣಿಸುತ್ತಾನೆ. ಇದರಲ್ಲಿ ಸಂಶಯವಿಲ್ಲ. ಸಂಶಯವಿರಕೂಡದು " ಎಂದು.

" ದೇವನು ರಕ್ಷಿಸುತ್ತಾನೆ ' ಎಂಬ ವಿಶ್ವಾಸ ನಮ್ಮಲ್ಲಿರಬೇಕು. ಆ ವಿಶ್ವಾ ಸವೇ ಪ್ರಲ್ಹಾದನನ್ನು ರಕ್ಷಿಸಿತು. ಅಂತಹ ವಿಶ್ವಾಸ ನಮ್ಮಲ್ಲಿದೆಯೆ...? "

" ಸುಮಿತ್ರಾ....ನಾವು ಮೊದಲು ನಮ್ಮನ್ನು ಕುರಿತು ವಿಚಾರ ಮಾಡಿ ಕೊಂಡಿಲ್ಲ. ' ನಾವು ಏನಿರುವೆವು ' ಎನ್ನುವ ವಿಚಾರ ನಾವು ಮಾಡಿಕೊಳ್ಳ ಬೇಡವೆ...? ನಮ್ಮ ಜೀವನದ ಅಂತರಂಗದ ಮೂಲೆ ಮೂಲೆಯಲ್ಲಿ ಸೇರಿ ನಮ್ಮಲ್ಲಿರುವದೇನು ಎನ್ನುವದನ್ನು ಅರಿತುಕೊಳ್ಳಬೇಕು. ಕೆಡಕು ಕೊಳಕು ತನಗಳಿದ್ದರೆ ಅವನ್ನು ಹೊರದೂಡಬೇಕು. ಸದ್ಬುದ್ಧಿ ಸದ್ಗುಣಗಳಿ ದ್ದರೆ ಅವು ಕೆಡದಂತೆ ಜೋಪಾನ ಮಾಡಿಮಾಡಿಕೊಳ್ಳಬೇಕು........ಅಂತಹ ದನ್ನು ನಾವು ಮಾಡುತ್ತಿರುವೆವೆ...? ಕೊಳಕು ಕೈಯಿಂದ ಶುದ್ಧ ಬಟ್ಟೆ ಯನ್ನು ಮುಟ್ಟಬಹುದೆ...? ಮುಟ್ಟಿದರೆ ಮಾಸದೇ ಇದ್ದೀತೆ....? ಮುಟ್ಟಿ ಮಾಸಿದಾಗ ಅದರ ತಪ್ಪನ್ನು ಇನ್ನೊಬ್ಬರಮೇಲೆ ಹೊರಿಸಬಹುದೆ.......? ಶುದ್ಧತೆಗೆ ತಾಕಿದ ಕೊಳಕಿಗೆ ಕಾರಣರಾರು.......? ಹೊಣೆಯಾರು....?

" ಪರಮಾತ್ಮನ ವಿಷಯ ಕೂಡ ಹಾಗೆಯೇ. ಪರಮಾತ್ಮನೆಂದರೆ ಶುದ್ಧ ಶುಭ್ರ ಬಟ್ಟೆ. ನಾವು ಕೊಳಚೆ ಕೈಯಿಂದ ಮುಟ್ಟಿದರೆ ಕೊಳಚೆಯಾಗುತ್ತಿದೆ.

ಶುದ್ಧ ಹಸ್ತದಿಂದ ಹಿಡಿದರೆ ಆದರ ಶುದ್ಧತೆಗೆ ಶುಭ್ರತೆಗೆ ಬಾಧೆ ಬರುವದಿಲ್ಲ."

"ಪರಮಾತ್ಮ ಕನ್ನಡಿಯಂತೆ. ಯಾರಿಗೆ ಯಾವ ಮುಖವಿದೆಯೋ ಅದೇ ಮುಖ ಕನ್ನಡಿಯಲ್ಲಿ ಕಾಣುವದಿಲ್ಲವೆ...? ನಾವು ಸಂಶಯದಿಂದ ಪರಮಾತ್ಮನನ್ನು ನೋಡಿದರೆ ಆತನೂ ಸಂಶಯವಾಗಿಯೇ ಕಾಣುತ್ತಾನೆ........ ನಾವು ಪಾಪಿಗಳಾಗಿ ಅವನನ್ನು ನೋಡಿದರೆ ಪಾಪಿಯೇ ಕಾಣುತ್ತಾನೆ ನಾವು ಪಕ್ಷಪಾತಿಯಾಗಿ ನೋಡಿದರೆ ಆತನೂ ಪಕ್ಷಪಾತಿಯಾಗಿ ಕಾಣುತ್ತಾನೆ...."

"ಪಾಪವನ್ನು ದೇವ ನಿರ್ಮಿಸಿದನೇಕೆ...? ' ಎಂದು ಕೇಳುವದಕ್ಕಿಂತ 'ನಾನು ಪಾಪಿಯಾದೆನೇಕೆ ? ' ನಾನು ಪಾಪವನ್ನು ಆಚರಿಸಿದೆನೇಕೆ...? ' ಎಂದು ಕೇಳಿಕೊಂಡರೆ....? ವಿಚಾರವೇ ನಮ್ಮಲ್ಲಿ ಮೂಡುವದಿಲ್ಲ. ಅಂತೆಯೇ ನಾವು ಇನ್ನೊಬ್ಬರಿಗೆ ಹೆಸರಿಡುತ್ತೇವೆ. ದೇವರಿಗೆ ಹೆಸರಿಡುತ್ತೇವೆ . ... ಸುಮಿತ್ರಾ....ನಾನು ಒಳ್ಳೆಯವನಿದ್ದರೆ ನನ್ನಲ್ಲಿ ಕೆಡಕು ವಿಚಾರವೇ ಬಾರದಿದ್ದರೆ ಇನ್ನೊಬ್ಬರ ಕೆಡಕು ನನಗೆ ಅರಿವಾಗುವದಾದರೂ ಹೇಗೆ........? "

"ನನ್ನಲ್ಲಿ ಕೆಡಕಿದೆ. ಅಂತೆಯೇ ಇನ್ನೊಬ್ಬರಲ್ಲಿ ಇಲ್ಲದಿದ್ದರೂ ಕೆಡಕಿನ ಬುದ್ಧಿ ಮೂಡುತ್ತದೆ. ಆದಕ್ಕೆ ಕಾರಣ ಭೀತಿ. "

"ಭೀತಿಯೇ ಸರ್ವ ಕೆಡಕಿನ ಮೂಲ. ಸರ್ವ ಪಾಪದ ಬೀಜ. ಸರ್ವ ಅನಾಹುತದ ಆದಿ. "

"ಎಲ್ಲಿಯವರೆಗೆ ಹೆದರಿಕೆ ಮನದಲ್ಲಿ ಮೂಡಿದ್ದಿಲ್ಲವೋ ಅಲ್ಲಿಯ ವರೆಗೆ ಮನುಷ್ಯನ ಬಾಳು ಸುಖಮಯವಾಗಿತ್ತು. ಹೆದರಿಕೆ ಮೂಡಿದಾಗ ತಾನು ಸುರಕ್ಷಿತನಾಗಬೇಕೆಂಬ ಆಕಾಂಕ್ಷೆ, ಆಶೆ ಹುಟ್ಟಿತು. ಹೆದರಿಕೆಯಿಂದ ಹುಟ್ಟಿದ ಸುರಕ್ಷಿತನಾಗಬೇಕೆಂಬ ಆಶೆ ಸ್ವಾರ್ಥದಲ್ಲಿ ಮುಂದುವರೆದು' ಕೆಡಕಿನ ರಾಜ ಮಾರ್ಗವನ್ನು ನಿರ್ಮಿಸಿದೆ...."

ಇದು ಯಾರ ತಪ್ಪು......? ಈ ತಪ್ಪಿಗೆ ಹೊಣೆ ಯಾರು...?

"ನಾನು... ನೀವು... ನನ್ನ ನಿಮ್ಮಂತಹರು ಅಲ್ಲದೆ ದೇವರಲ್ಲ.

"...ನಾನು ಪಾಪವನ್ನು ಆಚರಿಸಿದ್ದೇನೆ" ಎಂದು ಪ್ರತಿವ್ಯಕ್ತಿಗೂ ಅನ್ನಿಸುತ್ತದೆ. ಹಾಗೆ ಅನ್ನಿಸುವದೆಂದರೇನೇ— 'ತಾನು ಮಾಡಬಾರದ ಕಾರ್ಯ

ವನ್ನು ಮಾಡಿರುವೆ' ಎಂದ ಹಾಗೆ...ಅಲ್ಲವೆ....?...ಮಾಡಬಾರದ ಕೆಲಸ ವನ್ನು ಮಾಡಿರುವೆ ಎಂದು ಪಶ್ಚಾತ್ತಾಪಪಡುವ ವ್ಯಕ್ತಿ ಮೂಲತಹ ಪಾಪಿ ಹೇಗೆ....?"

"ಸಮಾಜದ ಸ್ವಾರ್ಥದ ಘರ್ಷಣೆಯಲ್ಲಿ ನಾವು ಮೂಲವನ್ನೇ ಮರೆತಿ ರುವೆವು. ಸ್ವಾರ್ಥದ ಮಾಯಾಸುರನಿಂದ ಆಗಸದಲ್ಲಿ ನಿರ್ಮಿತವಾದ ಮಾಯೆಯ ನೆಲಕ್ಕೆ ಪೃಥ್ವಿ ಎಂದು ಅಲ್ಲಿಯೇ ತಿರುಗಾಡಲು ಯತ್ನಿಸಿ ದುರ್ಯೋಧನನ ಅವಸ್ಥೆಗೆ ಗುರಿಯಾಗುವೆವು...."

"ಮೊದಲು ಮಾಯೆಯಿಂದ ಮುಕ್ತರಾಗಬೇಕು. ಇದು ಕಠಿಣ ಕೆಲಸ ವೆನ್ನಿಸಿದರೆ– ಒಂದೇ ಒಂದು ಉಳಿದ ದಾರಿ. ಅದೆಂದರೆ...."

"ಅಚಲ ವಿಶ್ವಾಸ....ಪರಮಾತ್ಮನಲ್ಲಿ ಅಚಲ ವಿಶ್ವಾಸ. ನಂಬಿಗೆ... ಅವನನ್ನು ನಂಬುವದು"

"ನಂಬಿದವರ ಕೈ ಆತ ಎಂದಿಗೂ ಬಿಡನು. ಏಕೆಂದರೆ....ಬಿಡುವಧಾ ರನ್ನು....? ಅಚಲ ವಿಶ್ವಾಸ ಹೃದಯದಲ್ಲಿ ತುಂಬಿದಾಗ ಅಲ್ಲಿ ವಾಸಿಸುವವ ಅವ, ಪರಮಾತ್ಮ..."

"ಅಂದ ಮೇಲೆ....ಬಿಡುವದಾರನ್ನು....? ಬಿಡುವವರಾರು...?"

ಎಂದೆಲ್ಲ ಕುಲಕರ್ಣಿಯವರು ಹೇಳುತ್ತಿದ್ದಾಗ ನಾನು ಮಂಕು ಹಿಡಿದ ವರಂತೆ ಕುಳಿತಿರುತ್ತೇನೆ. ಅವರು ಸರಳ ಮಾತುಗಳಲ್ಲಿ ತಿಳಿಹಿಸಲು ಪ್ರಯ ತ್ನಪಡುತ್ತಾರೆ. ಆದರೆ ಆ ಲೋಕದ ವಿಚಾರ ಈ ಲೋಕದ ಅಡಿಯಲ್ಲಿ ಅಡಗಿದ ನನಗೆ ಕೇಳಿಸುವದಾದರೂ ಹೇಗೆ ... ?

ನನಗೂ ಆ ವಿಷಯದ ತಿಳುವಳಿಕೆಯುಂಟಾದರೆ....?

ಕುಲಕರ್ಣಿಯವರು "ಈ ವಿಷಯದ ತಿಳುವಳಿಕೆ ಇರುವದಿಲ್ಲ" ಎಂದು ಹೇಳುತ್ತಾರೆ.

"ಏಕೆಂದರೆ" ಹೇಳುವದರಿಂಜ ಗೊತ್ತಾಗುವದು ಬರಿ ಪುಸ್ತಕ ಜ್ಞಾನ ವಂತೆ. ಜಪತಪದಿಂದ ಪರಮಾತ್ಮನು ಪ್ರತ್ಯಕ್ಷನಾಗುತ್ತಾನೆ ಎನ್ನುವದು ಯಾರಿಗೆ ಅರಿಯದ್ದು...? ಆದರೆ ಹಾಗೆ ಅರಿತವರಿಗೆಲ್ಲರಿಗೂ ಪರಮಾತ್ಮ ಸಿಕ್ಕಿರುವನೆ....? ಎಂದು ಕೇಳುತ್ತಾರೆ.

ಅದಕ್ಕೆ ಉತ್ತರ ನನ್ನಿಂದ ಸಿಗುವದು ಸಾಧ್ಯವೆ...?

ಏನನ್ನೂ ಅರಿಯದ ಹುಚ್ಚಿನಾನು. ತಂದೆಯ ಮನೆಯಲ್ಲಿ ಹೇಗೋ ಏನೋ ಮಾಡಿ ಕನ್ನಡ ಶಾಲೆಯನ್ನು ಮುಗಿಸಿದ್ದೆ. ಅಂದು ನಾನು ದೊರಕಿಸಿದ "ಮುಲಕೀಪರೀಕ್ಷೆಯ ಸರ್ಟಿಫಿಕೇಟ" ನನಗೆ ದೊಡ್ಡ ಬಹುಮಾನವಾಗಿತ್ತು. ಆದರೆ ಅದೆಂದರೆ ಏನೂ ಅಲ್ಲವೆನ್ನುವದರ ಅರಿವು ಈಗಾಗತೊಡಗಿದೆ.

ಏನು ನನ್ನ ಜ್ಞಾನ...? ಅದರಿಂದ ಉಪಯೋಗವಾದರೂ ಏನು....? ನಾಲ್ಕು ಅಕ್ಷರ ಕೂಡ ಸರಿಯಾಗಿ ಓದಲುಬಾರದುನಾನು ಕಲಿತದ್ದರಿಂದ.... ನನ್ನಂತಹಳಿಂದ ಕುಲಕರ್ಣಿಯವರ ಪ್ರಶ್ನೆಗೆ ಉತ್ತರ ಕೊಡಲು ಹೇಗೆ ಸಾಧ್ಯ...?

ಅವರು ಎಲ್ಲಿ....? ಅವರೆದುರು ನಾನು– ಹಿಮಾಚಲದೆದುರು ಕಂದರದಲ್ಲಿ ಉರುಳಿದ ಹಿಮದ ತುಣುಕು .. ಅವರು ಅಕ್ಷಯಪಾತ್ರೆ.......ನಾನು ಆಧಾರ ತಪ್ಪಿ ಕೆಳಕ್ಕುರುಳಿದ ಒಂದು ಅನ್ನದ ಅಗಳು.

ಆದರೂ ಅವರು ನನ್ನನ್ನು ಕ್ಷುಲ್ಲಕಳೆಂದೆಣಿಸಲಿಲ್ಲ...ಕೀಳಾಗಿ ....... ಬಾಳಲು ಜಾಗೆಯಿಲ್ಲದವಳಾಗಿ, ಬದುಕಿಸಲಿಚ್ಛಿಸಿದವರನ್ನು ತಿನ್ನುವ ರಾಕ್ಷಸಿಯಾದಾಗಲೂ ಕೂಡ ಅವರು ನನ್ನನ್ನು ಕೀಳೆಂದು ಭಾವಿಸಲಿಲ್ಲ. 'ಹಾಳು' ಎಂದು ಕೀಳುಗಳೆಯಲಿಲ್ಲ 'ಬೆನ್ನಿಗೆ ಬಿದ್ದ ಕರ್ಮ' ಎಂದು ತುಚ್ಛ ಮಾಡಲಿಲ್ಲ. ಯಾವ ರೀತಿಯಿಂದಲೂ ಉದಾಸೀನತೆ ತೋರಿಸಲಿಲ್ಲ. ಎಂದಿನದೇ ಮಂದಹಾಸ್ಯ. ಎಂದಿನದೇ ಗಂಭೀರತೆ, ಅದೇ ವಿನಯ, ಅದೇ ನಯ.... ಅದೇ ಅಭಯ ಪ್ರದಾನದ ಕಂಗಳು. ಅದೇ ಉದಾರತೆಯ ಅಕ್ಷಯಪಾತ್ರೆಯಾದ ಹೃದಯ. ಅದೇ ಸೌಜನ್ಯಶೀಲತೆ... .... ಎಷ್ಟೆಂದು ಹೇಳಲಿ ..? ಏನೆಂದು ಹೇಳಲಿ....? ಅವರಿಗಾಗಿ ಏನೊಂದನ್ನು ಹೇಳುವದೂ ಸಮುದ್ರದ ನೀರನ್ನು ಅಳೆಯಲು ಹೊರಟಂತೆ....

ಅವರೇ ಹೇಳಿದರು "ನಾನು ನಿಮ್ಮ ಜೊತೆಗೆ ವಿವಾಹಮಾಡಿಕೊಳ್ಳುವೆ." ಎಂದು.

ನನಗೆ ಬೇಕಿದ್ದುದನ್ನು ಅವರೇ ಬಂದು ಹೇಳಿದರು. ಆದರೂ ಅವರು ಕೇಳಿದ್ದರು—

" ಈ ಮಾತು ನಿಮಗೆ ಒಪ್ಪಿಗೆಯೇ ?" ಎಂದು.

ಪರಮಾತ್ಮನಿಗಾಗಿ ತಪಶ್ಚರ್ಯ ಮಾಡುವಾಗ ಪರಮಾತ್ಮನೇ ಬಂದು 'ನಿನಗೆ ಬೇಕಾದವನು ಪರಮಾತ್ಮನೇ....?' ಎಂದು ಕೇಳಿದರೆ ಭಕ್ತ ಉತ್ತರಿಸುವದಾದರೂ ಏನು.... ?

'ಬೇಕು' 'ಬೇಡ' ಗಳ ಪ್ರಶ್ನೆಯಂತೂ ಇದ್ದಿರಲೇಇಲ್ಲ. ನನ್ನ ಮನದಲ್ಲಿ ಸಿಡಿದೇಳುವ ಪ್ರಶ್ನೆ ಇದ್ದುದಾದರೆ ಅದು. 'ಎಂದು ?' 'ಇನ್ನೂ ಏಕೆ ವೇಳೆ' ಎನ್ನುವದಲ್ಲದೆ ಬೇರಾವುದೂ ಅಲ್ಲ.

ಹಾಗೆಂದು ಕೇಳಿದ ಕುಲಕರ್ಣಿಯವರಿಗೆ ನಾನು ಯಾವ ಉತ್ತರವನ್ನೂ ಕೊಟ್ಟಿರಲಿಲ್ಲ. ಉತ್ತರ ಕೊಡುವಂತಹದಾದರೂ ಪ್ರಶ್ನೆ ಇತ್ತೆಲ್ಲಿ ? ದೇವರ ನ್ಯಾಯಾಲಯದಲ್ಲಿ ಪ್ರಶ್ನೋತ್ತರಗಳಿಗೆ ಸ್ಥಾನವೆಲ್ಲಿ ? ತಾನು ಕೇಳಬಹುದಾದ ಪ್ರಶ್ನೆಗೆ ಕೊಡುವ ಉತ್ತರವೂ ಗೊತ್ತಿರುವದು. ಏಕೆಂದರೆ ಕೇಳುವವ ಸರ್ವಾಂತರ್ಯಾಮಿ.

ಕುಲಕರ್ಣಿಯವರಿಗೂ ಕೂಡ ಉತ್ತರ ಗೊತ್ತಿದೆ ಉತ್ತರ ಗೊತ್ತಿರದಿದ್ದರೆ ಅವರಲ್ಲಿ ಪ್ರಶ್ನೆಯೇ ಉದ್ಭವಿಸುತ್ತಿರಲಿಲ್ಲ. ಆಜನ್ಮ ಅವಿವಾಹಿತರಾಗಿರಬೇಕೆಂಬ ನಿಶ್ಚಯವನ್ನು ಅವರು ಮುರಿದರು ನನಗಾಗಿ. ಇದುವೇ ಉತ್ತರ ಗೊತ್ತಿದ್ದುದರ ಪ್ರತೀಕವಲ್ಲವೇ.... ?

ಜನದಿಂದ ಕಿಕ್ಕಿರಿದು ತುಂಬಿದ ವಿಸ್ತಾರವಾದ ಜಗದಲ್ಲಿ ನನ್ನೊಬ್ಬಳಿಗೆ ತಮ್ಮನ್ನು ಬಿಟ್ಟರೆ ಅನ್ಯ ಸುರಕ್ಷಿತ ಸ್ಥಾನವಿಲ್ಲ ಎನ್ನುವದನ್ನು ಅವರು ಅರಿತಿದ್ದಾರೆ. ಆದರ ಅರಿವನ್ನು ಕಾಮಿನಿಯೂ ಕೂಡ ಅವರಿಗೆ ಮಾಡಿಕೊಟ್ಟಿದ್ದಾಳೆ.

ಅಹುದು ಕಾಮಿನಿ ಅವರಿಗೆ ಹೇಳಿದ್ದಾಳೆ. ಕೇಳಿದ್ದಾಳೆ. ಒಪ್ಪುವದಕ್ಕೆ ಒತ್ತಾಯ ಮಾಡಿದ್ದಾಳೆ. ಅವಳೇ ಹೇಳಿದಳಲ್ಲವೇ ?

" 'ನಿನ್ನ ಜೊತೆಗೆ ವಿವಾಹ ಮಾಡಿಕೊಳ್ಳುವೆ' ಎಂದು ಹೇಳಿದವರಿಗೆ ನಿನ್ನ ಪರವಾಗಿ ಒಪ್ಪಿಗೆ ಕೊಟ್ಟಿರುವೆ " ಎಂದು.

ಈ ಪ್ರಶ್ನೆಯನ್ನು ಕುಲಕರ್ಣಿಯವರು ಕಾಮಿನಿಯ ಎದುರು ಹೇಳಿರಬೇಕು. ಅಥವಾ ನಿಸ್ಪೃಹ ಕಾಮಿನಿ ನನ್ನ ಕಲ್ಯಾಣಕ್ಕಾಗಿ ಅವರೆದುರು ಈ ಮಾತನ್ನು ತೆಗೆದಿರಬೇಕು.

ಏನೇ ಆದರೂ ಪರಿಣಾಮ ಒಂದು.

" ನಿಮ್ಮ ಜೊತೆಗೆ ವಿವಾಹ ಮಾಡಿಕೊಳ್ಳುವೆ "

ಅಹುದು ನನ್ನ ಜೊತೆಗೆ ಅವರ ವಿವಾಹವಾಗಲೇಬೇಕು ಅದೊಂದೇ ನನಗುಳಿದ ದಾರಿ. ಅದಿಲ್ಲದಿದ್ದರೆ ಬದುಕುವದಕ್ಕೆ ಇನ್ನಾವ ದಾರಿಯೂ ಇಲ್ಲ.

ನಿಜಕ್ಕೂ ಇಲ್ಲ.

ಬೇರೆ ದಾರಿ ಇದ್ದುದಾದರೆ ಕುಲಕರ್ಣಿಯವರು " ನಿಮ್ಮ ಜೊತೆಗೆ ವಿವಾಹ ಮಾಡಿಕೊಳ್ಳುವೆ" ಎಂದು ಹೇಳುತ್ತಿರಲಿಲ್ಲ. ಹಾಗೆ ಹೇಳಿಸಿಕೊಳ್ಳು ವದಕ್ಕೆ ನಾನವರ ಹತ್ತಿರ ಬರುತ್ತಿರಲಿಲ್ಲ.

ನಾನವರ ಹತ್ತಿರ ಬಂದುದೇಕೆ...?

ಮತ್ತೆ ಅದೇಅದೇ ಹಳೆಯ ಪ್ರಶ್ನೆ. ಅದಕ್ಕೆ ಉತ್ತರ ಅದೇಹಳೆಯದೇ....

ಅದು ಮಾಸಿದೆ. ಹೊಲಸಾಗಿದೆ. ಹರಕಾಗಿದೆ. ಬೀಸಾಕಲು ಯೋಗ್ಯವಾಗಿದೆ. ಏಕೆಂದರೆ ಹೊಸದೊಂದು ದೊರಕಿದೆ.

ಹೊಸದಿಲ್ಲದಾಗ ಹಳೆಯದನ್ನು— ಬೇಕಾಗಲಿ ಬೇಡವಾಗಲಿ— ಅವಲಂಬಿಸಲೇಬೇಕು. ಹೊಸದು ದೊರಕಿದಾಗ ಹಳೆಯದನ್ನು ಜತನದಿಂದ ಕಾಯ್ದಿರಿಸುವದು ಹುಚ್ಚುತನವಲ್ಲ, ಮೂರ್ಖತನ. ಹಳೆಯದರಿಂದ ಹೊಲಸು ಬೆಳೆಯುತ್ತದಲ್ಲದೇ ಇನ್ನಾವುದೂ ಉಪಯೋಗವಿಲ್ಲ.

ಹೊಸದು ದೊರಕಿದೆ. ಅಮೌಲ್ಯವಾದ, ಸರ್ವರಿಗೂ ಅಲಭ್ಯವಾದ ಸರ್ವರ ಕಣ್ಣು ಕುಕ್ಕಿಸುವಂತಹ ದೇದೀಪ್ಯಮಾನವಾದುದು ದೊರಕಿದೆ.

" ನಿಮ್ಮ ಜೊತೆಗೆ ವಿವಾಹ ಮಾಡಿಕೊಳ್ಳುವೆ "

ಅಮೃತ- ಮೃತಳಾಗಿ ಮರುಭೂಮಿಯಲ್ಲಿ ಬೇಸಗೆಯ ಮಧ್ಯಾಹ್ನದ ಉರಿಬಿಸಿಲಲ್ಲಿ ಬಿದ್ದವಳಿಗೆ ಅಮೃತವರ್ಷ... ಸಾವಿನ ಚಕ್ರತೀರ್ಥದಲ್ಲಿ ತಿರು ಗುತ್ತ ವೇಗದಿಂದ ಮಧ್ಯಬಿಂದುವಿನತ್ತ ಸಾಗಿದಾಗ ಧಾವಿಸಿ ಬಂದು ನೇರ ವಾಗಿ ಎತ್ತಿ ತಂದ ಅಮೃತಹಸ್ತ. .... ಕ್ರೂರ ಮೊಸಳೆಯ ಭಯಂಕರ ದವಡೆ ಯಲ್ಲಿ ಸಿಕ್ಕು ಮೃತ್ಯುವಿನ ಮುಖದಲ್ಲಿ ಪ್ರವೇಶಿಸತೊಡಗಿದ ಗಜೇಂದ್ರನನ್ನು ಮುಕ್ತಿ ಮಾಡಿದ 'ಸುದರ್ಶನ' ರೂಪದಲ್ಲಿಯ ಅಮೃತ.

“ ನಿಮ್ಮ ಜೊತೆಗೆ ವಿವಾಹ ಮಾಡಿಕೊಳ್ಳುವೆ ”

“ ನಿಮ್ಮ ಜೊತೆಗೆ ವಿವಾಹ ಮಾಡಿಕೊಳ್ಳುವೆ ”

ಹೃದಯ ತುಂಬಿದ ಆನಂದ ಹೃದಯ ಬಿರಿಯುವಂತೆ ನುಗ್ಗುತ್ತಿತ್ತು. ತುಂಬಿ ಹರಿಯುವ ನೆರೆ ಸಿಕ್ಕವರನ್ನು ಕೊಚ್ಚಿಕೊಂಡು ಹೋಗುವ ತೆರದಲ್ಲಿ ಧಾವಿಸುತ್ತಿತ್ತು. ನನ್ನನ್ನು ಎಳೆದುಕೊಂಡು ಧಾವಿಸುತ್ತಿತ್ತು. ಗೊತ್ತಿಲ್ಲದೆ.... ಗುರಿಯಿಲ್ಲದೆ.... ಎಲ್ಲಿಗೋ....

## ೪

ಹೃದಯ ಬಿರಿಯುವಂತೆ ನುಗ್ಗುತ್ತಿದ್ದ ಆನಂದ ಆಗಸದಲ್ಲಿ ಲೀನವಾಯಿತು.

ಸಿಕ್ಕದ್ದನ್ನು ಕೊಚ್ಚಿಕೊಂಡು ಧಾವಿಸುವ ನೆರೆ ಸಾಗರದಲ್ಲಿ ಸೇರಿ ಶಾಂತವಾಯಿತು.

ನಾನು ನದಿಯ ನೆರೆಯಿಂದ ಸಾಗರ ಸೇರಿದೆ.

“ ನಿಮ್ಮ ಜೊತೆಗೆ ವಿವಾಹ ಮಾಡಿಕೊಳ್ಳುವೆ....”

ಅಮೃತ ವಚನಗಳು.

ವಚನಗಳಾಗಿ ಉಳಿದವು. ಅಮೃತವಾಗಲಿಲ್ಲ. ಅಮೃತವಾಗಿ ನನ್ನ ಮೃತದೇಹವನ್ನು ಸಜೀವಗೊಳಿಸಲಿಲ್ಲ.

“ ನಿಮ್ಮ ಜೊತೆಗೆ.... ವಿವಾಹ.... ಮಾಡಿ.... ಕೊಳ್ಳುವೆ....”

ಸುಂದರ ಚಿಕ್ಕ ಸಂಸಾರದಂತೆ ಶಬ್ದಗಳು ಒಂದಕ್ಕೊಂದು ಹೊಂದಿಕೊಂಡು, ಕೂಡಿಕೊಂಡು ಒಂದಾಗಿದ್ದ ವಾಕ್ಯ. ವಿಷ ವಿಚಾರದಿಂದ, ವಿಷ ಗಾಳಿಯಿಂದ ಒಡೆದು ಹೋಗುವ ಚಿಕ್ಕ ಸಂಸಾರದಂತೆ ಬೇರೆ ಬೇರೆಯಾಯಿತು. ಶಬ್ದಗಳಲ್ಲಿಯ ಅಕ್ಷರಗಳು ಬೇರೆ ಬೇರೆಯಾದವು.

ವಾಕ್ಯಕ್ಕಿದ್ದ ಅರ್ಥ ಶಬ್ದಕ್ಕಿಲ್ಲ.

ಶಬ್ದಕ್ಕಿದ್ದ ಅರ್ಥ ಅಕ್ಷರಕ್ಕಿಲ್ಲ.

ಅರ್ಥವಿಹೀನ ಅಕ್ಷರಗಳು....

ಅಕ್ಷರಗಳು....

ಅಕ್ಷರಗಳು ಕೂಡಿ ಶಬ್ದವಾಗಿ, ಶಬ್ದವು ಸೇರಿಕೊಂಡು ವಾಕ್ಯವಾಗಿ, ವಿಚಾರವಾಗಿ ಕೃತಿಯಾಗಿದ್ದರೆ....? ಪ್ರತ್ಯಕ್ಷವಾಗಿದ್ದರೆ....?

ಆಗಿದ್ದರೆ .... ?

ಕನಸು ನನಸಾಗಿದ್ದರೆ ...? ಆದರೆ ಆಗಲು ಸಾಧ್ಯವೇ....? ಮುರುಕು ಗುಡಿಸಲಿನ ಮೂಲೆಯಲ್ಲಿ ಕಣ್ಣು ಮುಚ್ಚಿ ಕತ್ತಲೆಯಲ್ಲಿ ಮಲಗಿದಾಗ ಕಾಣುವ ರಾಜಮಹಲು ದೊರೆತರೆ? ಎಂದು ಆಸೆ ಮಾಡುವದು ಮೂರ್ಖತನವಲ್ಲವೆ?

ಹಾಳಾದ ಹೆಣ್ಣು ಹಾದಿಗೆ ಹತ್ತುವದು, ಕನಸು ನನಸಾಗುವದು ಎಲ್ಲವೂ ಒಂದೆ.

ಎಂತಹ ಕಾಲದಲ್ಲಿ ಕೂಡ ಧೈರ್ಯ ಕೊಡುವ ಕಾಮಿನಿ ಕೂಡ—

" ಸುಮಿತ್ರಾ ನೀನು ದುರ್ದೈವಿ " ಎಂದಳು.

" ಯಾರಿಗೂ ಯಾವ ಜನ್ಮದಲ್ಲಿಯೂ ದೊರೆಯದಂತಹ ವ್ಯಕ್ತಿ ಪತಿಯಾಗಿ ನಿನಗೆ ದೊರಕಿದ ಎನ್ನುವ ಹೆಮ್ಮೆಗಿಂತ, ನನಗೆ ಅಂತಹ ಪತಿ ಸಿಗಲಿಲ್ಲ ಎನ್ನುವ ವೈಷಮ್ಯ ನನ್ನಲ್ಲಿತ್ತು..... ಆದರೆ....? " ಎಂದು ತುಟಿ ಕಡಿಯುತ್ತಾಳೆ ಮೇಲಿನ ಹಲ್ಲಿನಿಂದ ಆಕಾಶ ಹರಿದು ಬಿದ್ದಾಗ ಪೃಥ್ವಿಯನ್ನು ಕುಪ್ಪಳಿಸುವಂತೆ.

ಮತ್ತೆ ಅವಳೇ ಧೈರ್ಯ ಹೇಳುತ್ತಾಳೆ—

" ಸುಮಿತ್ರಾ ಎದುರಿಸಲೇಬೇಕು.... ಬರುವ ಎಲ್ಲ ಸಂಕಟಗಳನ್ನು ಎದುರಿಸಲೇಬೇಕು. ಹೆದರಿದರೆ ನುಂಗಿಬಿಡುವದು. ಎದುರಿಸುತ್ತ ಮುಂದೆ ನಡೆದರೆ ಒಂದಿಲ್ಲೊಂದು ದಿನ ಸಂಕಟಕ್ಕೆ ಕರುಣೆ ಬಂದು ನಮ್ಮ ಮೇಲೆ ಅಮೃತಮಳೆ ಕರೆಯುವದು..."

ಅಮೃತ.... ಮಳೆ.....

ಎರಡೂ ಮೋಹಕವಾದ ಶಬ್ದಗಳು. ಆದರೆ ಅಮೃತದ ಕೊಡವನ್ನು ರಾಕ್ಷಸರು ಹೊತ್ತುಕೊಂಡು ಓಡಿ ಹೋದರು.... ಇನ್ನುಳಿದ ಮಳೆ ಸುರಿದು

ನಿಂತ ನೆಲವೆಲ್ಲ ಜಲಮಯ. ನಾನು ಹುಲ್ಲುಕಡ್ಡಿಗಿಂತ ಹಗುರಾಗಿ ತೇಲಾಡು ತ್ತಿದ್ದೇನೆ. ನಾವಕಾಶವಾಗಿ ನಾಗುತ್ತಿದ್ದೇನೆ ನಾಗಿಸಿದತ್ತ.

ಎಲ್ಲಿಗೆ.......?

ಕಣ್ತೆರೆದು ನೋಡುವದು ಬೇಡವಾಗಿದೆ. ಬಾಯ್ತೆರೆದು ಕೇಳುವದಕ್ಕೂ ಬೇಡವಾಗಿದೆ. ಸಾಗಿದತ್ತ ನಾಗಲಿ ಎಂದು ಸ್ತಬ್ಧಳಾಗಿರುವೆ. ನನಗೆ ಏನೂ ಬೇಡವಾಗಿದೆ. ಏಕೆಂದರೆ ನಾನು ಯಾರಿಗೂ ಬೇಡವಾಗಿರುವೆ. ಯಾರಿಗೂ ಬೇಡವಾಗಿರುವೆ.

ಮೃತ್ಯುವಿಗೂ ಕೂಡ ಬೇಡವಾಗಿರುವೆ.

ಅಂತೆಯೇ "ನಿಮ್ಮ ಜೊತೆಗೆ ವಿವಾಹ ಮಾಡಿಕೊಳ್ಳುವೆ." ಎಂದು ಕೇಳಿ ದ್ದಕ್ಕೆ ಬದಲಾಗಿ

"ಸರಕಾರದ ಕಾಯದೆಯಿಲ್ಲದಿದ್ದರೆ.... ನಿಮ್ಮನ್ನು ವಿವಾಹಮಾಡಿಕೊ ಳ್ಳುತ್ತಿದ್ದೆ" ಎಂಬುದನ್ನು ಕೇಳಬೇಕಾಯಿತು. ಎಲ್ಲಿಂದ....ಎಲ್ಲಿಗೆ...?

ಎಲ್ಲಿಂದ ಎಲ್ಲಿಗೆ ..? ಎಷ್ಟು ದೂರ ..?

ಗೌರಿಶಂಕರದ ಮೇಲೆ ನಿಂತುಕೊಂಡರೂ ಅದನ್ನು ಕಾಣಬಹುದೆ...?

"....ವಿವಾಹ...ಮಾಡಿಕೊಳ್ಳುವೆ...."

"....ವಿವಾಹ ಮಾಡಿಕೊಳ್ಳುತ್ತಿದ್ದೆ...."

ಒಂದು ರಮಣೀಯ ಮನಮೋಹಕ ನಂದನವನ....

ಇನ್ನೊಂದು ಎಲ್ಲವೂ ಮುಗಿದು ಬೂದಿ ಹರಡಿದ ಸ್ಮಶಾನ.

ಒಂದು ನಿರ್ಮಾಣವಾಗುವ ಸುಂದರ ಭವಿಷ್ಯ.

ಇನ್ನೊಂದು ಹಾಳಾದ ಭೂತಕಾಲ.

ಒಂದು ಜನನ.

ಇನ್ನೊಂದು ಮರಣ.

ಒಂದರಲ್ಲಿ ಸರ್ವಸ್ವವೂ ಅಡಗಿದೆ.

ಇನ್ನೊಂದರಲ್ಲಿ ಸರ್ವಸ್ವವೂ ಭಸ್ಮವಾಗಿದೆ.

ಒಂದು ಮನೆ....

ಮತ್ತೊಂದು ಮಸಣ....

ಎರಡೂ ಸ್ಪಷ್ಟವಾಗಿ ಎದುರು ಇವೆ.

ಕಾಣುವ ಜಗದಲ್ಲಿ ಅಲ್ಲ. ಜಗ ಕಾಣದ ಮನಃಪಟಲದ ಎದುರು.

ಒಂದು ವಿಚಾರ ಮನದಲ್ಲಿ ಬಂದಾಗ ಒಂದಕ್ಕೊಂದು ಹಿಂದು ಮುಂದು ಮೇಲೆ ಕೆಳಕ್ಕೆ ಎಲ್ಲೆಡೆಗೆ ಅಂಟಿಕೊಂಡು ಭವ್ಯಚಿತ್ರ ನಿರ್ಮಾಣವಾಗುತ್ತದೆ.

ಭವ್ಯಚಿತ್ರ.... ನನ್ನ ಜೀವನದ ಭವ್ಯ ಆದರೆ ಭಸ್ಮವಾದ ಚಿತ್ರ.

ಅಲ್ಲಿ ಏನಿಲ್ಲ....? ಎಲ್ಲವೂ ಇದೆ. ಪ್ರೀತಿಯಿದೆ. ದ್ವೇಷವಿದೆ. ದೇವನಿರುವ ರಾಕ್ಷಸನಿರುವ. ದೇವತೆ ಇರುವಳು.... ಆದರೆ ಡಾಕಿನಿ ಇಲ್ಲ..... ಡಾಕಿನಿ ಇದ್ದುದಾದರೆ ನಾನು. ನಾನು ಮಾತ್ರ ಡಾಕಿನಿ.... ನಾನು.... ಆಕ್ರೋಶಮಾಡಬೇಕೆನ್ನಿಸುತ್ತದೆ. ಆದರೆ...?

ನನ್ನನ್ನು ರಮಿಸುವವರಾರು....? ಆಕ್ರೋಶಿಸುವ ನನ್ನನ್ನು ರಮಿಸಬೇಕಾರು...?

ಯಾರೂ ಇಲ್ಲ....

" ಯಾರೂ ಇರಲಿಲ್ಲವೇ.... ?

ಇದ್ದರು. ಎಲ್ಲರೂ ಇದ್ದರು.

ಆರಂಭದಲ್ಲಿ ರಂಗ ರಮಿಸುತ್ತಿದ್ದ. ಕರೆದುಕೊಂಡು ಬಂದ ಕುಲಕರ್ಣಿಯವರು ರಮಿಸುತ್ತಿದ್ದರು ಮಮತೆಯ ಮೂರ್ತಿಯಾದ ಕರುಣಾಮಯಿ ಕಾಮಿನಿ ರಮಿಸುತ್ತಿದ್ದಳು. ಇದ್ದಾಗ ಮಾಧವರಾಯರೂ ರಮಿಸುತ್ತಿದ್ದರು. ಬದುಕಿದ್ದರೆ ನನ್ನ ಮಗು ನನ್ನನ್ನು ರಮಿಸುತ್ತಿತ್ತು.....

ನನ್ನ ಮಗು ಬದುಕಿದ್ದರೆ.... ?

ನನ್ನ ಮಗುವನ್ನು ಬದುಕಿಸಿದ್ದರೆ....?

ನಾನು ಬದುಕಬೇಕೆಂದು ಮಗುವನ್ನು ಬದುಕಿಸಲಿಲ್ಲ. ನಾನು ಸುಖವಾಗಿ ಬದುಕಬೇಕೆಂದು ಸುಖದಿಂದ ಬದುಕಬಯಸುವ ಮಗುವನ್ನು ಬದುಕಿಸಲಿಲ್ಲ.....ಸುಖ....?

ಸುಖಕ್ಕಾಗಿ ನಾನು ಏನನ್ನೂ ಮಾಡಲಿಲ್ಲ....? ನನ್ನ ಸುಖಕ್ಕಾಗಿ, ನಾನು ಸುಖದಿಂದ ನಲಿಯುವದಕ್ಕಾಗಿ ಏನನ್ನೂ ಮಾಡಲಿಲ್ಲ...?

ಎಲ್ಲವನ್ನೂ ಮಾಡಿದೆ.

ತರುಣಿಯಾಗಿರುವಾಗಲೇ ಪರಪುರುಷನೊಡನೆ ವಿಹರಿಸಿದೆ. ಅದೂ ಸುಖಕ್ಕಾಗಿ.

ಬಾಳಲೆಂದು ಕಣ್ಣುತೆರೆಯುವ ನನ್ನ ನೆತ್ತರದಿಂದ ಬೆಳೆದ ನನ್ನ ಮಗುವಿನ ಕೊಲೆ ಮಾಡಿದೆ. ಅದೂ ಸುಖಕ್ಕಾಗಿ.

ಹಾಳಾಗಿ ಹೋದ ನಾನು ಪುಣ್ಯ ಪುರುಷನಿಗಾಗಿ ಆಶಿಸಿದೆ. ಅದೂ ಸುಖಕ್ಕಾಗಿ. ದೇಹ ಬಾಳಬೇಕೆಂದು ದೇಹವನ್ನು ಪರರಿಗೊಪ್ಪಿಸಿದೆ. ಅದೂ ಕೂಡ ಸುಖಕ್ಕಾಗಿ ಆದರೂ ಸುಖ ದೊರೆಯಲಿಲ್ಲ.

ಈಗ ದೊರೆಯುತ್ತದೆ, ಇಕೊ ಸಿಕ್ಕಿತು...ಇಕೊ .. ಇಲ್ಲಿದೆ....ಸಿಕ್ಕಿತು.... ಎನ್ನುತ್ತ ಅದರ ಬೆನ್ನುಹಿಂದೆ ಧಾವಿಸಿದೆ ರಾಮನು ಸುವರ್ಣ ಮೃಗಕ್ಕಾಗಿ ಧಾವಿಸಿದಂತೆ ಸೀತೆಯನ್ನು ಬಿಟ್ಟು. ರಾಮನಿಗೆ ಸುವರ್ಣ ಮೃಗವೂ ಸಿಕ್ಕಲಿಲ್ಲ. ಸೀತೆಯೂ ರಾಕ್ಷಸನ ಪಾಲಾಗಿದ್ದಳು.

ನನಗೂ ಸುಖ ಸಿಕ್ಕಲಿಲ್ಲ. ಮಾನವು ಮಣ್ಣು ಪಾಲಾಯಿತು.

ರಾಮ ದೇವ ಎಲ್ಲವೂ ಅವನಿಗೆ ಆಟ ಆಡಲೇಬೇಕಿತ್ತು.

ನಾನು ಮನುಷ್ಯಳು. ಎಲ್ಲವೂ ನನಗೆ ಪ್ರಾಣಸಂಕಟ ಆದರೂ ಆಶೆಗಾಗಿ ಅನುಭವಿಸಲೇಬೇಕಿತ್ತು. ಅನುಭವಿಸಿದೆ.

ಇನ್ನು ಗತಾಯುಷ್ಯದಲ್ಲಿ ಅನುಭವಿಸಿದ ಸಂಕಟದ ನೆನಹಿನಿಂದ ಮತ್ತೆ ಮತ್ತೆ ಅದನ್ನೇ ಅನುಭವಿಸುತ್ತ ಸಾಯಬೇಕು. ಅದಕ್ಕೆ 'ಬದುಕು' ಎಂದುಕೊಂಡು.

ಬದುಕು ಎಂದು ಕೊಳ್ಳಬೇಕು ಸಾವಿಗೆ. !

ಇದೇ ವಿಷಯಕ್ಕೆ ಒಂದು ಸಲ ಮಾಧವರಾಯರು— "ಸುಮಿತ್ರಾ... ದುಃಖ ಪೂರ್ವ ಜನ್ಮದ ಪಾಪದಿಂದ ಒದಗುತ್ತದೆಂಬುದನ್ನು ನಂಬಲೇಬೇಕು. ಇಲ್ಲದಿದ್ದರೆ ಈ ಜನ್ಮದಲ್ಲಿ ಯಾರಿಗೂ ಕೆಡಕು ಮಾಡದವರೂ ಕೂಡ ದುಃಖಿಗಳು ಹೇಗಾಗುತ್ತಿದ್ದರು...? ಅದೇ ರೀತಿಯಲ್ಲಿ ದುಃಖದ ಸಾಗರದಲ್ಲಿ ಕೂಡ ಸುಖದ ಅಲೆಗಳು ದುಃಖಿಗಳನ್ನು ಸುಖದ ಆಶೆಯಲ್ಲಿ ತೇಲಿಸುವದನ್ನು ಕಂಡರೆ ಪಾಪದಲ್ಲಿ ಕೂಡ ಪುಣ್ಯವಾಗಿದೆ. ಎನ್ನುವದನ್ನೂ ನಂಬಬೇಕು...." ಎಂದು ಹೇಳಿದರು.

ಅವರ ಮಾತಿನಲ್ಲಿ ಅಸತ್ಯವಾದರೂ ಏನಿದೆ....? ದುಃಖದಲ್ಲಿ ತಳಮಳಿ ಸುವ ನಾನು ಸುಖದ ಉಡಿಯಲ್ಲಿ ಸುಖದಿಂದ ನಿದ್ರಿಸಿರುವೆ....!

ರಂಗನ ಕೃತಿಯಿಂದ ಮನೆಯಿಂದ ದೂರಾಗಿ ಮಸಣದಲ್ಲಿ ಮರೆಯಾ ಗಲು ಹೊರಟಾಗ ಕುಲಕರ್ಣಿಯವರು ದೇವದೂತರಾಗಿ ಬಂದು ಮಸಣ ದಿಂದ ಮನೆಗೆ ಕರೆತಂದರು. ದುಃಖದ ಪ್ರವಾಹದಲ್ಲಿ ಕೂಡ ಸುಖದ ನಾವೆಯ ಮೇಲೆ ಕುಳಿತು ಪ್ರವಾಸಕ್ಕೆ ಆರಂಭಿಸಿದೆ.

ಕುಲಕರ್ಣಿಯವರ ನಂತರ ಇನ್ನೇನು ಬಾಳು ಮುಗಿದಿತು. ಮುಂದಿನ ದಾರಿ- ಒಂದೇ ಒಂದಾದ ದಾರಿಯನ್ನು ಹಿಡಿಯಬೇಕು ಎನ್ನುವಾಗ ಮತ್ತೆ ನೆರವಿಗೆ ಬಂದರು ಮಾಧವರಾಯರು.

ದುಃಖದ ಮಹಾಪೂರ ಕೊಚ್ಚಿಕೊಂಡು ಭೋರ್ಗರೆದು ಧಡವನ್ನು ಕೊರೆಯುತ್ತಲೇ ಇತ್ತು. ಆದರೆ— ನಾನು ಮಾತ್ರ ಅಲ್ಲಾಡುವ ನಾವೆಯಲ್ಲಿ ಕುಳಿತು ದೂರ ಕಾಣುವ ಧಡದೆಡೆಗೆ ಸಾಗಿದ್ದೆ.

ಧಡದೆಡೆಗೆ....?

ಅಹುದು, ಧಡದೆಡೆಗೆ ಜನ್ಮ ತಾಳಿದ ಪ್ರಾಣಿಗಳೆಲ್ಲರೂ ಜನನದ ಕ್ಷಣ ದಿಂದ ಸಾವಿನ ಕ್ಷಣದಲ್ಲಿ ಲೀನರಾಗುವವರೆಗೂ ಸಾಗುವದು ಧಡದೆಡೆಗೆ ಅಲ್ಲವೆ....?

ಸಂಸಾರಕ್ಕೆ ಸಾಗರ ಎಂದು ಹೇಳುವದು ಸುಳ್ಳಲ್ಲ. ಸಂಸಾರವು ಸಾಗ ರವೇ ಸಾಗರದ ಅನಂತತೆ— ಸಂಸಾರದಲ್ಲಿದೆ ' ಸಾಗರಕ್ಕೆ ಧಡವಿಲ್ಲ ' ಎಂದು ಹೇಳುವಷ್ಟು ದೂರದಲ್ಲಿ ಧಡವಿದೆ. ಒಂದು ಧಡದಲ್ಲಿ– ನಿಂತಾಗ ಇನ್ನೊಂದು ಕಣ್ಣಿಗೆ ಕಾಣುವದಿಲ್ಲ. ಆದರೂ ಇದ್ದುದು ಸುಳ್ಳಲ್ಲ. ಅದು ಸುಳ್ಳಲ್ಲ ಎಂದೇ ಅದನ್ನು ತಲುಪುವದಕ್ಕಾಗಿ ಮನುಷ್ಯ ಮರಣದವರೆಗೂ ಪ್ರಯತ್ನಪಡುತ್ತಲೇ ಇರುತ್ತಾನೆ.

ಯಾರಾದರೂ ತಲುಪಿರುವರೆ....?

ಅದು ಯಾರಿಗೂ ಅರಿಯದು. ಏಕೆಂದರೆ ತಲುಪಿದವರಾರೂ ತಿರುಗಿ ಬಂದಿಲ್ಲ ತಲುಪಿದವರಾರು ಎನ್ನುವದೂ ಅರಿಯದು. ಎಲ್ಲರೂ ಸಾಗರ ದಾಟಲು ಹೊರಟವರು. ಆದರೆ ತಿರುಗಿ ಬಂದವರು ಯಾರೂ ಇಲ್ಲ.

ಹಾಗಾದರೆ ಮರಣವೇ ಅದರ ಆಚೆಯ ತೀರವೇ.... ?

ಕುಲಕರ್ಣಿಯವರು ಹೇಳುತ್ತಿದ್ದರು " ಮರಣ ಆಚೆಯ ತೀರವಲ್ಲ. ಆದರೆ ಜನನ ಮಾತ್ರ ಈಚೆಯತೀರ "ವೆಂದು

ಅವರು ಮತ್ತು ಹೇಳುವದು " ಮರಣ ಆಚೆಯ ಧಡವೆಂದುದಾದರೆ ಈಸುಬಿದ್ದ ಕೂಡಲೇ ನಮ್ಮ ಕಣ್ಣೆದುರು ಮರಣದ ಮುಸುಕಿನಲ್ಲಿ ಮಾಯವಾದವರನ್ನು ನಾವು ನೋಡಿದ್ದೇವೆ. ಆದ್ದರಿಂದ ಅದು ನಿಶ್ಚಯವಾಗಿಯೂ ಆಚೆಯ ಧಡವಲ್ಲ. ಅಲ್ಲದೆ ಆಚೆಯ ತೀರ ಈ ತೀರದಂತಿಲ್ಲ. ಅದೂ ನಿಜ ಏಕೆಂದರೆ ಇಲ್ಲಿ ಅಸಂಖ್ಯಾತ ಜೀವಿಗಳು ಜಾತ್ರೆ ಮಾಡಿ ನಿಂತಿದ್ದಾರೆ. ಎಲ್ಲಿ ನೋಡಿದಲ್ಲಿ ಗಲಿಬಿಲಿ...ಎಲ್ಲಿ ನೋಡಿದಲ್ಲಿ ಕೆಸರ...ಎಲ್ಲೆಲ್ಲಿಯೂ ಆಕ್ರೋಶ ಎಲ್ಲೆಡೆಯಲ್ಲಿಯೂ ಅಶಾಂತತೆ....ಅಶಾಂತತೆಯೇ ಈ ತೀರ....ಈಸುಬಿದ್ದ ಒಂದು ಜೀವ ಇನ್ನೊಂದನ್ನು ಕೈಮಾಡಿ ಕರೆಯುತ್ತಿದೆ. ಹತ್ತಿರ ಕರೆಯುತ್ತಿದೆ. ತಾನು ಈಸಿ ಪಾರಾಗಬೇಕೆಂಬುವದನ್ನೇ ಮರೆತು ಬಂದ ವ್ಯಕ್ತಿಯೊಡನೆ ಅಲ್ಲಿಯೇ ಸರಸ ಆರಂಭವಾಗುತ್ತಿದೆ. ಕೊನೆಯ ಕ್ಷಣ ಹತ್ತಿರಕ್ಕೆ ಬಂದಾಗ ' ಅಯ್ಯೋ ತಾನು ತಪ್ಪು ಮಾಡಿದೆ' ಎಂಬ ಆಕ್ರೋಶಕ್ಕೆ ಆರಂಭವಾಗುತ್ತದೆ.....ಆದರೂ ಕೊನೆ ತಪ್ಪದು. ಅದನ್ನು ಕಂಡು ಇನ್ನೊಂದು ವ್ಯಕ್ತಿ ' ತಾನೂ ಹೋಗುವದನ್ನು ಮರೆತು ಅಯ್ಯೋ ' ಎಂದು ಇನ್ನೊಂದರ ಕೊನೆಗೆ ಆಕ್ರೋಶ ಮಾಡುತ್ತದೆ. ಅಲ್ಲಿಯೇ ಅದರ ಅಂತ ಕೂಡ. ಹೀಗೆಯೇ ಸಡೆಯುತ್ತದೆ ಈ ಚಕ್ರ........"

" ಇದೆಲ್ಲದರೊಳಗಿಂದ ಮುಕ್ತರಾಗಿ ಮುಂದುವರಿಯುತ್ತಿರುವವರು ಎಷ್ಟು ? ಮುಂದುವರಿದವರಲ್ಲಿ ಆ ಬದಿಯನ್ನು ತಲುಪಿದವರೆಷ್ಟು ?

" ತೀರ ಕಡಿಮೆ.... ಅಂತೆಯೇ ಅಲ್ಲಿ ನೆಲಿಸಿರುವದು ಶಾಂತಿ ... ?

" ಶಾಂತಿ..."

ಅದಕ್ಕೆ ಕೆಲವರು ಹೇಳುವದು ಮೋಕ್ಷ. ಇನ್ನೂ ಕೆಲವರು ಹೇಳುವದು ಆ ಪರಮಾತ್ಮನ ಸನ್ನಿಧಿ. ಅವರು ಹೇಳುವ ಯಾವುದೂ ಅಸತ್ಯವಲ್ಲ. ಎಲ್ಲವೂ ಸತ್ಯ.

" ಅದನ್ನು ಕಂಡವರಿರುವರೇ ? ಎಂದು ಕೇಳಿದರೆ .... "

" ಇರುವರು ... " ಎಂಬ ಉತ್ತರ.

" ತಿರುಗಿ ಬಂದಿರುವರೆ...? ಎಂಬ ಪ್ರಶ್ನೆಗೆ "

" ಇಲ್ಲ " ಎಂಬ ಉತ್ತರ.

ಅಲ್ಲಿ ಹೋದವರು ತಿರುಗಿ ಬರುವದಿಲ್ಲ. ಆದರೆ ಅವರು ಅಲ್ಲಿಂದಲೇ ಎಲ್ಲರ ಕಿವಿ ಗಡಚಿಕ್ಕುವಂತೆ "ಈಗೋ...ನಾವು ತಲುಪಿರುವೆವು....ನಿಮಗೂ ಸಾಧ್ಯವಿದೆ, ಇದುವೇ ಅದಕ್ಕೆ ದಾರಿ.... ಇದುವೇ ರಾಜಮಾರ್ಗ.... " ಎಂದು ಹೇಳುತ್ತಿದ್ದಾರೆ.

" ಅದು ಎಲ್ಲರಿಗೂ ಕೇಳಿಸುತ್ತದೆ. ಆದರೂ ಆ ದಾರಿಯಿಂದ ಹೋಗುವವರು ಕಡಿಮೆ...." ಎಂದು.

ಕುಲಕರ್ಣಿಯವರು ಹೇಳಿದಂತೆ ಯಾರೂ ಆ ದಾರಿಯಿಂದ ಹೋಗುವದಿಲ್ಲ. ಏಕೆಂದರೆ ಅದು ಕಠಿಣ. ಆರಂಭದಲ್ಲಿ ತುಂಬ ಕಠಿಣವೆನ್ನಿಸುತ್ತದೆ

ಆ ದಾರಿಯು ಆರಂಭ ತ್ಯಾಗದಿಂದ ಆರಂಭವಾಗುತ್ತದೆ. 'ತ್ಯಾಗವೆಂದರೆ ಸರ್ವಸ್ವವನ್ನೂ ತ್ಯಜಿಸುವದಲ್ಲ ಅರಗಿಸಿಕೊಳ್ಳುವದು. ಸುಖ ದುಃಖ ಎಲ್ಲವನ್ನೂ ಸಮದೃಷ್ಟಿಯಿಂದ ನೋಡುವದು. ಸರ್ವರನ್ನೂ ಪ್ರೀತಿಸುವದು.

ಇದು ನಿಮ್ಮಿಂದ ಸಾಧ್ಯವೆ....? ನನ್ನಿಂದ ಸಾಧ್ಯದೇ... ?

ನನ್ನ ಸುಖಕ್ಕೆ ಅಡ್ಡವಾದವರನ್ನು ನಾನು ದ್ವೇಷಿಸುವೆ. ಅದಕ್ಕೆ ನಾನು ಹೇಳುವದು ಆತ ಸ್ವಾರ್ಥಿಯಾಗಿ ನನ್ನ ದಾರಿಯಲ್ಲಿ — ಸುಖದ ದಾರಿಯಲ್ಲಿ ಅಡ್ಡ ಬಂದಿರುವ ಎಂದು.

ಆದರೆ ನಾನು ಸುಖವನ್ನೇ ಅಪೇಕ್ಷಿಸಿರದಿದ್ದರೆ.... ?

ನನ್ನ ದಾರಿಯಲ್ಲಿ ಯಾರೂ ಎದುರಾಗುತ್ತಿರಲಿಲ್ಲ.

ಆದರೆ ಬಾಳುವ ಮನುಷ್ಯ ಸುಖದ ಅಪೇಕ್ಷೆಯಿಂದ ದೂರಿರುವದು ಅಸಾಧ್ಯವಲ್ಲದಿದ್ದರೂ ಕಷ್ಟಸಾಧ್ಯ ಸಾಮಾನ್ಯರಾದ ನಮಗೆ ಕಷ್ಟ ಬೇಡ.

ಕಷ್ಟಬೇಡವೆಂದು ಸುಖದ ದಾರಿಯಲ್ಲಿ ಸಾಗುವಾಗ ಸುತ್ತುಮುತ್ತಲಿನಿಂದ ಮುತ್ತುವದು ದುಃಖ ಕೊನೆಗೆ ದುಃಖವೇ ಜೀವನನಾಗಿ ಪರಿಣಮಿಸುವದು. ನನ್ನ ಜೀವನದಂತೆ.

ನನ್ನ ಜೀವನ. !

ಅದೊಂದು ದುಃಖದ ಕತೆ. ಬಾಳಬಾರದೆಂದರೂ ಬಾಳುತ್ತಿದ್ದೇನೆ ಏಕೆ ಎನ್ನುವದು ಗೊತ್ತಿಲ್ಲದೆ.

ಕಾಮಿನಿ ಹೇಳುತ್ತಾಳೆ ಸುಮಿತ್ರಾ ಸಾವು ಕಠಿಣವೆಂದು ನಾನೆಂದಿಗೂ ಹೇಳುವದಿಲ್ಲ. ಅದು ತೀರ ಸುಲಭ. ಇಚ್ಛೆ ಮಾಡಿದಾಗ ಜೀವದ ಅಂತಮಾಡಿಕೊಳ್ಳಲು ಸಾಧ್ಯವಿದೆ. ಆದರೆ ನಮ್ಮ ಇಚ್ಛೆ ಹೊರಗಿನ ಕಷ್ಟಗಳಿಂದ ಉತ್ಪನ್ನವಾಗಿರಕೂಡದು. ಹೊರಗಿನ ಕಾರಣಗಳಿಂದಾದ ಇಚ್ಛೆ ಪೂರ್ಣವಾಗುವದು ಕಠಿಣ .. ....ಸಂಸಾರದ ಕಷ್ಟಕ್ಕೆ ಬೇಸತ್ತು ಮಕ್ಕಳನ್ನು ಬಾವಿಗೆ ತಳ್ಳಿ ತಾನು ಸಾವು ಬೇಕೆಂದು ತಾಯಿ ಬದುಕಿ ಮತ್ತೆ ಎಲ್ಲರಿಂದ ಛೀಮಾರಿಯಾದುದುಂಟು ಅವಳ ಕಷ್ಟ ನನ್ನಲ್ಲಿಯೂ ಕನಿಕರ ಮಾಡಿಸುತ್ತದೆ. ಆದರೆ ಆ ಕಷ್ಟದ ನಿವಾರಣೆ ಮರಣವಲ್ಲ ಮರಣದ ಕಾಲದಲ್ಲಿ ಕೂಡ 'ಅಯ್ಯೋ ನಾನು ಸಾಯಬಾರದಿತ್ತು' ಎಂದು ತಾನು ಮಾಡಿದ ತಪ್ಪಿಗಾಗಿ ಪಶ್ಚಾತ್ತಾಪವಾಗುವದು! ಆದರೆ ಹೃದಯಾಂತರಾಳದಿಂದ ಬಂದ ಮರಣದ ಇಚ್ಛೆ ಪೂರ್ಣವಾಗುವಾಗ ಮನಕ್ಕೆ ಶಾಂತಿ ಬರುತ್ತದೆ. 'ಇದು ಮಾಡಬೇಕಾದ ಕಾರ್ಯ ಮಾಡುತ್ತಿರುವೆ' ಎಂಬ ಸಮಾಧಾನವಿರುತ್ತದೆ" ಎಂದು.

ಅಹುದು. ನನ್ನ ಸಾವಿನ ಇಚ್ಛೆ ಕೂಡ ಹೊರಗಿನ ಕಷ್ಟಗಳಿಂದ. ನಾನು ಬಾಳಲು ಇಚ್ಛೆ ಪಡುವೆ. ಬದುಕುವ ಇಚ್ಛೆ ಇದೆ ಆದಕ್ಕೆ ಅಂತರ ಬಂದಿದೆ ಎಂದು ಸಾಯುವ ವಿಚಾರ ಇಣಿಕಿ ಹಾಕುತ್ತಿದೆ. ಕುಲಕರ್ಣಿಯವರು ವಿವಾಹಕ್ಕೆ ಸಿದ್ಧರಾದಾಗ ನಾನು ನಂದನವನದಲ್ಲಿ ವಿಹರಿಸುತ್ತಿದ್ದೆ. ಸಾವಿನ ವಿಚಾರ ಸಾವಿರ ಹೆರದಾರಿ ದೂರವಾಗಿತ್ತು.

'ಸಾಯಬಾರದು ಬದುಕಬೇಕು' ಎಂದುದಾದರೆ ಬದುಕುವಂತೆ ಬದುಕಬೇಕು. ಅಲ್ಲದೆ ಸಾವಿನ ನೆರೆಯಾಳಾಗಿ ಬದುಕಬಾರದು. ಇದು ಸಾಧ್ಯವಿದ್ದರೂ ನನಗೂ ಸಾಧ್ಯವೆ...?'" ಆದುವೇ ಸಂಶಯ ನನ್ನಲ್ಲಿ.

ಕಾಮನಿ ಕೇಳುವದು "ಇಂತಹ ಸಂಶಯ ನಿನ್ನಲ್ಲಿ ಮೂಡುವದಾದರೂ ಏಕೆ...?" ಎಂದು.

" ಸಂಶಯ ದೂರಾಗುವ ವರೆಗೂ ಸಾಧ್ಯವಿದ್ದುದು ಕೂಡ ಅಸಾಧ್ಯ. ಏಕೆಂದರೆ ಸಾಧ್ಯವಾದಾಗ ಕೂಡ ಇದುವೆ ನಾನು ಅಪೇಕ್ಷಿಸಿದುದು... ? ಇದು ಸತ್ಯವೆ...? " ಎಂಬ ಸಂಶಯ. ಅದಕ್ಕೆ ನೀನು ಸಂಶಯ ಬಿಡು. ನಿರ್ಭೀತಳಾಗು " ಎಂದು ಹೇಳುತ್ತಾಳೆ.

ಅವಳ ಮಾತು ಅಭಯವಾಗಿ ಪರಿಣಮಿಸುತ್ತದೆ ನಾನು ನಿರ್ಭೀತಳಾಗಿರಲು ಯತ್ನಿಸುವೆ. ಆದರೆ ಮತ್ತೆ "ನನ್ನ ಭವಿತವ್ಯವೇನು ?' ಎಂಬ ವಿಚಾರ ಬೇಡವಾದರೂ ನುಗ್ಗಿ ಬಂದು ಮತ್ತೆ ಮನಸ್ಸನ್ನು ಚಂಚಲಗೊಳಿಸುತ್ತದೆ. ನಿರ್ಭೀತಿಯನ್ನು ಭೀತಿಯಲ್ಲಿ ಪರಿವರ್ತಿಸುತ್ತದೆ. ಕಣ್ಣುಮುಚ್ಚಿ ಜಗತ್ತನ್ನು, ತನ್ನನ್ನು ಎಲ್ಲವನ್ನೂ ಮರೆಯುವ ವೇಳೆಯಲ್ಲಿ ಎಲ್ಲವೂ ಜಾಗೃತವಾಗಿ ನನ್ನನ್ನು ಹರಿದು ತಿನ್ನಲು 'ನಾನು ಮುಂದೆ ನಾನು ಮುಂದೆ' ಎಂದು ಸ್ಪರ್ಧೆ ನಡೆಸುತ್ತವೆ ಮತ್ತೆ ನಾನು ಗಾಬರಿಗೊಳ್ಳುವೆ. ಭೀತಿಯಿಂದ ನಡುಗುವೆ. ಮತ್ತೆ ಸಂಶಯ...

ಹೀಗೆಯೇ ಸಾಗುವದು ಎಲ್ಲಿಯ ವರೆಗೆ....? ಹೀಗೆಯೇ ಮುಂದುವರಿಯಲು ಸಾಧ್ಯವೇ....? ಅಸಾಧ್ಯವಾದರೆ ನಾನುಮಾಡುವದಾದರೂ ಏನು ?

ಎಡೆಬಿಡದೆ ಕ್ಷಣದ ವಿಲಂಬಕೊಡದೆ ಕಾಡಿಸುವ ಪೀಡಿಸುವ ಪ್ರಶ್ನೆಗೆ ನನ್ನಲ್ಲಿ ಉತ್ತರವಿಲ್ಲ. ಉತ್ತರವಿಲ್ಲದ್ದರಿಂದ ಪ್ರಶ್ನೆಗಳು ಮತ್ತಷ್ಟು ಭೀಕರವಾಗುತ್ತವೆ. ಉಗ್ರರೂಪ ತಾಳುತ್ತವೆ. ಮತ್ತೆ ಮತ್ತೆ ಅದೇ ಪ್ರಶ್ನೆ ಒಂದೊಂದು ಸಾವಿರದಷ್ಟು ದೊಡ್ಡದಾಗಿ ಭೂತವಾಗಿ ನನ್ನನ್ನು ನುಂಗುವದಕ್ಕೆಬಾಯ್ತೆರೆದು ಬರುತ್ತದೆ. ಇಂತಹ ವೇಳೆಯಲ್ಲಿ ನನ್ನನ್ನು ಉಳಿಸುವವಳು ಕಾಮಿನಿ.

ಕಾಮಿನಿಯ ದುಡಿತದಮೇಲೆ ನನ್ನ ಬದುಕು. ಆದರೆ ಎಲ್ಲಿಯವರೆಗೆ....?

ಮತ್ತೆ ಅಂತಹದೇ ಪ್ರಶ್ನೆ. ಆದೇ ಪ್ರಶ್ನೆ......ಎಲ್ಲಿಯ ವರೆಗೆ........? ಎಲ್ಲಿಯ....ವರೆಗೆ...?

ನಾನೂ ಬದುಕಬೇಕು. ಸಾಯುವದು ಬೇಡವಾದಾಗ ಬೇಕಾಗುವದು ಬದುಕು. ಬೇಕಾದ ಬದುಕಿಗಾಗಿ ಬೇಡವಾದುದನ್ನು ಕೂಡ ಮಾಡಲೇ ಬೇಕಾಗುತ್ತದೆ. ಏಕೆಂದರೆ ಬದುಕುವದು ಬೇಕಾಗಿದೆ.

ಕಾಮಿನಿ ಹೇಳುವದು ಸುಳ್ಳು ಅಲ್ಲ. " ಸುಮಿತ್ರಾ ಸಾವು ಬದುಕಿನ ಹೋರಾಟದಲ್ಲಿ ಮಾನವ ಜನಾಂಗ ಮಗ್ನವಾಗಿದೆ ಎಂದು ಹೇಳುವದು

ಅಸತ್ಯ. ಇದು ಹೋರಾಟವೇ....? ಹೋರಾಟ ಬಲಿಷ್ಠರಲ್ಲಿ. ಶಕ್ತಿ ಇದ್ದವರು ಹೋರಾಡಲು ಸಿದ್ಧರಾಗುತ್ತಾರೆ. ಆದರೆ ಮನುಷ್ಯರಲ್ಲಿ ಶಕ್ತಿ ಇದೆಯೆ ಹೋರಾಡಲು...?

"ಇಲ್ಲ. ಅವರಲ್ಲಿ ಶಕ್ತಿಯಿಲ್ಲ."

"ಬದುಕು ರಾಕ್ಷಸ. ಮನುಷ್ಯ ಆತನ ಕೈಯಲ್ಲಿ ಸಿಕ್ಕ ನುಸಿ. ನುಸಿಗೆ ಚಲಿಸಲು ಕಾಲುಗಳಿವೆ. ಆದರೆ ಧಾವಿಸುವದು ಎಷ್ಟು ದೂರ....?. ಎಲ್ಲಿ ಓಡಿದರೂ ಆತನ ಕೈಯಲ್ಲಿ. ಆ ರಾಕ್ಷಸನೊಡನೆ ಹೋರಾಡಲು ಸಾಧ್ಯವೇ...?...

"ಮನುಷ್ಯನಲ್ಲಿ ಒಂದು ಶಕ್ತಿಯಿದೆ. ಅದು ಇಚ್ಛಾ ಶಕ್ತಿ. ಮನುಷ್ಯ ಇಚ್ಛೆ ಮಾಡುತ್ತಾನೆ. ತಾನು ದಣಿಯುವ ವರೆಗೂ ಇಚ್ಛೆ ಮಾಡುತ್ತಾನೆ. ನೆಲದ ಮೇಲೆ ಕುಳಿತು ಆಕಾಶದಲ್ಲಿಯ ನಕ್ಷತ್ರಕ್ಕೆ ಆಶೆ ಪಟ್ಟರೆ ಇಚ್ಛೆ ಪಟ್ಟರೆ ಅದು ದೊರಕಬಹುದೆ....?"

"ತನಗೆ ದೊರಕುವ ವಿಷಯವನ್ನು ಅರಿತು ಅದನ್ನು ಬೇಡಿದರೆ, ದೊರೆಯುವದು ಸಾಧ್ಯ........ಆದರೆ ಹಾಗೆಂದು ಮನುಷ್ಯರು ಎಲ್ಲವನ್ನೂ ಬಿಟ್ಟು ಕೂಡಬಹುದೆ...?"

"ಇಲ್ಲ ಕೂಡಲಾಗದು. ವಿಚಾರ ಪ್ರವಾಹ ತಡೆದು ನಿಲ್ಲುವವರೆಗೂ ಮುಂದೋಡಲೇಬೇಕು. ಆದರೆ ವಿಚಾರ ಮಾಡುವದು 'ಅಲಭ್ಯ' ವನ್ನು ಕುರಿತಲ್ಲ. ಸಾಧ್ಯಾಸಾಧ್ಯತೆಗಳನ್ನು ಕುರಿತು ಸಾಧ್ಯವೆನ್ನಿಸಿದಾಗ ಹಟದಿಂದ ಸಾಧಿಸಲು ಹೊರಡಬೇಕು. ಆಗಲೂ ಅಸಾಧ್ಯವಾದರೆ....?

"ಅದು ದೈವಕ್ಕೊಪ್ಪಿದ್ದು. ನಮ್ಮ ಪ್ರಯತ್ನದಲ್ಲಿ ಯಾವ ಕುಂದು ಕೊರತೆಯನ್ನೂ ತೋರಿಸಲಾಗದು."

ಅಹುದು ನಾನು ಆ ನೆಲದ ಮೇಲೆ ಕುಳಿತು ನಕ್ಷತ್ರಕ್ಕಾಗಿ ಕೈಯೊಡ್ಡುತ್ತಿರುವೆ. ಆದರೆ ದೊರಕುವದು ಹೇಗೆ ಸಾಧ್ಯ...? ಓರ್ವ ನಿರಾಶ್ರಿತೆ ಅಡಿಗೆಯ ಮನೆಯಲ್ಲಿ ಕುಳಿತು ನನ್ನ ಜೀವನವೂ ಸುಖಕರವಾಗಿ ಸಾಗಲಿ ಎಂದರೆ ಹೇಗೆ ಸಾಧ್ಯ...?

ಜೀವನ ಸಾಗಲಿ. ಕಷ್ಟದಿಂದಾದರೂ ಅಡ್ಡಿಯಿಲ್ಲ ಎಂದು ಹೊರಬರ ಬೇಕು. ಬದುಕುವದಕ್ಕೆ ಅದೊಂದೇ ದಾರಿ. ಅದೇ....ದಾರಿ....

ಕಾಮಿನಿ ಆ ದಾರಿಯನ್ನು ತೋರಿಸಿದಳು. ಆಗ ಅವಳು ಹೇಳಿದಳು—

" ಸುಮಿತ್ರಾ.... ನನಗೆ ಗೊತ್ತಿದೆ. ನಾನು ಮಾಡುವ ಕಾರ್ಯ ಪಾಪ ಎಂದು. ಯಾವ ಗಂಡಸು ಜಾತಿಯನ್ನು ' ಸಿಗಿದು ಹಾಕಬೇಕು, ಭಸ್ಮ ಮಾಡಬೇಕು' ಎಂದು ನಾನು ಹೇಳುವೆನೋ ಅದೇ ಕ್ರೂರಜಾತಿಯ ಕೈಯಲ್ಲಿ ನಿನ್ನನ್ನು ಕೊಡುತ್ತಿರುವೆ.... ಇದನ್ನು , ನಾನು ಮಾಡಬಾರದು.... ಆದರೂ ಮಾಡುತ್ತಿರುವೆ.... "

" ನಾನು ಮಾಡಬಾರದ ಅನೇಕ ಕೆಲಸಗಳನ್ನು ಮಾಡುತ್ತಿರುವೆ. ಆಗ್ಗೆ ನನ್ನ ಕಣ್ಣೆದುರು ಪಾಪ ಪುಣ್ಯ— ನೀತಿ ಅನೀತಿಗಳ ವಿಚಾರವಿರುವದಿಲ್ಲ. ಆಗ್ಗೆ ನನ್ನ ಮನದಲ್ಲಿರುವದು 'ಇದರಿಂದಾದರೂ ಇತರ ಕಲ್ಯಾಣವಾಗಲಿ, ಇದ ರಿಂದಾದರೂ ಸುಖಿಗಳಾಗಲಿ' ಎನ್ನುವ ವಿಚಾರ ಅದೇ ವಿಚಾರ ನನಗೆ ಅಲ್ಪ ಸ್ವಲ್ಪ ಸುಖ ಕೊಡುವದು".

' ನಿನ್ನ ಮಗುವಿನ ಕತ್ತು ಹಿಚುಕಿದೆ. ಅದೂ ಕೂಡ ನೀನು ಸುಖಿ ಯಾಗಲಿ, ನೀನು ಸುಖಿ ಆಗಬಹುದು ಎಂಬ ವಿಚಾರದಿಂದ. ನಿನ್ನ ಮಗು ನನ್ನ ವೈರಿಯಲ್ಲ. ನನಗೆ ಯಾರೂ ವೈರಿಗಳಿಲ್ಲ. ನನ್ನನ್ನು ಕೆಡಗಣ್ಣಿನಿಂದ ನೋಡಿದವರನ್ನು ಕೂಡ ನಾನು ತಾಯಿಯ ಮಮತೆಯಿಂದ ನೋಡಿರುವೆ.

" ಸುಮಿತ್ರಾ ನಾನು ಯಾವಾಗಲೂ ನಗುತ್ತಿರುವೆ. ಅದನ್ನು ಕಂಡು ಸಾವಿರ ಜನ ಸಾವಿರ ರೀತಿಯಲ್ಲಿ ಕಲ್ಪನೆ ಮಾಡುತ್ತಿರುವರು ಯಾರಿಗೂ ನನ್ನ ಹೃದಯದ ಅರಿವಿಲ್ಲ. ಸಾವಿರ ಚೇಳುಗಳು ಒಂದಾಗಿ ಒಂದೇ ವೇಳೆಯಲ್ಲಿ ನನ್ನನ್ನು ಕಚ್ಚುತ್ತಿವೆ. ಆ ವೇದನೆಯನ್ನು ಸಹಿಸಿಯೂ ನಾನು ನಗುತ್ತಿರುವೆ. ಏಕೆ...?

" ಅಳುವವರನ್ನು ಕೇಳುವವರಾರು ಈ ಜಗದಲ್ಲಿ....? ಒಬ್ಬಳ ನಗು ಇನ್ನೊಬ್ಬಳಿಗೆ ಪರಿಹಾರ ಕೊಡುತ್ತದೆ. ಆದರೆ ಒಬ್ಬರ ಅಳು ಇನ್ನೊಬ್ಬನನ್ನು ಅಳಿಸುತ್ತದೆ. ಅಳುವವರನ್ನು ನೋಡಿ ಮತ್ತೆ ದುಃಖಿಗಳಾಗಲು ಯಾರೂ ಆಶಿಸರು. ಏಕೆಂದರೆ ಅವರ ದುಃಖವೇ ಅವರಿಗೆ ಸಾಕಷ್ಟಿದೆ.... "

" ಅಂತೆಯೇ ನಾನು ನಗುತ್ತಿರುವೆ.... ನನ್ನ ನಗೆಯಿಂದ ಇನ್ನೊಬ್ಬ ಸಾಂತ್ವನ ಹೊಂದಲಿ. ಸಮಾಧಾನ ಪಡಲಿ ಎಂದು. ನಿಜವಾಗಿ ನೋಡಿದರೆ ನಗುವಂತಹದೇನಿದೆ ನನ್ನ ಜೀವನದಲ್ಲಿ ....?

ಸುಖಿ ಸಂಸಾರದಲ್ಲಿ ಜೀವನ ಕಳೆಯಬೇಕೆಂದು ತಂದೆ ತಾಯಿಗಳನ್ನು ಧಿಃಕರಿಸಿ ಮನ ಬಂದವನೊಡನೆ ವಿವಾಹವಾದೆ. ತಂದೆ ತಾಯಿಗಳು ದೂರಾದರು. ಮಾಡಿಕೊಂಡವನೂ ಕೈ ಬಿಟ್ಟ. ಅದರಿಂದಾಗಿ ನಾನು ಅನಾಥೆಯಾದೆ. ಅನಾಥೆಯಲ್ಲಿ ನಗು ಎಲ್ಲಿ ....?

" ಆದರೂ ನಗುವೆ "

" ಯಾವ ಕೆಡಕು ಕಾರ್ಯವನ್ನು ಮಾಡುವಾಗಲೂ ದುಃಖವಾಗುತ್ತದೆ. ಆದರೂ ಮಾಡಲೇಬೇಕು. ಅಂತೆಯೇ ಮಾಡುವೆ. ಏಕೆಂದರೆ ಅದಲ್ಲದೆ ಬೇರೆ ದಾರಿಯೇ ಇರುವದಿಲ್ಲ. ಬೇರೆ ದಾರಿ ಇದ್ದಾಗ ಕೆಡಕಿಗೆ ರಾಕ್ಷಸ ಕೂಡ ಕೈ ಹಾಕುವದಿಲ್ಲ...." ಎನ್ನುತ್ತಾಳೆ ಕಾಮಿನಿ.

ಒಳ್ಳೆಯದೆ ಕೆಡಕೆ— ಸುಖವೆ ದುಃಖವೆ... ಎನ್ನುವ ವಿಚಾರ ಆರಂಭದಲ್ಲಿ. ಜೀವನ ಒಂದು ಸಲ ಆರಂಭವಾದರೆ ಉಳಿದೆಲ್ಲ ವಿಚಾರ ಮರೆಯಾಗಿ ಇದ್ದುದನ್ನೇ ಸುಖದಲ್ಲಿ, ಒಳ್ಳೆಯ ದಾರಿಯಲ್ಲಿ ಹೇಗೆ ಸಾಗಿಸಿಕೊಂಡು ಹೋಗಬೇಕು ಎನ್ನುವ ವಿಚಾರದಲ್ಲಿ ಎಲ್ಲರೂ ಮಗ್ನರಾಗುತ್ತಾರೆ. ಮಗ್ನರಾಗಿ ಅದರಲ್ಲಿಯೇ ಇಲ್ಲದ ಸುಖ ಕಾಣುತ್ತಾರೆ.

ಆ ವಿಚಾರಕ್ಕೆ ಆಚಾರಕ್ಕೆ ನಾನೂ ಹೊರತಿರಲಿಲ್ಲ.

ಮಾಧವರಾಯರೊಂದಿಗೆ ನಾನು ಎಲ್ಲವನ್ನೂ ಮರೆತು ಸುಖದಿಂದ ಇರತೊಡಗಿದೆ. ಅವರು ನನ್ನನ್ನು ಸುಖದಿಂದಿಡಲು ಸರ್ವಕಾಲವೂ ಯತ್ನಿಸುತ್ತಿದ್ದರು. ಹೇಳುತ್ತಿದ್ದರು—

" ಸುಮಿತ್ರಾ.... ಒಂದೊಂದು ಸಲ ವಿಚಾರ ಬರುತ್ತದೆ. ' ನನ್ನ ಕೃತಿಯು ಯೋಗ್ಯವೇ....? ಎಂದು ಆದರೆ ಪ್ರತಿಯೊಂದು ಪ್ರಾಣಿಗೂ ಬೇಕಾದುದು ಸುಖ. ಸುಖ ದೂರದಲ್ಲಿ ಎಲ್ಲಿದ್ದರೂ ಲೋಹಚುಂಬಕದಂತೆ ಎಳೆಯುತ್ತದೆ. ಆದರ ಎಳೆತಕ್ಕೆ ಸಿಕ್ಕ ಉಕ್ಕು ಆ ದಾರಿಯಲ್ಲಿ ತಡೆದು ನಿಲ್ಲ

ಲಾರದು. ದಾರಿಯಲ್ಲಿ ನಿಂತುದೇ ಆದರೆ ಅದು ಉಕ್ಕು ಅಲ್ಲ. ಅಥವಾ ಎಳೆಯುವದು ಲೋಹಚುಂಬಕವಲ್ಲ. ಸುಖ ಲೋಹಚುಂಬಕವೂ ಅಹುದು. ಮನುಷ್ಯ ಉಕ್ಕೂ ಅಹುದು...."

" ನಾನೂ ಮನುಷ್ಯ ಅಂತೆಯೇ ಸುಖದ ಎಳೆತಕ್ಕೆ ಧಾವಿಸಿದೆ ನೀನು ಲೋಹ ಚುಂಬಕವಾಗಿ ಎಲ್ಲಿಯೊ ಕಂದರದಲ್ಲಿ ಬೀಳುವ ನನ್ನನ್ನು ಸಾವರಿಸಿದೆ....ಇಲ್ಲದಿದ್ದರೆ...? "

"ಇಲ್ಲದಿದ್ದರೆ ನೀನು ಮಧ್ಯದಲ್ಲಿ ಬಂದು ನನ್ನನ್ನು ತಡೆ ಹಿಡಿಯದಿದ್ದರೆ ನಾನು ಹಾಳಾಗುತ್ತಿದ್ದೆ.........ಇಷ್ಟರಲ್ಲಿ ನಾನೊಬ್ಬ....ನೀಚ ಕೀಳು ಹಾಳು ಪ್ರಾಣಿಯಾಗುತ್ತಿದ್ದೆ ಮನುಷ್ಯತ್ವವನ್ನು ಮರೆತು... ನಿನ್ನಿಂದಾಗಿ ನಾನು ಹಾಳಾಗದೆ ಉಳಿದೆ..."

ಮಾಧವರಾಯರು ಹೇಳುತ್ತಾರೆ ನಾನು ಅವರನ್ನು ಉಳಿಸಿದೆನೆಂದು! ಇದನ್ನು ನಂಬಬಹುದೆ.......? ಮಾಧವರಾಯರ ಮಾತನ್ನು ಕೇಳಿದಾಗ ಕಾಮಿನಿ ಹೇಳಿದ್ದು ನೆನಹಿಗೆ ಬರುತ್ತದೆ.

" ಸುಮಿತ್ರಾ ನೀನು ಕಾಡುಮೃಗಗಳನ್ನು ನಂಬು. ಆದರೆ ಗಂಡಸರನ್ನು ಅದೆಂದಿಗೂ ನಂಬಬೇಡ " ಎಂದು ಹೇಳಿದ್ದು

ಹಾಳಾಗಿ ದಿಕ್ಕಿಲ್ಲದೆ ದೇಹ ಮಾರುವದಕ್ಕೆ ಸಿದ್ಧಳಾದ ಒಬ್ಬ ತರುಣಿ ಇನ್ನೊಬ್ಬನನ್ನು ಒಬ್ಬ ಗಂಡಸನ್ನು ಉಳಿಸುವಳೇ? ಗಂಡಸರು ಮಾತನಾಡಲು ಚತುರರು. ಅವರು ಸುಲಭವಾಗಿ ಹೆಂಗಸನ್ನು ಮೋಸಗೊಳಿಸುತ್ತಾರೆ. ಮೋಸಗೊಳಿಸಿ ಕೊನೆಗೆ ಅವಳನ್ನು ಕುದಿಯುವ ಸುಣ್ಣದ ಭಟ್ಟಿಯಲ್ಲಿ ನೂಕುತ್ತಾರೆ. ರಂಗನೂ ಇದೇ ರೀತಿ ಹೇಳುತ್ತಿದ್ದನು.

" ನಿರ್ಮಲಾ.... ನೀನಿಲ್ಲದಿದ್ದರೆ ನನ್ನ ಬಾಳಿನಲ್ಲಿ ಉಳಿಯುವದಾದರೂ ಏನು? ಹಾಳು... ಮರುಭೂಮಿ. ನೀನಿರುವಿ ಎಂದೇ ನನ್ನ ಜೀವನ ನಂದನವನವಾಗಿದೆ.... ನನಗೆ ಈ ಹಾಳು ಅಭ್ಯಾಸದ ಪುಸ್ತಕಗಳಲ್ಲಿ ಮನವಿಲ್ಲ... ನಿನ್ನನ್ನು ಬಿಟ್ಟರೆ ನನಗೆ ಏನೂ ಬೇಕಿಲ್ಲ....."

ಹೀಗೆಲ್ಲ ಹೇಳಿದವನೇ ಕೊನೆಗೆ "ನನಗೇನೂ ಅರಿಯದು." ಎಂದೂ ಹೇಳಿದ.

" ಗಂಡಸು ಹೇಳುವದೇ ಹೀಗೆ. ಹೀಗೆಲ್ಲ ಹೇಳದಿದ್ದರೆ ಸ್ತ್ರೀ ಮೋಸ ಹೋಗುವಳೆ...? ಮರುಳಾಗುವಳೆ...? ಪುಂಗಿಯ ನಾದಕ್ಕೆ ಹಾವು ತಲೆ ಹಾಕಿದಾಗ ಮರುಳಾದಾಗ ಅಲ್ಲವೆ ಹಾವುಗಾರ ಅದನ್ನು ಹಿಡಿದು ಅದರ ಹಲ್ಲು ಕಿತ್ತಿ ಸ್ವತಂತ್ರ ಜೀವಿಯನ್ನು ಬುಟ್ಟಿಯಲ್ಲಿಟ್ಟು ತನ್ನ ಹೊಟ್ಟೆ ತುಂಬಿ ಕೊಳ್ಳುವದು ? ಆದರೆ ಜನ ಹೇಳುವದು 'ಹಾವನ್ನು ಎಂದೂ ನಂಬಬೇಡಿರಿ' ಎಂದು."

" ಹಾವಿನಂತೆಯೇ ಸ್ತ್ರೀ. ಗಂಡಸು ತನ್ನ ಸವಿಮಾತಿನ ಪುಂಗಿಯಿಂದ ಮರುಳು ಮಾಡುವ. ತನ್ನ ಅತ್ಯಾಚಾರದಿಂದ ಅವಳ ಹಲ್ಲು ಕಿತ್ತುವ... ಕೊನೆಗೆ ಹೇಳುವದು 'ಸ್ತ್ರೀಯರ ಚರಿತ್ರವನ್ನು ದೇವನು ಕೂಡ ಅರಿಯಲು ಸಾಧ್ಯವಿಲ್ಲ" ಎಂದು. ಹಾಳು ಮಾಡುವ ಗಂಡಸು ಸ್ತ್ರೀಯ ಮೇಲೆ ಕಣ್ಣು ಹಾಕದಿದ್ದರೆ ಅವಳು ಹೀಗೆಲ್ಲ ಕಂಡವರಿಂದ ಹೇಳಿಸಿಕೊಳ್ಳಬೇಕಾಗುತ್ತಿದ್ದಿಲ್ಲ. ಮಾಡುವ ದೆಲ್ಲವನ್ನು ಮಾಡಿ ಕೊನೆಗೆ ಹೇಳುವದು ಸ್ತ್ರೀಯರ ಚರಿತ್ರವನ್ನು ದೇವನಿಂದ ಕೂಡ ಅರಿಯಲು ಸಾಧ್ಯವಿಲ್ಲ' ಎಂದು. ಹೇಗಿದೆ ಗಂಡಸಿನ ಕರಾಳ ಕೃತಿ ? ಆದರೂ ಕೊನೆಗೆ ಆದರ ದೋಷ ಸ್ತ್ರೀ ಮೇಲೆ...ಏಕೆಂದರೆ ಅವಳು ಅಬಲೆ..."

"ದುರ್ಬಲರ ಮೇಲೆಯೇ ಅಲ್ಲವೆ ನಡೆಯುವದು ಬಲಿಷ್ಠರ ಪರಾಕ್ರಮ? ವಿಶ್ವಾಮಿತ್ರನ ತಪಶ್ಚರ್ಯವನ್ನು ಭಂಗಪಡಿಸಿದ ಅಪಖ್ಯಾತಿ ಮೇನಕೆಗೆ. ಆದರೆ ಆವಳನ್ನು ಆ ಕಾರ್ಯಕ್ಕೆ ಕಳುಹಿದ ಇಂದ್ರ ಎಂದಿನಂತೆಯೇ ಸ್ವರ್ಗದ ಅಧಿಪತಿ ! ಇಂದ್ರನಿಲ್ಲದಿದ್ದರೆ ಮೇನಕೆ ವಿಶ್ವಾಮಿತ್ರನ ಹತ್ತಿರ ಸುಳಿಯುತ್ತಿ ದ್ದಳಾದರೂ ಏಕೆ ? ವಿಶ್ವಾಮಿತ್ರನೇನು ಕಾಮನ ಪ್ರತಿಮೂರ್ತಿಯೇ....? ಅನ್ನ ನೀರು ಮನೆ ಮಾರುಗಳನ್ನು ಬಿಟ್ಟು ಆಡವಿಯಲ್ಲಿ ಕುಳಿತ ಆ ಒರಟು ಸನ್ಯಾಸಿಯನ್ನು ಸ್ವರ್ಗದ ಮೇನಕೆಯಲ್ಲ ಭೂಮಿಯ ಯಾವ ಹೆಂಗಸೂ ಮೋಹಿಸಲಾರಳು... ಆದರೂ ಇಂದ್ರನ ಸೇವಿಕೆಯಾಹ, ದಾಸಿಯಾದ ಅವಳು ಆ ಒರಟು ಸನ್ಯಾಸಿಯನ್ನು ಸಂಸಾರಕ್ಕೆಳೆಯುವ ಕಠಿಣ ಕೆಲಸ ವನ್ನು ಮಾಡಲೇಬೇಕಾಯಿತು. ವಿಶ್ವಾಮಿತ್ರ ಸಿಡಿಮಿಡಿಗೊಂಡಿದ್ದರೆ... ಜೀವ ಕಳೆದುಕೊಳ್ಳುತ್ತಿದ್ದಳು ಮೇನಕೆ ಸ್ವರ್ಗದಲ್ಲಿ ಸುಳಿಯುವ ಅವಳಿಗೆ ಇದರ ಅರಿವಿರಲಿಲ್ಲವೇ... ? ಇತ್ತು. ಆದರೂ ಆ ಕಾರ್ಯ ಮಾಡಲೇಬೇ

ಕಿತ್ತು. ಏಕೆಂದರೆ ಅವಳು ದಾಸಿ. ಗಂಡಸಿನ ಗುಲಾಮಳು... ಒಬ್ಬ ಗಂಡಸಿನ ಗುಲಾಮಳಾದ ಅವಳು ಅವನ ಹೇಳಿಕೆಯಂತೆ ಇನ್ನೊಬ್ಬನನ್ನು ಕೆರಳಿಸುವದು....!"

"ಇದರಿಂದ ಅವಳಿಗೆ ದೊರೆತ ಫಲ... ?"

"ವಿಶ್ವಾಮಿತ್ರನ ತಪೋಭಂಗ ಮಾಡಿದವಳೆಂದು ಜಗದಲ್ಲಿ ಅಪಖ್ಯಾತಿ..."

"ಅಪಖ್ಯಾತಿಯನ್ನು ಹೊರುವವಳು ಸ್ತ್ರೀ. ಅದರ ಸೂತ್ರಧಾರ ಪುರುಷ. ತನ್ನ ಕಾರ್ಯಸಾಧನೆಗಾಗಿ ಆತ ಸವಿಮಾತಿನಿಂದ ಸ್ತ್ರೀಯನ್ನು ಮರುಳುಗೊಳಿಸುವ. ಮೋಸಗೊಳಿಸುವ ..." ಎಂದು ಕಾಮಿನಿ ಉರಿದು ಬೀಳುತ್ತಾಳೆ.

ರಂಗನ ವಿಚಾರವನ್ನು ಕಾಮಿನಿಯ ಮಾತಿನ ಒರೆಗಲ್ಲಿಗೆ ಹಚ್ಚಿದಾಗ ಅಸತ್ಯವೆನ್ನಿಸಲಾರದು. ಅಹುದು ಕಾಮಿನಿ ಹೇಳುವದು ಸತ್ಯ... ನಂಬಬಾರದು ಗಂಡಸನ್ನು. ವಿಶ್ವಾಸವಿಡಬಾರದು ಅವರ ಮಾತಿನಲ್ಲಿ ಎನ್ನಿಸುತ್ತದೆ.

ಆದರೆ ಮಾಧವರಾಯರ ಮಾತಿನಲ್ಲಿ ಕೂಡ ಅವಿಶ್ವಾಸವನ್ನು ತಾಳಬೇಕೆ.... ? ಅವರು ಮಾತನಾಡುವಾಗ ಹೃದಯವನ್ನೇ ಹರಿದಿಟ್ಟಂತೆ ಹೇಳುತ್ತಾರೆ. ಹೃದಯದ ಮಾತು ಹೃದಯಕ್ಕೆ ತಲಪುತ್ತದೆ ಎಂಬಂತೆ ಅವರು ಹೇಳುವಾಗ ಅವು ನೇರವಾಗಿ ಹೃದಯವನ್ನು ಪ್ರವೇಶಿಸುತ್ತವೆ.

ಆದರೂ 'ನಾನು ಅವರ ಅಧೋಗತಿಯನ್ನು ತಡೆದಿರುವೆ ಎನ್ನುವದನ್ನು ನಂಬಲು ಆಗುವದಿಲ್ಲ. ನಾನು ಯಾವ ದೃಷ್ಟಿಯಿಂದಲೂ ಜ್ಞಾನಿಯಲ್ಲ. ಅವರೊಡನೆ ಮಾತನಾಡುವದು ಕಡಿಮೆ. ಇಲ್ಲವೇ ಇಲ್ಲ ಎನ್ನುವ ಮಟ್ಟಿಗೆ ಮಾತು ಕಡಿಮೆ. ಅವರೇ ಒಂದು ಸಲ ನಕ್ಕು—

"ನಿನಗೆ ಮಾತುಗಳು ಬರುವದೇ ಇಲ್ಲ ಎಂಬ ಭಾವನೆ ನನಗಾಗಿತ್ತು" ಎಂದು ಹೇಳಿರಲಿಲ್ಲವೇ ?

ಎಂದೂ ಯಾವ ಕಾಲದಲ್ಲಿಯೂ ಮಾತನಾಡದ ಅಜ್ಞಾನಿ ನನ್ನಿಂದ ಅವರು ದಾರಿಗೆ ಹತ್ತುವರೆಂದು ನಂಬುವದಾದರೂ ಹೇಗೆ ?

ಅಥವಾ ಕುಲಕರ್ಣಿಯವರ ಸನ್ನಿಧಾನದಲ್ಲಿ ಕಾಲ ಕಳೆದ ನನ್ನಲ್ಲಿ ಅವರ ದೈವಿಕ ಶಕ್ತಿ ಪ್ರವೇಶಿಸಿ ಹಾಳಾಗುವವರನ್ನು ಹಾದಿಗೆ ಹಚ್ಚುತ್ತಿದೆಯೊ?

ಕುಲಕರ್ಣಿಯವರು....!

ಅವರಲ್ಲಿ ಉಕ್ಕುವ ದೈವಿಕ ಶಕ್ತಿ ಯಾರನ್ನೂ ಕಾಯುತ್ತಿತ್ತು. ಅಂತೆಯೇ ನಾನು ಕೂಡ ಬದುಕಿದೆ. ಆ ಶಕ್ತಿ ನನ್ನನ್ನು ಕಾಯ್ದಿತು. ಆದರೆ....?

ದುರ್ಭಾಗ್ಯಳಾದ ನನ್ನಿಂದ ಅದನ್ನು ಕಾಯ್ದುಕೊಳ್ಳುವದಾಗಲಿಲ್ಲ. ಅಥವಾ ಪತಿತೆಯಾದ ನನ್ನ ಹತ್ತಿರ ಸುಳಿಯಲು ಅದು ನಿರಾಕರಿಸಿತು. ದುರ್ಬಲರಿಂದ ದೇವರನ್ನು ನೋಡಲು ಸಾಧ್ಯವೆ....? ಅವರೇ ಒಂದು ಸಲ ಹೇಳಿದ್ದರು. ಪರಮಾತ್ಮನನ್ನು ನೋಡಲು ಕೂಡ ಶಕ್ತಿ ಬೇಕಾಗುತ್ತದೆ. ಇಲ್ಲದಿದ್ದರೆ ಬೇಕಾಗುವ ಶಕ್ತಿಯನ್ನು ದೊರಕಿಸಿ ಕೊಳ್ಳಬೇಕಾಗುತ್ತದೆ...ಸಹಸ್ರಾರು ಸೂರ್ಯರ ತೇಜಸ್ಸಿನ ತೇಜಪಿಂಡವಾದ ಪರಮಾತ್ಮನನ್ನು ಈ ಐಹಿಕ ಕಂಗಳಿಂದ ನೋಡಲು ಸಾಧ್ಯವೆ....? ನೋಡಲು ಕಣ್ಣು ತೆರೆದರೆ ನೋಡ ಬಯಸುವ ಕಂಗಳು ಒಂದಲ್ಲ ಸಾವಿರಾರು ಜನ್ಮಗಳ ವರೆಗೂ ಅಂಧವಾಗ ಬಹುದು ಆ ತೇಜಸ್ಸಿನಿಂದ ಕುಕ್ಕಿ.... . ಅವನನ್ನು ನೋಡುವದಕ್ಕೆ ನೋಡ ಬಯಸುವವರು ಮೊದಲು ಶಕ್ತಿವಂತರಾಗಬೇಕು. ಬಲಿಷ್ಠರಾಗಬೇಕು... ದೇವ ಸರ್ವಾಂತರ್ಯಾಮಿ....ಎಲ್ಲೆಲ್ಲಿಯೂ ಆತನಿರುವ ಆತನನ್ನು ನೋಡಲು ಸಾಧ್ಯವಿದೆ...... ಮಹಾತ್ಮರಿಗೆ ಎಲ್ಲೆಲ್ಲಯೂ ಕಾಣುವ ದೇವ ಬ್ರಹ್ಮ.... ಪರಮಾತ್ಮ...ಅವರಿಗೆ ಕಲ್ಲು ಕಾಣದು ಮಣ್ಣು ಕಾಣದು. ಮನೆ ಕಾಣದು ಮರಕಾಣದು. ಮನುಷ್ಯ ಕಾಣಲಾರ....ಪ್ರಾಣಿ ಕಾಣಲಾರದು...ಎಲೆಲ್ಲಿಯೂ ಕಾಣುವ ಅವನೇ.... ಅವ....ದೇವ....ಪರಮಾತ್ಮ....ಪರಬ್ರಹ್ಮ..."

ಅರಳಿದ ಹೂಗಳಲ್ಲಿ ಮಗುವಿನ ನಗೆಯಲ್ಲಿ ಮನುಷ್ಯನ ಕ್ಷುಬ್ಧತೆಯಲ್ಲಿ ಎಲ್ಲೆಲ್ಲಿಯೂ........ಎಲ್ಲದರಲ್ಲಿಯೂ... ಸುಖದಲ್ಲಿ........ದುಃಖದಲ್ಲಿ. ನಗೆಯಲ್ಲಿ ಆನಂದದ ರೂಪದಿಂದ. ಅಳುವಿನಲ್ಲಿ ಕಣ್ಣೀರಿನ ರೂಪದಿಂದ. ಕೋಪದಲ್ಲಿ ಉಗ್ರರೂಪದಿಂದ......."

ಹೀಗೆಂದು ಹೇಳುವಾಗ 'ಅವರು ಹೇಳುತ್ತಿರುವದು ಪುಸ್ತಕದಲ್ಲಿ ಬರೆದುದಲ್ಲ ಪ್ರತ್ಯಕ್ಷ ನೋಡಿದ್ದು ಎನ್ನಿಸುತ್ತಿತ್ತು. ಅವರ ಮುಖದಲ್ಲಿ ತೇಜಸ್ಸು ಉಕ್ಕುತ್ತಿತ್ತು ಅವರನ್ನು ನೋಡುತ್ತ ಕುಳಿತಿರುವದೇ ಒಂದು ಹಬ್ಬದಂತೆ, ಇರುತ್ತಿತ್ತು.

ದುರ್ದೈವಿ ನಾನು ನನ್ನದೇ ಎಂದು ಬಂದುದು ನನಗಾಗಿ ಉಳಿಯಲಿಲ್ಲ. ಅದು ನನ್ನ ಪಾಪಕ್ಕೆ ದೊರೆತ ಶಿಕ್ಷೆಯಾಗಿರಬಹುದು.

ಪಾಪಕ್ಕೆ ಶಿಕ್ಷೆಯಾಗಲಿ. ಅದಕ್ಕೆ ನನ್ನ ವಿರೋಧವಿಲ್ಲ. ಪಾಪಕ್ಕೆ ಶಿಕ್ಷೆಯಾಗಲೇ ಬೇಕು. ಶಿಕ್ಷೆಯಾಗಿಯೇ ತೀರುವದು. ಆದರೆ ಈ ಶಿಕ್ಷೆ ಬೇಡವಾಗಿತ್ತು. ಸಹಸ್ರ ಜನ್ಮದ ನನ್ನ ಪಾಪ ತೊಳೆಯುವದಕ್ಕೆ ಅವತರಿಸಿದ ಗಂಗೆಯಂತಿದ್ದ ಅವರು ನನ್ನಿಂದ ದೂರಾಗಬಾರದಿತ್ತು.

ಆದರೂ ನಾನು ದೊರಕಿಸಿದ್ದುದು ಕಡಿಮೆಯಲ್ಲ. ನನ್ನ ಪೂರ್ವ ಜನ್ಮದ ಪುಣ್ಯವೇ ಮೂರ್ತಿ ಮತ್ತಾಗಿ ನನ್ನ ಹತ್ತಿರ, ಜೊತೆಯಲ್ಲಿ ಕೆಲವು ದಿನವಾದರೂ ನೆಲಸಿತ್ತು. ಅದರಿಂದ ನನ್ನ ಪಾಪ ತೊಳೆದು ಹೋಗದಿದ್ದರೂ ಕಡಿಮೆಯಾಗಿದೆ. ಇಲ್ಲದಿದ್ದರೆ ಮಾಧವರಾಯರಂತಹರು ನನ್ನನ್ನು ಸಲಹುವದಕ್ಕೆ ಬರುತ್ತಿರಲಿಲ್ಲ

ಹೆಣ್ಣಿನ ದೇಹಕ್ಕೆ ಆಶೆ ಪಡುವವರು ಸಾಕಷ್ಟು ಜನ. ಆದರೆ ಎಲ್ಲರೂ ರಂಗನಂತಹರು....ಹೆಣ್ಣು ಎಂದರೆ ಅವರಿಗೆ ತೋಟದಲ್ಲಿ ಬೆಳೆದ ಸಕ್ಕರೆ ಕಬ್ಬು. ಸಿಕ್ಕರೆ ಸಾಕು ಸುಲಿದು ಕೊಂಡು ತಿನ್ನುವದು, ರಸ ಅವರ ಹೊಟ್ಟೆಯೊಳಗೆ ಸಿಪ್ಪೆ ಬೀದಿಗೆ

"ಅಂತಹರಿಂದಲೇ ತುಂಬಿದೆ" ಎಂದು ಕಾಮಿನಿಯ ಕೋಪ. ಕ್ಷಣ ಕ್ಷಣಕ್ಕೂ ಉರಿದು ಬೀಳುತ್ತಾಳೆ. ಹೇಳುತ್ತಾಳೆ "ಸುಮಿತ್ರಾ...ನನ್ನಲ್ಲಿ ದುರ್ಗೆಯ ಶಕ್ತಿಯಿಲ್ಲ. ಇದ್ದರೆ ಎಲ್ಲ ಗಂಡಸಜಾತಿಯ ರಕ್ಕಸರನ್ನು ನಿರ್ನಾಮ ಮಾಡುತ್ತಿದ್ದೆ, ಎಂದು.

ಅವಳು ಇಷ್ಟೊಂದು ಕೋಪಿಸಬಾರದು ಎಂದು ನನಗನ್ನಿಸುತ್ತದೆ. ಹಾಗೆ ಅವಳಿಗೆ ಕೂಡ ಅನ್ನಿಸದೆ ಇಲ್ಲ. ಅವಳು ಹಾಗೆ ಒಪ್ಪಿಕೊಳ್ಳುತ್ತಾಳೆ. "ಏನು ಮಾಡಲಿ ಸುಮಿತ್ರಾ ನಾನು ಹೀಗೆಲ್ಲ ಕೋಪಿಸುವದು ಯೋಗ್ಯವಲ್ಲ. ಆದರೆ ನಿತ್ಯವೂ ಅದನ್ನೇ ಕಣ್ಣುಗಳು ಕಾಣುತ್ತಿವೆ ಅದನ್ನೇ ನೋಡುವದು ಈ ಕಂಗಳಿಗೆ ಪರಿಪಾಠವಾಗಿದೆ... ನಾನು ಬೇಡವೆಂದು ಅದನ್ನು ಮರೆಯಲು ಪ್ರಯತ್ನಿಸುವೆ. ಆದರೆ ಅದೇ ಕೃತಿ ಕಣ್ಣೆದುರು ಮತ್ತೆ ಬಂದಾಗ ಹೃದಯ ಸಿಡಿದೇಳುತ್ತದೆ, ಸಿಡಿಮಿಡಿಗೊಳ್ಳುತ್ತದೆ. ಎಲ್ಲಿ ನೋಡಲಿ ಅದೇ ಅತ್ಯಾಚಾರ ಕಾಣುತ್ತಿದೆ.... ಅದಕ್ಕಾಗಿ ಕೋಪ....ಎಂದು ಹೇಳುತ್ತಾಳೆ.

ಅಹುದು. ಎಲ್ಲಿ ನೋಡಿದಲ್ಲಿ ಅಂತಹ ಜನರೇ ತುಂಬಿದ್ದು ನಿಜ. ಯಾರನ್ನೇ ನೋಡಲಿ ಅವರ ಹರಿದು ತಿನ್ನುವ ಕಂಗಳೇ ಅವರ ವ್ಯಕ್ತಿತ್ವದ ಪ್ರತೀಕವಾಗಿ ನುಗ್ಗಿಬರುತ್ತವೆ. ಅದಕ್ಕೆ ಪ್ರತೀಕಾರ ಮಾಡಲು ಸಾಧ್ಯ ವಿಲ್ಲ. ಉದಾಸೀನತೆಯೊಂದೇ ಅದಕ್ಕೆ ಮದ್ದು. 'ನೋಡುವವರು ನೋಡಿ ಕೊಂಡು ಹೋಗಲಿ' ಎಂದು ನಾವು ನೋಡುವದನ್ನು ಬಿಡಬೇಕು. ಅದೊಂದೇ ಅದಕ್ಕೆ ಉಪಾಯ.

ಅಲ್ಲದೆ ಆಶೆಯಿಲ್ಲದಿದ್ದರೆ ಎಲ್ಲರೂ ದೇಹಕ್ಕೆ ಬೂದಿ ತಳೆದ ಸನ್ಯಾಸಿ ಗಳಾಗುತ್ತಿದ್ದರು. ಹಣದ ಆಶೆ ಎಂದು ದುಡಿಯಲು ಸಿದ್ಧರಾಗುತ್ತಾರೆ. ಹೆಣ್ಣಿಗಾಗಿ ಆಶೆ ಎಂದು ಸಂಸಾರಕ್ಕೆ ಸಿದ್ಧರಾಗುತ್ತಾರೆ. ಅದುವೇ ಆಶೆ ಯಾರಲ್ಲಿಯೂ ಇಲ್ಲವಾದರೆ....?

ಯಾರು ಯಾರನ್ನೂ ಮಾತನಾಡಿಸರು. ಪರೋಪಕಾರ ಬುದ್ಧಿಯಿಂದ ಇನ್ನೊಬ್ಬರಿಗೆ–ಅದರಲ್ಲಿಯೂ ಸ್ತ್ರೀಗೆ ನೆರವು ನೀಡುವವರೆಷ್ಟು ಜನ....?

'ಇಲ್ಲವೇ ಇಲ್ಲ' ಎನ್ನುವ ಮಟ್ಟಿಗೆ ಸಂಖ್ಯೆ ಕಡಿಮೆ. ನಾನು ಕಂಡವ ರಲ್ಲಿ ಕುಲಕರ್ಣಿಯವರನ್ನು ಬಿಟ್ಟರೆ ಮತ್ತೆ ಯಾರೂ ಇಲ್ಲ. ನನ್ನನ್ನುಳಿದರೆ ಉಳಿದವರು ಕುಲಕರ್ಣಿಯಂತಹರನ್ನು ಕಾಣಬಹುದೋ ಎಂಬ ಸಂಶಯು ಕೂಡ.

ಎಲ್ಲರೂ ಕುಲಕರ್ಣಿಯವರಾದರೆ .: ?

ಜಗ ನಡೆಯುವದು ಹೇಗೆ....? ಎಲ್ಲರೂ ಸನ್ಯಾಸಕ್ಕೆ ಜೋತು ಬಿದ್ದರೆ ಜಗ ಮುಂದುವರಿಯಬೇಡವೆ....? ಜಗ ಮುಂದುವರಿಯ ಬೇಕಾದರೆ ಅವಶ್ಯ ವಿದ್ದುದು ಸಂಸಾರ. ಅಲ್ಲದೆ ಸನ್ಯಾಸವಲ್ಲ. ಆದರೆ ಕುಲಕರ್ಣಿಯವರು ಸಂಸಾರ ಸನ್ಯಾಸಗಳಲ್ಲಿ ಭೇದವನ್ನೇ ಮಾಡುತ್ತಿರಲಿಲ್ಲ. ಅವರು ಹೇಳುವದು.

"ಸಂಸಾರ ಸನ್ಯಾಸ ಎರಡೂ ಬೇರೆ ಎಂದು ಭಾವಿಸುವದು ಶುದ್ಧ ತಪ್ಪು. ನಿಜವಾದ ಸನ್ಯಾಸಿ ಸಂಸಾರಿಯಾಗಿಯೇ ಇರುತ್ತಾನೆ. ಸನ್ಯಾಸದ ಸೋಗಿ ಮಾತ್ರ ಸಂಸಾರದಿಂದ ದೂರ ಇರುತ್ತಾನೆ. ಏಕೆಂದರೆ ಅವನ ಸನ್ಯಾಸ ಸಂಸಾರಿಕ ಕಷ್ಟಗಳ ಹೆದರಿಕೆಯಿಂದಾಗಿ ಇರುತ್ತದೆ. ಅಲ್ಲದೆ ವಿರಕ್ತಿ ಯಿಂದಾಗಿ ಅಲ್ಲ. ಸಂಸಾರದಲ್ಲಿದ್ದುಕೊಂಡೇ ಅಲ್ಲವೆ ಕರ್ದಮ ವಶಿಷ್ಠ, ಆಗಸ್ತ್ಯ ಅತ್ರಿ ಮುಂತಾದವರು ಸಿದ್ಧಿಯನ್ನು ಸಾಧಿಸಿದುದು.? ಅವರು ಸನ್ಯಾಸ

ಬೆಲ್ಲಿ ಯಾರಿಗೆ ಕಡಿಮೆ...? ಆದರೆ...ಇಂದಿನ ಸಂಸಾರ ಕಾಮದ ಕೂಪ ವಾಗಿದೆ. ದೈಹಿಕ ಸುಖಕ್ಕಾಗಿ ಪತ್ನಿ ಬೇಕು. ಅಲ್ಲದೆ ಪಾರಮಾರ್ಥಿಕ ಸಾಧನೆ ಗಾಗಿ ಅಲ್ಲ....'ದೈಹಿಕ ಜೀವನವೇ ಬೇಡ' ಎಂದು ನಾನು ಹೇಳುದಿಲ್ಲ. ನೀರಡಿಸಿದಾಗ ನೀರು ಕುಡಿಯುವಂತೆ ಇರಬೇಕು ಆ ಜೀವನ. ಅಲ್ಲದೆ ನೀರಿ ಗಾಗಿಯೇ ಬದುಕುವಂತೆ ಇರಕೂಡದು......." ಎಂದು.

ಇದರಂತೆ ನಡೆಯುವವರು ಎಷ್ಟುಜನ....? ಒಬ್ಬರಾದರೂ ಇರುವರೆ..? ಇಂತಹರಿಂದಲೇ ಜಗ ತುಂಬಿದರೆ ಕಾಮಿನಿಯ ಕೋಪಕ್ಕೆ ಆಸ್ಪದವೆಲ್ಲಿ...? ನಾನು ಈ ಮಟ್ಟಕ್ಕೆ ಇಳಿಯುತ್ತಿದ್ದೆನಾದರೂ ಎಲ್ಲಿ ?........ಮಾಧವರಾಯರ ಜೊತೆಗೆ ನನ್ನ ಸ್ನೇಹವಾದರೂ ಬೆಳೆಯುತ್ತಿತ್ತೆಲ್ಲಿ ?

ನನ್ನ ಮಾಧವರಾಯರ ಮಧ್ಯದ ಸ್ನೇಹದ ಸಂಬಂಧವೆಂತಹದು....?
ದೈಹಿಕವೆ...? ದೈ ಹಿ ಕ ವೆ ...?
'ಇಲ್ಲ' ಎನ್ನಿಸುತ್ತದೆ ಅವರ ಮಾತುಕೇಳಿದಾಗ.
ಅಹುದು ಎನ್ನಿಸುತ್ತದೆ ವಿಚಾರಮಾಡಿದಾಗ.

ಯಾವುದು ಸತ್ಯ...?

ಎರಡೂ ಸತ್ಯ. ಎರಡೂ ಅಸತ್ಯ.

ನನಗೆ ಈ ತರುಣದೇಹ ವಿಲ್ಲದಿದ್ದರೆ ನನ್ನವರ ಪರಿಚಯವಾಗುತ್ತಿರಲಿಲ್ಲ. ಆದಕ್ಕಾಗಿ ಈ ಸಂಬಂಧ ದೈಹಿಕ. ಆದರೆ ಸಂಬಂಧದ ಹಿಂದಿನಿಂದ ಬೆಳೆದು ಬಂದ ಸ್ನೇಹ ದೈಹಿಕ ವಿಚಾರವನ್ನು ಮರೆಯಿಸಿ ಹೃದಯಕ್ಕೆ ಬಂದು ತಲು ಪಿದೆ. ಆದಕ್ಕಾಗಿ 'ದೈಹಿಕವಲ್ಲ.'

ಅಲ್ಲದೆ ಈ ಸತ್ಯಾಸತ್ಯಗಳ ವಿಚಾರದಲ್ಲಿ ತಲೆಕೆಡಿಸಿಕೊಳ್ಳುವದರಿಂದ ಆಗುವ ಲಾಭವೇನೂ ಇಲ್ಲ. ಅವರಿಗೂ ಒಂದು ಸಂಸಾರವಿದೆ. ಮಕ್ಕಳು ಇವೆ. ಆದರೂ ನನ್ನವರ ಸ್ನೇಹವಿದೆ. ನನ್ನವರ ಸ್ನೇಹ ಬಹಳ ಮುಂದು ವರೆದಿದೆ. ಪತ್ನಿಗಿಂತ ಪ್ರಿಯಳಾಗಿರುವೆ ನಾನಿಂದು ಅವರಿಗೆ.

ಅವರೇ ಹೇಳುತ್ತಾರೆ "ನಿನ್ನಿಂದಾಗಿ ನಾನು ಹಾಳಾಗದೆ ಉಳಿದಿದೆ. ಇಲ್ಲದಿದ್ದರೆ ನಾನು ಹಾಳಾಗುತ್ತಿದ್ದೆ. ನೀಚ ಕೀಳು ಪ್ರಾಣಿಯಾಗುತ್ತಿದ್ದೆ." ಎಂದು

ಏಕೆಂದರೆ ಪತ್ನಿಯಿಂದ ಅವರ ಅಧಃಪತನವನ್ನು ತಡೆಯುವದಾಗ ಲಿಲ್ಲವೆ........? ಅವಳಿಂದ ಆಗದಿದ್ದುದು ನನ್ನಿಂದಾದುದಾದರೂ ಹೇಗೆ....? ಅವಳ ಜೊತೆಗೆ ಅವರು ವರ್ಷಾನುವರ್ಷ ಸಂಸಾರ ಮಾಡಿದ್ದಾರೆ. ಅವಳ ಸುಖ-ದುಃಖದಲ್ಲಿ ಪಾಲುಗಾರರಾಗಿದ್ದಾರೆ. ಆದರೂ ಅವಳಿಂದ ಅವರ ದುರ್ಗತಿಯನ್ನು ತಡೆಯಲು ಸಾಧ್ಯವಾಗಲಿಲ್ಲವೇ....?

ಅವರ ಮಾತನ್ನು ನಂಬಬಹುದೆ ...? ಅವರ ಮಾತನ್ನು ನಂಬಿದಾಗ ನನ್ನಲ್ಲಿ ಗರ್ವ ಮೂಡುತ್ತದೆ— "ನಾನೂ ಸಂಸಾರಕ್ಕೆ ಯೋಗ್ಯವಿದ್ದ ಸ್ತ್ರೀ' ಎಂದು. ಸಂಸಾರವೆಂದರೆ ಬರಿಕಾಮಜೀವನವಲ್ಲ. ಸಮರಸಜೀವನ. '.... ಸಮರಸ....ಜೀವನ ...

'ಸಮರಸವೇ ಜೀವನ, ಸಂಸಾರ.' ಅಂತಹ ಜೀವನ ನನ್ನದಿದೆ. ನಾನು ಹಾಳಾಗಿದ್ದರೂ ಕೂಡ ಅಂತಹ ಜೀವನವನ್ನು ದೊರಕಿಸಿರುವೆ. ಎಂದಮೇಲೆ ನಾನು ನಿರುಪಯೋಗಿ ಸ್ತ್ರೀಯಲ್ಲ...ನನ್ನಲ್ಲಿಕೂಡ ಅಹಲ್ಯೆ, ಸಾವಿತ್ರಿ ಸೀತೆಯರಾಗುವ ಯೋಗ್ಯತೆಯಿದೆ....'ಈ ಯೋಗ್ಯತೆ ಇದೆ' ಎಂದು ತೋರಿಸಿ ಕೊಡುವದಕ್ಕೆ ಕಾರಣರು ಮಾಧವರಾಯರು.

ನಿಜ. ಮಾಧವರಾಯರು. ಅವರ ನನ್ನ ಸ್ನೇಹ ಉಂಟಾಗಿರದಿದ್ದರೆ...? ನಾನು ಕಂಡವರ ಕೈಯಲ್ಲಿ ಬಿದ್ದಿದ್ದರೆ....? ಕಂಡ ರಂಗನಂತಹ ಕಾಮಿಗಳ ಕೈಯಲ್ಲಿ ಸಿಕ್ಕು ಜಿಬ್ಬಾಗಿದ್ದರೆ....?

ಹಾಳಾಗಿ ಹೋಗುತ್ತಿದ್ದೆ. ಸೀತೆ, ಸಾವಿತ್ರಿ, ಅಹಲ್ಯೆಯಾಗುವ ಯೋಗ್ಯತೆ ಧೂಳಿಗೂಡುತ್ತಿತ್ತು.

ಯಾವ ಸ್ತ್ರೀಯಲ್ಲಿಯೂ ಸೀತೆ ಸಾವಿತ್ರಿಯರಾಗುವ ಶಕ್ತಿ ಸುಪ್ತವಾಗಿ ರುತ್ತದೆ. ರಾಮನಂತಹ ಪತಿ ದೊರಕಿದನೆಂದೇ ಸೀತೆ ನಿತ್ಯ ಪೂಜ್ಯಳಾದಳು. ಸತ್ಯವಾನನಂತಹ ಆದರ್ಶ ಪ್ರೇಮಿ ಸಾವಿತ್ರಿಗೆ ದೊರಕಿದ. ಅಂತೆಯೇ ಯಮನೊಂದಿಗೆ ಹೋರಾಡುವ ಶಕ್ತಿ ಸಾವಿತ್ರಿಯಲ್ಲಿ ಉದ್ಭವಿಸಿತು.

ಯಾವ ಸ್ತ್ರೀಯೂ ಜನ್ಮದ ಆರಂಭದಿಂದಲೇ ಸೀತೆ ಸಾವಿತ್ರಿಯರಾಗಿರು ವದಿಲ್ಲ. ಸುತ್ತಲಿನ ವಾತಾವರಣ, ಸಹಾಯಕ ಶಕ್ತಿಯ ನೆರವು ದೊರೆತು ಬೆಳೆದರೆ ಅವರೂ ಆದರ್ಶರಾಗುವರು. ಆದರ್ಶತೆ ಯಾವುದೇ ಒಂದು ಪೌರಾ ಣಿಕ ಅಥವಾ ಅರ್ವಾಚೀನ ವ್ಯಕ್ತಿಯ ಸೊತ್ತಲ್ಲ. ಸ್ತ್ರೀ ಭೂಮಿ ಇದ್ದಂತೆ

ನಿರ್ಲಕ್ಷ್ಯಮಾಡಿ ಬಿಟ್ಟರೆ ಬೆಳೆದು ಅಡವಿಯಾಗಿ, ಕಟ್ಟಡವಿಯಾಗಿ ಕ್ರೂರ ಪ್ರಾಣಿಗಳಿಗೆ ಆಶ್ರಯವಾಗುತ್ತದೆ. ಕೊಂಚ ಶ್ರಮವಹಿಸಿ ಉತ್ತಿ ಬಿತ್ತಿದರೆ ಅದು ಸಾವಿರ ಜನಕ್ಕೆ ಅನ್ನ ಕೊಡುವ ಭೂಮಿ ತಾಯಿಯಾಗುವದು....

ನನ್ನನ್ನೂ ಮಾಧವರಾಯರು ಮುಂದೆ ಕರೆಯದಿದ್ದರೆ....? ಕಾಮಿನಿಯ ಕರುಣೆಯಿಲ್ಲದಿದ್ದರೆ....? ಕುಲಕರ್ಣಿಯವರ ಕಣ್ಣಿಗೆ ನಾನು ಬಿದ್ದಿರದಿದ್ದರೆ...?

ಒಂದರ ಹಿಂದೆ ಇನ್ನೊಂದು ಪ್ರಶ್ನೆ. ಅದಕ್ಕೆ ಹೊಂದಿದ ಮತ್ತೊಂದು ಪ್ರಶ್ನೆ....ಪ್ರಶ್ನೆಗಳ ಮಾಲೆಯೆ ತಲೆ ಕೆಳಗೆ ಮಾಡಿದ ಕಾಮನ ಬಿಲ್ಲಿನಷ್ಟು ದೊಡ್ಡದಾಗುವದು. ಆಗಸದಿಂದ ಆರಂಭವಾಗಿ ಆಗಸಕ್ಕೆ ತಲುಪುವದು—ಮಧ್ಯ ಸಮುದ್ರ ಸ್ನಾನ ಮಾಡಿ........

ಆದರೆ ಆವೆಲ್ಲ ಪ್ರಶ್ನೆಗಳಿಗೆ ಉತ್ತರ ಮಾತ್ರ ಒಂದು. ಆನೆರಡೂ ಅಂಚಿಗಳಿಗಂಟಿದ ಆಕಾಶದಂತೆ.

ಪ್ರಾರಬ್ಧ....ನನ್ನ ಪ್ರಾರಬ್ಧ.

ನನ್ನ ಪ್ರಾರಬ್ಧ ಎಲ್ಲರಂತೆಯೇ ಇದ್ದರೆ....? ಹೆತ್ತವರಿಂದ ದೂರಾಗಿ ಹೊಂದಿಕೊಂಡವನ ಮನೆ ಸೇರಿ ನಾನೂ ತಾಯಿಯಾಗಿ ನನ್ನ ಮಕ್ಕಳನ್ನು ಸಂಸಾರಕ್ಕೆ ಹಚ್ಚುವ ಸ್ತ್ರೀಯಾಗುತ್ತಿದ್ದೆ.

ನನ್ನ ಪ್ರಾರಬ್ಧವೂ ಒಳ್ಳೆಯದಿದ್ದರೆ ರಂಗನೊಂದಿಗೆ ಸಂಸಾರ ಮಾಡಿಕೊಂಡು ಈಗಾಗಲೇ ಬೆಳೆದ ಮಗುವಿನ ಚಲ್ಲಾಟವನ್ನು ನೋಡುತ್ತ ನಗುತ್ತಿದ್ದೆ, ಆನಂದದಿಂದ ನಲಿಯುತ್ತಿದ್ದೆ.

ನನ್ನ ಪ್ರಾರಬ್ಧವೂ ಕೆಟ್ಟರದಿದ್ದರೆ ನಾನೂ ಕುಲಕರ್ಣಿಯವರಂತಹ ಸಾಧು ಮಹಾನುಭಾವರ ಮಡದಿಯಾಗಿ ಅವರ ಪಾರಮಾರ್ಥ ಸಾಧನೆಯಲ್ಲಿ ನೆರವಾಗಿ ಅವರ ಅರ್ಧಾಂಗಿಯಾಗಿ ಅವರೊಡನೆ ವಶಿಷ್ಠನ ಅರುಂಧತಿಯಾಗುತ್ತಿದ್ದೆ.

ನನ್ನ ಪ್ರಾರಬ್ಧವೂ ಸರಿಯಿದ್ದರೆ ನಾನೂ ಮಾಧವರಾಯರಂತಹ ಸದ್ಗುಣಿಗಳ ಪತ್ನಿಯಾಗಿ ಅವರ ಬಾಳಿನಲ್ಲಿ ಅವರ ಸುಖ ದುಃಖದಲ್ಲಿ ಪಾಲುಗಾರ್ತಿಯಾಗಿ ಮುತ್ತೈದೆಯಾಗಿರುತ್ತಿದ್ದೆ.

ಆದರೆ ಇದಾವುದೂ ಜರುಗಲಿಲ್ಲ. ಅದಕ್ಕಾಗಿ ಮನ ದುಃಖಿಯಾಗು ತ್ತಿದೆ. ದುಃಖದಲ್ಲಿಯೂ ಸುಖದಲ್ಲಿಯೂ ಮಾಧವರಾಯರಂತಹ ಸದ್ಗುಣಿಗಳು ಸ್ನೇಹಿಗಳಿರುವರೆಂದು.

ಅವರೇನೋ ಹೇಳುತ್ತಾರೆ " ನೀನು ಪತ್ನಿಗಿಂತ ಯಾವುದರಲ್ಲಿಯೂ ಕಡಿಮೆಯಿಲ್ಲ. " ಎಂದು.

ಇದರ ಅರ್ಥ ' ನೀನು ಪತ್ನಿಯಲ್ಲ.' ಎಂದೇ ಅಲ್ಲವೆ...?

ಆಹುದು ನಾನು ಪತ್ನಿಯಲ್ಲ. ಆದರೆ ಪತ್ನಿಯಿಂದಾಗದ ಕಾರ್ಯವನ್ನು ನಾನು ಮಾಡಿರುವೆನಲ್ಲವೆ....?

ಕೀಳು ನೀಚರಾಗಿ ಹಾಳಾಗುವವರನ್ನು ಸದ್ಗುಣಿ ಮಾಡಿರುವೆನಲ್ಲವೆ ? ಇದು ಪತ್ನಿಯು ಕಾರ್ಯವಲ್ಲವೆ ?

ಪತ್ನಿ ಎಂದರೆ ಏನು...? ಗಂಡನ ಹೆಸರಿನ ಒಂದೆರಡು ಬಂಗಾರದ ತಾಳಿಗಳನ್ನು ಕೊರಳಿಗೆ ಎದುರಾಗುವಂತೆ ಕಟ್ಟಿಕೊಂಡವಳೇ ಪತ್ನಿಯೆ...? ಪತಿಯ ಕಷ್ಟ ಸುಖದಲ್ಲಿ ಏರಿಳಿತದಲ್ಲಿ ತಾರುಣ್ಯ ವೃದ್ಧಾಪ್ಯದಲ್ಲಿ ಒಂದಾಗಿ ಒಂದೇ ಜೀವವಾಗಿ ಬಾಳಿನ ರಥವನ್ನು ಮುಂದೆ ನಡೆಸಿಕೊಂಡು ಹೋಗುವವಳು ಪತ್ನಿ ಅಲ್ಲವೆ....?

ಅಂತಹ ಕಾರ್ಯವನ್ನು ನಾನು ಮಾಡಿರದಿದ್ದರೂ ಅಂತಹ ಇಚ್ಛೆ ನನ್ನಲ್ಲಿಲ್ಲವೆ....? ಅವರಿಗೆ ಕಷ್ಟ ಒದಗುವದು ಬೇಡ. ಒಂದು ವೇಳೆ ಒದಗಿದರೆ ನೀರು ಕುಡಿದು ಅವರ ಸೇವೆ ಮಾಡುವೆ. ಅವರ ವೃದ್ಧಾಪ್ಯದಲ್ಲಿ ನಾನು ತರುಣಿಯಾದರೂ ಕೂಡ ಗಾಂಧಾರಿಯಾಗಿ ಅವರ ಸೇವೆ ಮಾಡುವೆ.

'ಪತ್ನಿ' ಎನ್ನುವ ಶಬ್ದಕ್ಕಿಂತ 'ಪತ್ನಿಯ ಕೃತಿ'ಗೆ ಅಲ್ಲವೆ ಮಹತ್ವವಿರಬೇಕಾದುದು....? ಅಲ್ಪಾವಧಿಯಲ್ಲಿಯೇ ನಾನು ಅವರಿಂದ ಪ್ರಶಂಸೆಯನ್ನು ಪಡೆದಿಲ್ಲವೇ...? ಪತ್ನಿಗೆ ಕೂಡ ಮಾಡಲಾಗದ ಕಾರ್ಯವನ್ನು ನಾನು ಮಾಡಿರುವೆನೆಂದು ಅವರೇ ಮುಕ್ತಕಂಠದಿಂದ ಹೊಗಳುವದಿಲ್ಲವೇ ?

ಆ ಹೊಗಳಿಕೆ ನಿಜವೆ....? ಅವನ್ನು ನಂಬಬೇಕೆ ?

ನಾನು ಸಂಶಯವನ್ನು ತಾಳುವದಾದರೂ ಏಕೆ....? ನನ್ನ ಕೃತಿಯಲ್ಲಿ ಕೊಂಕಿಲ್ಲದಾಗ ನಾನು ಸಂಶಯ ತಾಳಿದರೆ ನನ್ನ ಕೃತಿಯಲ್ಲಿ, ಆಚರಣೆಯಲ್ಲಿ ಕೊಂಕಿದೆ ಎನ್ನುವ ಅರ್ಥವಲ್ಲವೆ....?

ಅಂತಹ ಕೊಂಕು ಇದೆಯೆ....?

ಇಲ್ಲ. ನಿಶ್ಚಯವಾಗಿಯೂ ಇಲ್ಲ. ಅದನ್ನು ಹೇಳುವದಕ್ಕೆ ಸಮರ್ಥರು ನಾನಲ್ಲದೆ ಇನ್ನಾರೂ ಅಲ್ಲ. ವ್ಯಕ್ತಿಯಲ್ಲಿ ಅಡಗಿದ ಯಾವ ಭಾವನೆಗಳೂ ವ್ಯಕ್ತಿಯಿಂದ ಮರೆಮಾಚಲಾರವು. ನಾನೇನಿರುವೆ ಎನ್ನುವದು ನನಗೆ ಗೊತ್ತಿದೆ. ಅದನ್ನು ಪೂರ್ಣವಾಗಿ ಅರಿತಿರುವೆ. ಅವರ ಮಾತಿಗಾಗಿ ತಾಳಿದ ಸಂಶಯವೊಂದನ್ನುಳಿದರೆ ಇನ್ನಾವದೇ ತರದ ಭಾವನೆಗಳು ಕೂಡ ನನ್ನಲ್ಲಿ ಸುಳಿದಿಲ್ಲ.

ನಾನೂ ಉಪ್ಪು ತಿನ್ನುವ ಜೀವಿ. ಸದ್ಗುಣ ದುರ್ಗುಣಗಳು ದೇಹಕ್ಕೆ ಹೊಂದಿ ಬಂದವುಗಳು. "ಯಾವ ಜೀವಿಗಳೂ ಅವುಗಳಿಂದ ಅತೀತ ರಿಲ್ಲ." ಎಂದು ಕುಲಕರ್ಣಿಯವರು ಹೇಳಿಲ್ಲವೆ...? ಅವರ ವಾಕ್ಯ ನನಗೆ ವೇದವಾಕ್ಯ. ಅಹುದು.... ವೇದ ವಾಕ್ಯ.

"ದುರ್ಗುಣಗಳು ಉಪಯೋಗವಾದರೆ ಮಾತ್ರ ಪಾಪ...."

ನಾನೆಂತಹ ದುರ್ಗುಣವನ್ನು ಉಪಯೋಗ ಮಾಡಿಕೊಂಡಿರುವೆ...? ಇಂದಲ್ಲ ನನ್ನ ಆಯುಷ್ಯದಲ್ಲಿಯೇ ನಾನು ಯಾರಿಗೂ ಕೆಡಕನ್ನು ಮಾಡಿಲ್ಲ ... ಮಾಡಲಿಚ್ಛಿಸಿಲ್ಲ...

....ಇಲ್ಲ.... ಹಾಗೆಂದು ಹೇಳಿದರೆ ಪಾಪಿಯಾಗುವೆ.... ನಾನೂ ಕೆಡಕು ಮಾಡಿರುವೆ. ಆದರೆ ಎರಡನೆಯವರಿಗಲ್ಲ. ನನ್ನಿಂದ ನನಗೆ....

ಒಂದು ಬಸಿರಾದುದು. ಇನ್ನೊಂದು ಬಸಿರಿನ ಸಂತಾನವನ್ನು ಕೊಲೆ ಮಾಡಿದುದು.

ಒಂದು ಅಜ್ಞಾನದಿಂದ. ಇನ್ನೊಂದು ಪರಿಸ್ಥಿತಿಯ ಒತ್ತಡದಲ್ಲಿ ಸಿಲುಕಿ ದಾಗಾದ ಅವ್ಯವಹಾರದಿಂದ. ಅವೆರಡಕ್ಕೂ ಈಗಾಗಲೇ ಪ್ರಾಯಶ್ಚಿತ್ತವಾ ಗಿದೆ. ಅವೆರಡನ್ನುಳಿದರೆ ಇನ್ನಾವುದೇ ಪಾಪದ ಕಾರ್ಯ ನನ್ನಿಂದಾಗಿಲ್ಲ. ನಾನು ಮಾಡಿಲ್ಲ....

ನಾನು ಪಾಪಿಯಾಗಿದ್ದರೆ ಕುಲಕರ್ಣಿಯವರ ಸನ್ನಿಧಾನ ದೊರೆಯು ತ್ತಿತ್ತೇ....? ಆದರೆ ಅವರ ಸನ್ನಿಧಾನವೂ ತೊಳೆದು ಹೋಯಿತಲ್ಲ....! ಅದಕ್ಕೆ ಕಾರಣ....?

ನನ್ನ ಪಾಪವೇ ಅದಕ್ಕೂ ಕಾರಣವಿದ್ದಿರಬಹುದು !

ಆದರೆ ಮಾಧವರಾಯರಿಗೆ ನಾನು ಯಾವ ಅಪಾಯ, ಅಪಕಾರ ಮಾಡಿಲ್ಲ. ನನ್ನಿಂದಾವ ದುಷ್ಕೃತ್ಯವೂ ಜರುಗಿಲ್ಲ ಬದುಕಬೇಕೆಂಬಾಸೆ ಯಿಂದ ಅವರ ಸ್ನೇಹಕ್ಕೆ ಸಿದ್ಧಳಾಗಿರುವೆ. ಅಲ್ಲವೆ ಹಣ ಸೆಳೆದು ಅವರಿಗೆ ಬೂದಿ ಬಳಿಯಲಿಕ್ಕಲ್ಲ.

ಹಣವನ್ನೇ ಸೆಳೆಯುವದಾಗಿದ್ದರೆ ಅದೂ ಕಾರ್ಯ ನಾನು ಮಾಡ ಬಹುದಿತ್ತು. ನಾನು ಬೇಡಿದ್ದನ್ನು ಕೊಡುತ್ತಿದ್ದರು. ಬೇಡಿದಷ್ಟು ಕೊಡುತ್ತಿ ದ್ದರು. ಕೊಡುತ್ತಾರೆ ಆದರೆ—

ಆದರೆ ನನಗೆ ಬೇಕಾದುದು ಹಣವಲ್ಲ. ಹಣವನ್ನು ಅಪೇಕ್ಷಿಸಿದರೆ ನಾನು ಪಾಪಿಯಾಗುವೆನು. ಆದರಿಂದ ನಾನು ದುಷ್ಕೃತ್ಯಕ್ಕಿಳಿದಂತಾಗುವದು. ನನ್ನ ದುಷ್ಕೃತಿಗಳಿಂದ ಅವರಿಗೆ ಅನ್ಯಾಯ ಮಾಡದಂತಾಗುನದು....ದುಷ್ಕೃತ್ಯ ಗಳಿಂದನನ್ನಲ್ಲಿ ನೆಲಸಿದ ಸದ್ಗುಣ ಸದ್ಬುದ್ಧಿ ನಾಶ ಹೊಂದುವವು. ನಾನು ಪಾಪಯಾಗುವೆನು...ಪಾಪಿಯಾಗುವನು.

ಪಾಪಿಗೆ ಕೊನೆಗೆ ನರಕ... ಸತ್ತಮೇಲೆ... ಸಾಯುವ ವರೆಗೆ....ಜನ್ಮ ಜನ್ಮಾಂತರಗಳ ವರೆಗೆ

ಅಂತಹ ವಿಚಾರ ತಪ್ಪಿಕೂಡ ಬಂದಿಲ್ಲ. ಬಾರದು....ಬರಕೂಡದು.

ಏಕೆಂದರೆ ನನಗೆ ಬೇಕೆಂಬುದು ಏನೂ ಇಲ್ಲ. 'ಬೇಕು' ಎನ್ನುವದು ಆರಂಭವಾದಾಗ 'ದೊರಕಿಸಬೇಕು' ಎನ್ನುವ ಬುದ್ಧಿ ಉತ್ಪನ್ನವಾಗುತ್ತದೆ. ಸರಿಯಾದ ಮಾರ್ಗದಿಂದ ಬೇಕಾದುದು ದೊರಕದಿದ್ದರೆ— ಉಳಿದ ಮಾರ್ಗ ಗಳ ಶೋಧ ಆರಂಭವಾಗುತ್ತದೆ. ಶೋಧಕ್ಕೆ ತೊಡಗಿದಾಗ ಒಂದಿಲ್ಲ ಒಂದು ಮಾರ್ಗ ದೊರಕುತ್ತದೆ. ಅಲ್ಲಿಂದಲೇ ಅಧಃಪತನದ ದಾರಿ ಮುಂದುವರಿ ಯುತ್ತದೆ.

ನನ್ನ ದಾರಿ ಅದು ಅಲ್ಲವೇ ಅಲ್ಲ ನನ್ನ ದಾರಿ ಅವರು ಹೇಳಿದಂತೆ ಕೇಳುವದು. ಅವರು ಸುಖಿಯಾಗುವಂತೆ ಆಚರಿಸುವದು. ಅವರು ಹಾಳಾ ಗದಂತೆ ಕಾಯುವದು. ದಾರಿ ಬಿಡದಂತೆ ಎಚ್ಚರಿರುವದು. ಅವಶ್ಯ ಕಂಡರೆ ಎಚ್ಚರಿಸುವದು. ಸುಖದಲ್ಲಿ ಅವರೊಡನೆ ಸುಖಿಯಾಗಿರುವದು. ದುಃಖ

ದಲ್ಲಿ ಅವರ ದುಃಖದ ಭಾಗವನ್ನು ಕಸಿದುಕೊಂಡು ಕಡಿಮೆ ಮಾಡಲೆತ್ನಿಸು ವದು....ಅನ್ನವಿದ್ದಾಗ ಅವರೊಡನೆ ಊಟ ಮಾಡುವದು. ಅನ್ನವಿಲ್ಲದಾಗ ಇದ್ದುದನ್ನು ಅವರಿಗೆ ಕೊಟ್ಟು ನೀರಿನಿಂದ ಹೊಟ್ಟೆ ತುಂಬಿಕೊಳ್ಳುವದು.

ಇದರಂತೆ ಆಚರಿಸುವದು ನನ್ನದಾರಿ. ಇದುವೇ ಪತ್ನಿಯ ದಾರಿ. ಪತಿವ್ರತೆಯ ದಾರಿ ಈ ದಾರಿಯಿಂದ ಸಾಗಿದವರೆಲ್ಲರೂ ಸೀತೆಯರು. ಸಾವಿತ್ರಿಯರು. ಮಂಡೋದರಿಯರು.

ಆದರೆ.... ಅವರೆಲ್ಲರೂ ಪತ್ನಿಯರಾಗಿದ್ದರು. ಪತಿಯು ಅವರ ಕೊರ ಳಿಗೆ ಮಾಂಗಲ್ಯ ತೊಡಿಸಿದ್ದನು. ನನ್ನ ಕೊರಳಿಗೆ ಅದಿಲ್ಲ. ಅದನ್ನು ಯಾರೂ ತೊಡಿಸಲಿಲ್ಲ........

ಅಹುದು....ತೊಡಿಸಲಿಲ್ಲ. ಮಾಂಗಲ್ಯ ಧರಿಸಿದ ನಂತರವೇ ಸ್ತ್ರೀ ಪತ್ನಿ ಯಾಗುವಳೆ....? ಕಾಮಿನಿ ಹೇಳುತ್ತಾಳೆ "ಅದೆಲ್ಲವೂ ಭ್ರಮೆ. ಅಥವಾ ಬಾಹ್ಯಾಡಂಬರ." ಎಂದು.

ಕಾಮಿನಿಯ ವಿಚಾರ ಈ ವಿಷಯದಲ್ಲಿ ವಿಚಿತ್ರವಾದರೂ ನನಗೆಮಾತ್ರ ಸತ್ಯವೆನಿಸುತ್ತದೆ—

"ವೈವಾಹಿಕ ವಿಧಿ ಮಾಂಗಲ್ಯ— ಎಲ್ಲವೂ ಬಾಹ್ಯಾಡಂಬರ........ ವಿವಾಹದ ಕಾಲದಲ್ಲಿ ಹಸೆಯ ಮೇರೆ ನಿಂತವರಿಬ್ಬರೂ 'ಪತಿ ಪತ್ನಿ' — 'ಸತಿ ಪತಿ' ಗಳೆಂದು ಕೂಡಿದವರಿಗೆ ಗೊತ್ತಾಗಲಿ, ಎಲ್ಲರಿಗೂ ತಿಳಿಯಲಿ. ಎಂದು ಆಚರಿಸುವ ಒಂದು ಸಮಾರಂಭ. ಪತಿ ಎನ್ನುವ ಒಬ್ಬ ಗಂಡಸಿನ ಕೈಯಿಂದ ಓರ್ವ ಸ್ತ್ರೀಯ ಕೊರಳಿಗೆ ಎರಡು ಬಂಗಾರದ ಬಿಲ್ಲೆಗಳನ್ನು ಕಟ್ಟಿಸಿ ದಾಕ್ಷಣವೇ ಹೇಗೆ ಅವರಿಬ್ಬರಲ್ಲಿ ಸಾವಿರ ವರುಷದ ಸಂಬಂಧ ಸ್ಥಾಪಿಸು ವದು.. .? ಕರಿಮಣಿಗಳ ಸರದಲ್ಲಡಗಿರುವ ಬಂಗಾರದ ಸೂತ್ರವಲ್ಲಿ ಮಾಂಗಲ ಪತಿಯ ಪ್ರಾಣದ ಸೂತ್ರವಾಗಿ ಕುಳಿತಿರುವದೆ...? ಹಾಗಿದ್ದರೆ ನೂಲಿನೆಳೆ ಯಲ್ಲಿ ಪೋಣಿಸಿ ಕಟ್ಟಿರುವ ಅಥವಾ ಬಂಗಾರದ ತಂತಿಯಲ್ಲಿ ಹೆಣೆದು ಕಟ್ಟಿ ರುವ ಆ ಸೂತ್ರ ಹರಿದಾಗ ಪತಿಯ ಪ್ರಾಣೋತ್ಕ್ರಮಣವಾಗುವದೆ.........? ಸುಳ್ಳು...ಎಲ್ಲವೂ ಸುಳ್ಳು....ನಿಜವಾದ ಮಾಂಗಲ್ಯ ಕೊರಳಲ್ಲಿಯ ಸರದಲ್ಲಿ ಇಲ್ಲ. ಹೃದಯದಲ್ಲಿರುವದು........"

"'ರಾಕ್ಷಸನಾದರೂ ಅವ ತನ್ನ ಪತಿ' ಎಂದುಕೊಂಡ ಮಂಡೋದರಿಯ ಹೃದಯದಲ್ಲಿದ್ದಿತು ಮಾಂಗಲ್ಯ. ಅಂತೆಯೇ ಅಂತಹ ಮಾಂಗಲ್ಯವನ್ನು ಹರಿಯಲು ಪರಮಾತ್ಮನೇ ಪ್ರತ್ಯಕ್ಷನಾಗಿ ತನ್ನ ಶಕ್ತಿಯನ್ನು ಕ್ಷಯಿಸಿ ನೀರಿನ ಮೇಲೆ ಕಲ್ಲನ್ನು ತೇಲಿಸಿ ಸಮುದ್ರ ದಾಟಿ ಬರಬೇಕಾಯಿತು........ಸೀತೆಯ ಹೃದಯದಲ್ಲಿ ಮಾಂಗಲ್ಯ ಸೂತ್ರವಿದ್ದಿತು. ಅಂತೆಯೇ ಸಮುದ್ರದಾಚೆಯಲ್ಲಿದ್ದ ರಾಮನನ್ನು ಎಳೆ ತಂದಿತು. ಅನುಸೂಯಾನ ಹೃದಯದಲ್ಲಿ ಮಾಂಗಲ್ಯವು ಉಜ್ವಲಕಾಂತಿಯಿಂದ ವಜ್ರಶಕ್ತಿಯಾಗಿತ್ತು. ಅಂತೆಯೇ ಜಗವನ್ನು ನಿರ್ಮಿಸುವ, ಜಗವನ್ನು ರಕ್ಷಿಸುವ, ಜಗವನ್ನು ದಹಿಸುವ ಮೂವರನ್ನೂ ತನ್ನ ಮಕ್ಕಳನ್ನು ಮಾಡಿ ತೊಟ್ಟಿಲಲ್ಲಿ ಹಾಕಿ ಜೋಗುಳ ಹಾಡಿದಳು........

ಕೊರಳಲ್ಲಿರುವ ಸರ ಒಂದು ಅಲಂಕಾರಿಕ ಆಭರಣವಲ್ಲದೆ ಇನ್ನೇನೂ ಅಲ್ಲ....ನನ್ನ ಕೊರಳಲ್ಲಿಯೂ ಬಂಗಾರದಲ್ಲಿ ಹೆಣೆದ ಸರವಿದೆ. ಕಂಡವರು ಅದಕ್ಕೆ ಹೇಳುತ್ತಾರೆ ಮಂಗಲ ಸೂತ್ರ ಎಂದು....ಆದರೆ ಅದು ಮಂಗಲ ಸೂತ್ರವಹುದೇ...? ಮಂಗಲ ಸೂತ್ರವೇ ಆಗಿದ್ದರೆ ಕಟ್ಟಿದವನನ್ನು ದೂರೋಡದಂತೆ ಬಂಧಿಸಲಿಲ್ಲವೇಕೆ..........? ಅವನನ್ನು ಬಂಧಿಸಲಿಲ್ಲ ಎಂದಾಗ ಅದು ಮಂಗಲಸೂತ್ರವಲ್ಲ. ಆದನ್ನು ಕಟ್ಟುವಾಗ ಆತನಲ್ಲಿ ಮಂಗಲ ಭಾವನೆಗಳು ಇರಲಿಲ್ಲ ಎನ್ನುವದು ಸ್ಪಷ್ಟ..."

"ಸುಮಿತ್ರಾ ಮಾಂಗಲ್ಯದ ಹಿಂದೆ ಇಬ್ಬರಲ್ಲಿಯೂ ಮಂಗಲ ಭಾವನೆಗಳು ಒಬ್ಬರಿಗಾಗಿ ಇನ್ನೊಬ್ಬರು ಪ್ರಾಣತೆರುವ-ಮಂಗಲ ಭಾವನೆಗಳು ಇರಬೇಕು. ಅಂತಹ ಭಾವನೆಗಳು ಇರಬೇಕಾದುದು ಕೊರಳಲ್ಲಿ ಅಲ್ಲ, ಹೃದಯದಲ್ಲಿ. ಮೇಲಿನ ಕುರುಹು ಮಾತಿನಂತೆ ಗಾಳಿಯನ್ನು ಕೂಡಿ ಹೋಗುವದು, ಇಲ್ಲದಾಗುವದು .. ...."

" ಎಲ್ಲವೂ ಬಾಹ್ಯಾಡಂಬರ.........ಎಲ್ಲವೂ ತೋರಿಕೆಗಾಗಿ........"

ಎಂದು ಹೇಳುತ್ತಾಳೆ.

ತೋರಿಕೆಗಾಗಿ ಅಲ್ಲದಿದ್ದರೆ ಬೇರೆ ಏನು...? ಕೊರಳಲ್ಲಿ ಮಂಗಲ ಸೂತ್ರವಿಲ್ಲದಿದ್ದರೆ ಹೃದಯದಲ್ಲಿ ಪತ್ನಿ ಭಾವನೆ ಇರಕೂಡದೆ...?...ವಿವಾಹದ ಮೊದಲು ವಿವಾಹದ 'ನಿಶ್ಚಯ' ಮಾಡಿದಾಗ ವಿವಾಹ ಮಾಡಿಕೊಳ್ಳುವವರಿಬ್ಬರಲ್ಲಿಯೂ ಪತಿ-ಪತ್ನಿ ಭಾವನೆಗಳು ನಿರ್ಮಾಣವಾಗುವದಿಲ್ಲವೆ...? ಆ

ಭಾವನೆ ನಿರ್ಮಾಣವಾಗುವದಕ್ಕೆ ಮೊದಲು ಮಂಗಲಸೂತ್ರವನ್ನೆಲ್ಲಿ ಕಟ್ಟಿ ರುತ್ತಾರೆ...?

ನನಗಿಲ್ಲ ಎಂದಾಗ್ಗೆ ಯಾರಿಗೂ ಇರಕೂಡದು ಅಥವಾ ಇದ್ದವರೆಲ್ಲರೂ ಪತ್ನಿಯರಲ್ಲ! ಎಂದು ನಾನು ಹೇಳುವದಿಲ್ಲ ಮಂಗಲಸೂತ್ರವಿಲ್ಲದಿದ್ದರೂ ಪತಿಗಾಗಿ ಮಂಗಲ ಭಾವನೆ— ಕಾಮಿನಿ ಹೇಳುವಂತೆ ಪತಿಗಾಗಿ ಪ್ರಾಣ ಕೊಡುವ ಭಾವನೆ— ಇದ್ದರೆ ಅವಳು ಪತ್ನಿಯಹುದು.

ಅಂತಹ ಭಾವನೆ ನನ್ನಲ್ಲಿದೆ. ಆದ್ದರಿಂದ ನಾನೂ ಪತ್ನಿಯಹುದು.... ಅಲ್ಲೆಂದು ಹೇಳುವವರು ಹೇಳಿಕೊಂಡು ಹೋಗಲಿ. ಅದರ ವಿಚಾರ ಅಥವಾ ಅವರ ವಿಚಾರ ನನಗಾದರೂ ಏಕೆ ..?

ನನ್ನ ವಿಚಾರವೇ ನನಗೆ ನಾಕಷ್ಟಿರುವಾಗ ಊರ ವಿಚಾರದಿಂದ ತಲೆ ಕೆಡಿಸಿಕೊಳ್ಳುವದಾದರೂ ಏಕೆ...? ಹೇಳುವ ಜನಕ್ಕೇನು, ಬಾಯಿಗೆ ಬಂದು ದನ್ನು ಹೇಳುತ್ತಲೇ ಇರುತ್ತಾರೆ. ಎದುರು ಸಿಕ್ಕಾಗ ವರ್ಣನೆ, ಹಿಂದಾದಾಗ ನಿಂದೆ. ಇದು ಜನರ ಸ್ವಭಾವ. ಅವರ ರಕ್ತದ ಗುಣ. 'ತಮ್ಮಂತೆಯೇ ಉಳಿದವರೂ ಇರುವರು' ಎನ್ನುವ ವಿಚಾರವೇ ಅವರಿಗೆ ಮರೆಯಾಗುತ್ತದೆ ತಾವು ಇನ್ನೊಬ್ಬರನ್ನು ನಿಂದಿಸುವಾಗ. ಅವರನ್ನೂ ಕೂಡ ನಿಂದಿಸುವವರು ಅವರ ಹಿಂದೆ ಇರುವರು ಎಂಬ ವಿಚಾರ ಅವರಲ್ಲಿ ಎಲ್ಲರಲ್ಲಿ ಮೂಡಿದಾಗ ನಿಂದೆ ಕಡಿಮೆಯಾಗಬಹುದು. ಆದರೆ ಹಾಗಾಗುವದಕ್ಕೆ ಮನುಷ್ಯನ ನೆತ್ತರದ ಗುಣವೇ ಬದಲಾಗಬೇಕು. ಅದಕ್ಕೆ ಯುಗ-ಯುಗಗಳು ಬೇಕು.

ಅಲ್ಲದೆ ಜನ ಒಳ್ಳೆಯದಕ್ಕಿಂತ ಕೆಡಕಿಗೆ ತೀವ್ರ ಮಾರುಹೋಗುವರು. ಏಕೆಂದರೆ ಕೆಡಕಿನಲ್ಲಿ ಆಕರ್ಷಣೆಯಿದೆ. ಒಳ್ಳೆಯದು ಕಠಿಣವಿದೆ. ಇನ್ನೊಬ್ಬ ರಿಗೆ ಒಳ್ಳೆಯದನ್ನು ಮಾಡಬೇಕಾದರೆ ಕೊಂಚವಾದರೂ ತ್ಯಾಗವಿರಬೇಕಾ ಗುತ್ತದೆ ಆದರೆ ಇನ್ನೊಬ್ಬರಿಗೆ ಕೆಡಕಿನಿಂದ ವ್ಯಕ್ತಿಯ ಸ್ವಾರ್ಥ ಸಾಧಿಸು ತ್ತದೆ. ಅಂತೆಯೇ ಕೆಡಕು ಪ್ರಿಯ.... ತಾವು 'ತ್ಯಾಗಿಗಳು' ಎಂದು ಹೇಳಿ ಕೊಂಡೇ ತಾವು ದೊಡ್ಡವರು ಎಂಬ ಹೆಸರು ದೊರಕಿಸಿಕೊಳ್ಳುವ ಸ್ವಾರ್ಥಕ್ಕೆ ಮುಂದಾಗುತ್ತಾರೆ. 'ತಾವು ತ್ಯಾಗಿಗಳು' ಎಂದು ಹೇಳಿಕೊಳ್ಳುವಾಗ ಇನ್ನೊಬ್ಬನು ಸ್ವಾರ್ಥಿ ಎಂದೂ ಹಳಿಯುತ್ತಾರೆ... ತಿಳಿದೊ ಅಥವಾ ತಿಳಿಯ ದೆಯೊ...

ಕೆಡಕಿನ ಮೂಲ ಸ್ವಾರ್ಥ. ಸ್ವಾರ್ಥ ಎಲ್ಲರಿಗೂ ಪ್ರೀಯ. ಅದಿಲ್ಲ ದಿದ್ದರೆ ಬಾಳುವೆಯೇ ಸಾಗದು ಎನ್ನುವಷ್ಟು ಜನರ ವಿಚಾರ ಅಧೋಗತಿಗೆ ಇಳಿದಿದೆ.

ಆದಕ್ಕೆ ಉಪಾಯ....?

ಕುಲಕರ್ಣಿಯವರ ವಿಚಾರದಲ್ಲಿ "ಅದಕ್ಕೊಂದು ನೇರವಾದ ಅಥವಾ ತೀಕ್ಷ್ಣವಾದ ಉಪಾಯವಿಲ್ಲ" ಎಂದು. ಏಕೆಂದರೆ ಈ ರೋಗ ನಿನ್ನಿನದಲ್ಲ. ಲಕ್ಷಾವಧಿ ವರುಷದಿಂದ ಬೆಳೆದು ಬಂದ ರೋಗಕ್ಕೆ ಯಾವುದೋ ಗುಳಿಗೆ ಅಥವಾ ಇಂಜೆಕ್ಶನ್ ನಾಟಲಾರದು. ಸಾವಕಾಶವಾಗಿ ಪರಿವರ್ತನೆಯಾ ಗುತ್ತ ಹೋಗಬೇಕಂತೆ.

ಜನದ ಪರಿವರ್ತನೆಯಾಗಿ ಎಲ್ಲರೂ ಸಜ್ಜನರಾಗುವವರೆಗೆ ನನ್ನಂತಹ ನಿಷ್ಪಾಪ ಜೀವಿಗಳು ಅವರ ಕ್ರೂರ ಟೀಕೆಗೆ ತುತ್ತಾಗಬೇಕು. ಇದನ್ನು ಸಹಿ ಸಲೇಬೇಕು. ಏಕೆಂದರೆ ಅದಲ್ಲದೆ ಇನ್ನೊಂದು ದಾರಿಯೇ ಇಲ್ಲ.

ನಾನು ಯಾರಿಗೂ ಕೆಡಕನ್ನೆಣಿಸದೆ ಒಳ್ಳೆಯದನ್ನೆ ಮಾಡುತ್ತ ಒಳ್ಳೆಯ ದನ್ನೇ ಚಿಂತಿಸುತ್ತ ಮುಂದೆ ಸಾಗಬೇಕು. ಜನ ಸ್ವಾರ್ಥದ ಕೈಗೂಸಾಗಿ ಆದೆಷ್ಟೇ ನಿಂದೆ ಮಾಡಲಿ, ಟೀಕಿಸಲಿ, ಮೂಲವಾಗಿ ಜನರ ಹೃದಯದಲ್ಲಿ ಪರಮಾತ್ಮ ಸ್ವರೂಪವಾದ ಸದ್ಬುದ್ಧಿ ಇರುತ್ತದೆ. ಒಂದಿಲ್ಲ ಒಂದು ದಿನ ನನ್ನ ಒಳ್ಳೆಯ ಕಾರ್ಯದ ಅರಿವು ಪರಮಾತ್ಮನಿಗೆ ಅರಿವಾಗುತ್ತದೆ.

ಪರಮಾತ್ಮನ ಮುಖ ಮುಚ್ಚಲು ಯಾರಿಂದ ಸಾಧ್ಯ...?

ನನಗೆ ಕುಲಕರ್ಣಿಯವರು ಕಲಿಸಿದ ಪಾಠ ಇದುವೆ ಅಲ್ಲವೆ....? ಅವರು ಕಲಿಸಿದ ದಾರಿಯಲ್ಲಿ ಮುಂದೆ ಸಾಗಿದರೆ ಭಯವಿಲ್ಲ ಸಾಗುವಾಗ ಕೊಂಚ ಕಷ್ಟವೆನಿಸಿದರೂ.

ನಾನು ಮಾತ್ರ ನನ್ನನ್ನು ಸಲಹುವವರಿಗೆ, ಮಾಧವರಾಯರಿಗೆ ಕೆಡ ಕಾಗದ ರೀತಿಯಲ್ಲಿ ಅವರ ಮನ ನೋಯದ ರೀತಿಯಲ್ಲಿ ಮುಂದೆ ಸಾಗ ಬೇಕು. ನಾನು ನಾಲ್ಕು ಜನರಿಂದ ಮಂತ್ರಾಕ್ಷತೆ ಹಾಕಿಸಿಕೊಂಡ ಅವರ ಪತ್ನಿಯಲ್ಲ. ಆದರೆ ಅವರ ಆಶೀರ್ವಾದದ ಮಂತ್ರಾಕ್ಷತೆಗಳು ಸರ್ವಕಾಲವೂ ನನ್ನ ಮೇಲೆ ಮಳೆಗರೆಯುತ್ತಲೇ ಇವೆ. ಸಾರ್ವಜನಿಕರ ಅಕ್ಷತೆಗಳಿಗಿಂತ ಅವರ ಮಂತ್ರಾಕ್ಷತೆಗೆ ಅಲ್ಲವೇ ಹೆಚ್ಚಿನ ಬೆಲೆ, ಯೋಗ್ಯತೆ ಇರುವದು ?

ಅವರಲ್ಲಿ ನನಗಾಗಿ ಅನ್ಯೋನ್ಯ ಪ್ರೇಮವಿದೆ ಎನ್ನುವದನ್ನು ನಾನು ನಂಬಬೇಕು. ಆದರಲ್ಲಿ ಸಂಶಯ ತಾಳಿದರೆ ದುಃಖಿಯಾಗುವವಳು ನಾನು ಅಲ್ಲದೆ ಬೇರೆಯವರಲ್ಲ. ಇನ್ನೊಬ್ಬನ ನಿರ್ಮಲ, ನಿಷ್ಕಲ್ಮಷ ಪ್ರೇಮದಲ್ಲಿ ಸಂಶಯ ತಾಳುವದೂ ಪಾಪ. ಏಕೆಂದರೆ "ಪ್ರೇಮ ಪರಮಾತ್ಮನ ಸ್ವರೂಪ" ಎಂದು ಹೇಳಿರಲಿಲ್ಲವೆ...." "ಪರಮಾತ್ಮನನ್ನು ಪೂರ್ಣವಾಗಿ ನಂಬಿದಾಗಲೇ ಆತ ಪ್ರಸನ್ನನಾಗುವದು. ಆತನಲ್ಲಿ ಸಂಶಯ ತಾಳಿದರೆ ಆತ ಎಂದೂ ಹತ್ತಿರಕ್ಕೆ ಬಾರನು" ಎಂದೂ ಕುಲಕರ್ಣಿಯವರು ತಿಳಿಸಿದ್ದರು.

ಮಾಧವರಾಯರ ಪ್ರೇಮವೂ ಪರಮಾತ್ಮನ ಸ್ವರೂಪ. ಆ ಪರಮಾತ್ಮನಲ್ಲಿ ನಾನು ಸಂಶಯ ತಾಳಕೂಡದು. ಆದರಿಂದ ನನಗೆ ಹಾನಿ. ಅವರು ಹೇಳುತ್ತಿದ್ದಾರೆ—

" ನಿನ್ನಿಂದಾಗಿ ನಾನು ಹಾಳಾಗದೆ ಉಳಿದೆ.... ಇಲ್ಲದಿದ್ದರೆ.... ನೀನು ಮಧ್ಯದಲ್ಲಿ ಬಂದು ತಡೆಯದಿದ್ದರೆ....ಇಷ್ಟರಲ್ಲಿ ನಾನೊಬ್ಬ ನೀಚ ಕೀಳು ಪ್ರಾಣಿಯಾಗುತ್ತಿದ್ದೆ...ಮನುಷ್ಯತ್ವವನ್ನು ಮರೆತು..." ಎಂದು.

ಇದ್ದಿರಬಹುದು.... ನನ್ನ ಯಾವುದೋ ಒಂದು ಅವ್ಯಕ್ತ ಶಕ್ತಿ ಅವರ ಅಧೋಗತಿಗೆ ಅಡ್ಡವಾಗಿ ನಿಂತಿರಬಹುದು. ಯಾರಲ್ಲಿ ಯಾವ ಶಕ್ತಿ ಅಡಗಿರುವದೆನ್ನುವದು ಎಲ್ಲರಿಗೂ ತಿಳಿಯುವದಿಲ್ಲ. ನನ್ನ ನಿಷ್ಕಲ್ಮಷ ಹೃದಯವೇ ಒಂದು ಶಕ್ತಿಯಾಗಿ ಅವರಿಗೆ ಸಹಾಯಕವಾಗಿರಬಹುದು. ಪ್ರೇರಕವಾಗಿರಬಹುದು.

ಅಂತಹ ಶಕ್ತಿ ನನ್ನಲ್ಲಿರುವದೆಂಬುದು ಕನಸು ಮನಸಿನಲ್ಲಿ ಕೂಡ ನನಗೆ ಗೊತ್ತಿರಲಿಲ್ಲ. ಕುಲಕರ್ಣಿಯವರು ಯಾವುದೋ ಒಂದು ಸಂದರ್ಭದಲ್ಲಿ "ಸ್ತ್ರೀಗೆ ತಾನೇನಿರುವೆ ಎನ್ನುವದೇ ತಿಳಿಯದು. ಆವಳ ಶಕ್ತಿಯ ಪರಿಚಯ ಅವಳಿಗೇ ಗೊತ್ತಿಲ್ಲ" ಎಂದು ಹೇಳಿದ್ದರಲ್ಲವೆ....? ಅದು ನನ್ನನ್ನು ಕುರಿತೇ ಇದ್ದಿರಬಹುದೇ ....?

ಇದ್ದಿರಬಹುದು.... ನನ್ನ ಶಕ್ತಿಯ ಪರಿಚಯ ನನಗಿರಲಿಕ್ಕಿಲ್ಲ. ಆದರೆ ಇಂದು ಮಾಧವರಾಯರು 'ಶಕ್ತಿಯ ಭಂಡಾರ ನನ್ನಲ್ಲಿಯೇ ಅಡಗಿದೆ' ಎನ್ನುವದನ್ನು ತೋರಿಸಿ ಕೊಟ್ಟಾಗ ನಾನೇಕೆ ಅದನ್ನು ಹೆಚ್ಚಿಸುವ, ಉಪಯೋಗ ಮಾಡಿಕೊಳ್ಳುವ ಕಾರ್ಯ ಕೈಕೊಳ್ಳಬಾರದು...?

ಶಕ್ತಿ ಹೆಚ್ಚಿಸಿಕೊಳ್ಳುವದೆಂದರೆ ಪರಾಕ್ರಮದ ಕೆಲಸವಲ್ಲ. ಸ್ತ್ರೀಶಕ್ತಿ ಹೆಚ್ಚಾಗುವದು ಸಾವಿತ್ರಿ, ಅನಸೂಯ ಅವರ ದಾರಿಯಲ್ಲಿ ಸಾಗುವದರಿಂದ. ನಾನು ಕೂಡ ಅವರ ದಾರಿಯಲ್ಲಿ ಸಾಗಬೇಕು. ಪತಿವ್ರತೆಯಾಗಿ ಪಾತೀ ವೃತ್ಯದ ಶಕ್ತಿಯಿಂದ ನಾನೂ ಹಿರಿಯಳಾಗಬೇಕು.

ಆದರೆ ಸಾಧ್ಯವೆ ..? ಪತಿವ್ರತೆಯಾಗಲು ನನಗೆ ಪತಿ ಎಲ್ಲಿ....?

ಮಾಧವರಾಯರಿಗೆ ಪತಿ ಎನ್ನಬಹುದೆ...? ನಾನು ಅವರನ್ನು ಪತಿ ಎಂದುಕೊಳ್ಳಬಹುದು. ಅವರ ಪತ್ನಿ ನಾನು ಎಂದುಕೊಂಡು ಪತ್ನಿಯ ಧರ್ಮ ದಿಂದ ವ್ರತಸ್ಥಳಾಗಿ ಪತಿವ್ರತೆಯಾಗಲೂಬಹುದು. ಆದರೆ ಆದಕ್ಕೆ ಪತಿ ಎನ್ನಿಸಿಕೊಳ್ಳುವವರ ನೆರವು ಬೇಡವೇ....? ಪತಿ ಶಕ್ತಿ ನನಗೆ ಆ ಕಾರ್ಯ ದಲ್ಲಿ ದೇವಶಕ್ತಿಯಾಗಿ ಸಹಾಯ ಮಾಡುವದು ಬೇಡವೆ....? ಸದ್ಯಾಗುವ ದಕ್ಕೆ ಎರಡು ಶಕ್ತಿಗಳು ಬೇಕಲ್ಲವೇ...?

ಬರಿ ಸ್ತ್ರೀ ಶಕ್ತಿಯಿಂದ ಯಾವ ಕಾರ್ಯವೂ ಆಗದು. ಬರಿ ಸ್ತ್ರೀ ಶಕ್ತಿ ಶಕ್ತಿಯೂ ಅಲ್ಲವಾಗಿರಬಹುದು. ಏಕೆಂದರೆ ಕಾಮಿನಿ ಕೂಡಾ ತನ್ನ ಪತಿಗಾಗಿ ಎಷ್ಟೊಂದು ತ್ಯಾಗವನ್ನು ಮಾಡಲಿಲ್ಲ? ಪ್ರೀತಿಗಾಗಿ ತಂದೆ ತಾಯಿಗಳನ್ನು ತೊರೆದಳು, ವೈಭವ ವಿಲಾಸಗಳನ್ನು ತೊರೆದಳು, ಸ್ವತಹ ವಿಲಾಸ ವೈಭವ ದಲ್ಲಿ ಬೆಳೆದರೂ ಪತಿಗಾಗಿ ದುಡಿಯತೊಡಗಿದಳು, ಅವನಿಗಾಗಿ ಮಣ್ಣಾಗ ತೊಡಗಿದಳು.

ಅವಳು ಪತಿವ್ರತೆಯಾಗಿರಲಿಲ್ಲವೆ...? ಪಾತಿವೃತ್ಯವೆಂದರೆ ಪತಿಯ ಗುಲಾಮಳಾಗುವದಲ್ಲ. ಪತಿಗಾಗಿ ಜೀವನದಲ್ಲಿ ಬೆರೆಯುವದು, ಸಮರಸ ವಾಗುವದು, ಐಕ್ಯಹೊಂದುವದು....-

ಅವಳು ಹಾಗೆ ಮಾಡಿರಲಿಲ್ಲವೆ....? ಅವಳೇ ಒಂದು ದಿನ—

" ಸುಮಿತ್ರಾ ನಾನು ಏನನ್ನು ಮಾಡಲಿಲ್ಲ ಪತಿಗಾಗಿ...? ಎಲ್ಲವನ್ನೂ ಮಾಡಿದ್ದೆ, ಪತಿಗಾಗಿ ತ್ಯಾಗವನ್ನೂ ಮಾಡಿದ್ದೆ, ದೇವ ಹೂತಿಯು ಕರ್ದಮ ಮಹರ್ಷಿಗಾಗಿ ಸಾಮ್ರಾಟ ಮನುಮಹಾರಾಜನ ರಾಜಮಹಲಿನ ಆಶೆಯನ್ನು ತ್ಯಜಿಸಿದಂತೆ ನಾನು ಪತಿಗಾಗಿ ತಂದೆಯ ವೈಭವದ ಆಶೆಯನ್ನು ತ್ಯಜಿಸಿ ಬಂದಿದ್ದೆ. ರಾಮನಿಗಾಗಿ ಸೀತೆ ಕಟ್ಟಡವಿಯ ಕಲ್ಲು ತುಳಿದಂತೆ ನಾನು

ಪತಿಗಾಗಿ ಅಡವಿಯಂತಹ ಮನೆಯಲ್ಲಿ ಕಾಲ ಕಳೆದೆ. ಪಾಂಡವರಿಗಾಗಿ ದ್ರೌಪದಿ ಊಟ ಉಪವಾಸ ಅನುಭವಿಸಿದಂತೆ ನಾನು ಕೂಡ ನೀರಿಗೆ ಅನ್ನ ವೆಂದಿದ್ದೆ, ಪತಿಯ ಕಷ್ಟದಲ್ಲಿ ಅವನ ಕಷ್ಟವನ್ನು ಕಡಿಮೆ ಮಾಡಲು ನಾನು ದುಃಖಿಯಾಗುತ್ತಿದ್ದೆ. ಅವನನ್ನು ಸುಖದಿಂದ ಇರಿಸಲು ನಾನು ಮೈ ಮಣಿಸುತ್ತಿದ್ದೆ, ದುಡಿಯುತ್ತಿದ್ದೆ ಮುಂಜಾನೆಯಿಂದ ಸಂಜೆಯವರೆಗೆ...... ಅದೆಲ್ಲದರಿಂದ ನನಗೆ ದೊರೆತ ಪ್ರತಿಫಲ....? "

" ಇಂದಿನ ಈ ನನ್ನ ಅವಸ್ಥೆ..."

ಪತಿವ್ರತೆಯಾದರೆ ಪತಿಗೆ ಸುಖ. ಪತಿಗೆ ಆಯುಷ್ಯವರ್ಧನ ಎಂದು ಅವನ ಜೀವನದಲ್ಲಿ ನನ್ನ ಆಯುಷ್ಯವನ್ನೆ ಹಿಂಡುತ್ತಿದ್ದೆ. ಅದರಿಂದ ಅವ ಆಯುಷ್ಮಂತನಾದ. ನಾನು ಮಣ್ಣುಪಾಲಾದೆ. 'ಆದದ್ದು ಒಳ್ಳೆಯದು' ಎಂದು ಹೇಳಬಹುದು. ಆದರೆ ಸುಮಿತ್ರಾ .. ತನ್ನವನಾದ ಪತಿಯ ತೊಡೆಯ ಮೇಲೆ ಮಲಗಿ ಸುಖದಿಂದ ಸಮಾಧಾನದಿಂದ ಆನಂದದಿಂದ ನಗುತ್ತ ನಲಿ ಯುತ್ತ ಪ್ರಾಣ ತ್ಯಜಿಸಬಹುದು. ಆದರೆ ಪತ್ನಿ ಜೀವದಿಂದಿದ್ದಾಗ ತನ್ನ ಜೀವದಿಂದಲೇ ಬೆಳೆಸಿದ ಪತಿ ತನ್ನನ್ನು ಬಿಟ್ಟು ಇನ್ನೊಬ್ಬಳೊಡನೆ ಹೋಗುವ ದನ್ನು ಸಹಿಸಲು ಸಾಧ್ಯವಿಲ್ಲ....ಯಾವ ಪತಿವ್ರತೆಯಿಂದಲೂ ಸಾಧ್ಯವಿಲ್ಲ. ಹಾಗೆ ಸಹಿಸಿದವಳು ಎಂದೆಂದಿಂಗೂ ಪತಿವ್ರತೆಯಲ್ಲ...."

"ಪಾತಿವೃತ್ಯವೆಂದರೆ ಪತಿಯ ಮೇಲೆ ಅಂಧ ಪ್ರೇಮ ಮಾಡುವದಲ್ಲ. ಪತಿಯನ್ನು ಅರಿತು ವರ್ತಿಸುವದು.... ಪತಿ ಪತ್ನಿಯ ಮನ ಒಂದಾದಾಗಲೇ ಸ್ತ್ರೀ ಪತಿವ್ರತೆಯಾಗುವಳು ಸುಸ್ವಭಾವದ - ಸಜ್ಜನ ಪತಿಯಿಂದಲೇ ಸ್ತ್ರೀ ಉದ್ಧಾರ. ಪತಿ ಪತ್ನಿಯರ ಮನ ಒಂದಾಗಿ ಒಂದಕ್ಕೊಂದು ಪೂರಕವಾದರೆ ಶಕ್ತಿಯಾಗುವದು... ಮಹಾಶಕ್ತಿಯಾಗುವದು... ಆ ಶಕ್ತಿಯೇ ಇಬ್ಬ ರನ್ನೂ ಕಾಯುವದು. ಇಬ್ಬರನ್ನು ಎಂದೆಂದಿಗೂ ಅಗಲಿಸದಂತೆ ಕಾಯುವದು. ಆ ಶಕ್ತಿಗೆ ಪತಿವ್ರತಾ ಶಕ್ತಿ ಎಂದು ಹೇಳುವರು. ಆ ಶಕ್ತಿಗೆ ಪತಿಶಕ್ತಿ ದೇವ ಶಕ್ತಿ ಎಂದು ಹೇಳುವರು..."

" ಅಂತಹದು ನನಗೆ ಲಭಿಸಲಿಲ್ಲ. ಏಕೆಂದರೆ ನನ್ನದು 'ಸತ್ಪಾತ್ರ ದಾನ'ವಾಗಲಿಲ್ಲ. ನಾನು ಪ್ರಾಣ ಪಣಕ್ಕೆ ಹಚ್ಚಿ ಪ್ರೀತಿಸಿದೆ. ಆದರೆ

ಇನ್ನೊಬ್ಬ ಅದನ್ನೂ ಆಟವೆಂದು ಆಟವಾಡಿದ. ಅಂತೆಯೇ ನನ್ನದು ಶಕ್ತಿಯಾಗಲಿಲ್ಲ. ಮಹಾಶಕ್ತಿಯಾಗಲಿಲ್ಲ.... ಅದಕ್ಕೆ ನಾನು...ಈ ಅವಸ್ಥೆಗೆ ತಲುಪಿದೆ. ” ಎಂದು ಹೇಳಿ ಕಣ್ಣೀರು ತಂದಿದ್ದಳು.

ಕಾಮಿನಿಯ ಪ್ರೀತಿಗೆ ಪ್ರತಿ ಪ್ರೀತಿ ದೊರೆತಿದ್ದರೆ...?

ಕಾಮಿನಿ ದೇವತೆಯಾಗುತ್ತಿದ್ದಳು. ಆ ಶಕ್ತಿ ಅವಳಲ್ಲಿದೆ. ದಾರಿಹೋಕರನ್ನು ಕರೆದು ಪ್ರೀತಿಸುವ ಅವಳಲ್ಲಿ ಅಂತಹ ಶಕ್ತಿಯಿದೆ. ಅವಳು ನನಗಾರು...?...ಆದರೆ ತಾಯಿಯಾಗಿ ರಕ್ಷಿಸಿದಳು...ಆಸ್ಪತ್ರೆಯಲ್ಲಿ ಕೂಡ ಎಲ್ಲ ರೋಗಿಗಳಿಗೂ ಅವಳೇ ಬೇಕು....ಚಿಕ್ಕವರು 'ಅಕ್ಕಾ' ಎಂದು ಕೂಗುತ್ತಾರೆ. ಹಿರಿಯರು ತಂಗಿ ಎಂದು ಕೂಗುತ್ತಾರೆ. ಅರಿಯದ ಅಜ್ಞರು ಹಳ್ಳಿಯವರು ' ಅವ್ವಾ ' ಎನ್ನುತ್ತಾರೆ. ಎಲ್ಲರೂ ಅವಳನ್ನು ಕರೆಯುವವರು....ಎಲ್ಲರಿಗೂ ಅವಳು ಬೇಕು. ಅವಳು ಕಾಣದಿದ್ದರೆ ಎಲ್ಲರಿಗೂ ತಮ್ಮ ತಾಯಿಯನ್ನು ಕಳೆದುಕೊಂಡಂತೆ. ಎಲ್ಲರೂ ಅವಳ ಗುಣಗಾಯನ ಮಾಡುತ್ತಾರೆ. ಗಂಡಸರೆಂದರೆ ಉರಿದು ಬೀಳುವ ಅವಳು ಮಾಡುವ ಅವರ ಸೇವೆಯನ್ನು ನೋಡಿದಾಗ ' ನಿ ಜ ವೆ ' ಎನ್ನುವ ಅಚ್ಚರಿ. ಅವಳಿಗೆ ಕೇಳಿದರೆ—

“ ಇವರು ಗಂಡಸರೆಂದು ಯಾರು ಹೇಳುತ್ತಾರೆ...? ಇವರೆಲ್ಲ ನನ್ನ ಮಕ್ಕಳು. ಈ ಆಸ್ಪತ್ರೆಯಲ್ಲಿ ಕಾಲಿಟ್ಟವರಿಗೆಲ್ಲರಿಗೂ ನಾನು ತಾಯಿ...” ಇವರೆಲ್ಲ ನನ್ನ ಮಕ್ಕಳು. ಈ ಆಸ್ಪತ್ರೆಯಲ್ಲಿ ಕಾಲಿಟ್ಟವರಿಗೆಲ್ಲರಿಗೂ ನಾನು ತಾಯಿ...” ಎಂದು ಹೇಳುತ್ತಾಳೆ.

ಅವಳ ಜೀವನವೇ ವಿಚಿತ್ರ. ಅವಳ ಹೊರಗಿನ ರೀತಿ ನೀತಿಗಳನ್ನು ಕಂಡಾಗ 'ಇವಳು ಗಂಡುಬೀರಿ' ಎನ್ನಲೇಬೇಕಾಗುತ್ತದೆ. ಆದರೆ ಆಸ್ಪತ್ರೆಯಲ್ಲಿಯ ಚಿಕ್ಕ ಕೋಣೆಯನ್ನು ಪ್ರವೇಶಿಸಿದಾಗ ಅದೊಂದು 'ಸನ್ಯಾಸಿಯ ಗುಡಿಸಲು' ಎನ್ನಿಸುತ್ತದೆ. ಅವಳ ಕೋಣೆಯಲ್ಲಿ ಏನೂ ಇಲ್ಲ... ಏನಾದರೂ ಮನೆ ತುಂಬುವಂತೆ ಇದ್ದುದು ಒಂದು ಭಾವಚಿತ್ರ.... ದತ್ತಾತ್ರೆಯ ಭಾವಚಿತ್ರ.... ಹತ್ತಿರವೇ ಒಂದು ಜಪಮಾಲೆ...

ಕಾಮಿನಿ ಹೇಳುತ್ತಾಳೆ. “ಅದುವೇ ನನ್ನ ಆಸ್ತಿ” ಎಂದು.

ಆಹುದು ಅವಲ್ಲನೇ ಇನ್ನೇನೂ ಇಲ್ಲ ಅವಳಲ್ಲಿ. ಬಂದುದೆಲ್ಲವೂ ಅಲ್ಲಿ ಇಲ್ಲಿ... ಅವರಿಗೆ— ಇವರಿಗೆ ಹೊರಟುಹೋಗುತ್ತದೆ. ನಾಳಿನ ವಿಚಾರವೇ ಅವಳಿಗಿಲ್ಲ

"ನಿತ್ಯ ಒಂದು ಊಟ ಮಾಡುವ ನನಗೆ ನಾಳಿನ ವಿಚಾರವೆಂದರೂ ಕೂಡ ಒಂದು ಊಟ ಮಾತ್ರ ಅಲ್ಲವೆ ? ಎಂಬ ಅವಳ ಪ್ರಶ್ನೆಗೆ ಯಾರು ಏನನ್ನು ಉತ್ತರ ಕೊಡುವರು...?

ಕೈತುಂಬ ವೇತನ ಬರುತ್ತದೆ ಆದರೆ ಅದನ್ನು ಬೇಡುವವರೂ ತುಂಬ ಜನ, ಯಾರ ಮನೆಯಲ್ಲಿ ಅಕ್ಕಿ ಇಲ್ಲ, ಇನ್ನಾರ ಮನೆಯಲ್ಲಿ ಹಾಲು ಇಲ್ಲ.... ಕೊನೆಗೆ ಕಾಮಿನಿಯ ಕೈಯಲ್ಲಿ ಏನೂ ಇಲ್ಲ....ಬರಿದು....ಕೈ....ಬರಿದು.....

" ಕೈ ಬರಿದಾಗುತ್ತದೆ ನಿಜ .. ಆದರೆ ಹೃದಯ ತುಂಬುತ್ತದೆ " ಎಂದು ಹಸನ್ಮುಖದಿಂದ ಹೇಳುತ್ತಾಳೆ. " ಇನ್ನೂ ಕೊಡಲು ಇಲ್ಲವಲ್ಲ " ಎಂದು ಕನಿಕರ ಪಡುತ್ತಾಳೆ

ಅವಳು ಹೇಳುವದು " ಎಲ್ಲರೂ ಸುಖಿಗಳಾಗಬೇಕು. ಎಲ್ಲರೂ ಸುಖಿ ಯಾದುದನ್ನು ನೋಡಬೇಕೆಂದು ನನ್ನ ಇಚ್ಛೆ...ಸುಖದುಃಖಗಳು ದೈವಾ ಧೀನವೆಂದು ಹೇಳುತ್ತಾರೆ, ಅದು ಕೆಲ ಅಂಶದಿಂದ ದೈವಾಧೀನತೆ ನಿಜ ವಾದರೂ ಪೂರ್ಣ ನಿಜವಲ್ಲ. ಸುಖಕ್ಕೆ ದುಃಖಕ್ಕೆ ಕಾರಣರು ನಾವು ನಮ್ಮ ಕೃತ್ಯಗಳೇ ನಮ್ಮ ಸುಖದುಃಖಕ್ಕೆ ಕಾರಣ... ಯಾವುದನ್ನೂ ಮಾಡುವಾಗ ನಮಗೆ ಅದರ ಪರಿಣಾಮಗಳ ವಿಚಾರವಿರುವದಿಲ್ಲ.......ಅವಿಚಾರಿಗಳಾಗಿ ನಾವು ಏನಾದರೊಂದು ಮಾಡುತ್ತೇವೆ...ಹಿಂದಿನಿಂದ ಏನಾದರೊಂದು ಅನಿಷ್ಟ ಒದಗಿದಾಗ, ಕಷ್ಟ ಬಂದಾಗ ' ಅಯ್ಯೋ ' ಎಂದು ತಲೆಹಿಡಿದು ಕೊಳ್ಳು ವೆವು .. ...' ನನ್ನ ಕರ್ಮ ' ಎಂಗು ಕರ್ಮವನ್ನು ಹಳಿಯುವೆವು. ಆದರೆ ಕಷ್ಟದ ಕಾರಣವನ್ನು ಹುಡುಕುವದಿಲ್ಲ. ಏಕೆಂದರೆ ನಾವು ಮಾಡಿದ್ದು ಎಲ್ಲವೂ ಸರಿಯೆಂದೇ ನಮ್ಮ ಹುಚ್ಚು ಮೂರ್ಖ ವಿಚಾರ. ಒಮ್ಮೆ ನಾವು ಮಾಡಿದ್ದು ಅವಿಚಾರ, ಕೆಡಕು ಎಂದೆನ್ನಿಸಿದರೂ ಅದನ್ನು ಸ್ಪಷ್ಟವಾಗಿ ಒಪ್ಪಿ ಕೊಂಡು ಪಶ್ಚಾತ್ತಾಪದಿಂದ ಪ್ರಾಯಶ್ಚಿತ್ತ ಮಾಡಿಕೊಳ್ಳುವದಿಲ್ಲ....ಅದರಿಂದ ಮಂಗನಂತಹ ಮನಕ್ಕೆ, ದೇಹಕ್ಕೆ ನಿರ್ಬಂಧ ತಪ್ಪುತ್ತದೆ. ತಪ್ಪಾಗಲೀ

ಒಪ್ಪಾಗಲಿ ತನಗೆ ಇಷ್ಟ ಬಂದಂತೆಯೇ ಆಚರಿಸಲು ಆರಂಭಿಸುತ್ತವೆ ದೇಹ, ಮನ. ಅಲ್ಲಿಗೆ ಆರಂಭವಾಗುತ್ತದೆ ಕಷ್ಟ ಸುಖಗಳ ಸುಗ್ಗಿ...."

" '....ಹೀಗಾಗಬಾರದು' ಎನ್ನುವ ನನ್ನ ಇಚ್ಛೆ ಪ್ರಬಲ ಶಕ್ತಿಯಾಗಿ ತಡೆಯಾಗಿ ಪರಿಣಮಿಸುವದಿಲ್ಲ. ಅಲ್ಲದೆ ಮನುಷ್ಯ ಸ್ವಭಾವಕ್ಕನುಸರಿಸಿ ಅವಶ್ಯವೆನಿಸಿದುದನ್ನು ಅಥವಾ ತಮಗೆ ಒಳ್ಳೆಯದನ್ನು ಮಾಡಿಕೊಳ್ಳುವಾಗ ಇನ್ನೊಬ್ಬರಿಗೆ ಅದರಿಂದ ತೊಂದರೆಯಾಗುತ್ತದೆ. ಅದು ಅನಿವಾರ್ಯ, ಅಪರಿಹಾರ್ಯ ಎಂದು ನಾವು ಭಾವಿಸಿ ಅದರ ಹೊಣೆಗಾರಿಕೆ ಹಾರಿಸಿಕೊಳ್ಳಲು ಪ್ರಯತ್ನಿಸುತ್ತೇವೆ. ಅದು ಅಪರಿಹಾರ್ಯವಲ್ಲ ಎಂದು ತಿಳಿದುಕೊಂಡು ಪ್ರತಿಯೊಬ್ಬ ಇನ್ನೊಬ್ಬರಿಗೆ ತೊಂದರೆಯಾಗದಂತಹ ಕಾರ್ಯ ಮಾಡುತ್ತ ಹೋದರೆ....?

.. " ಇನ್ನೊಬ್ಬರಿಗೆ ತೊಂದರೆಯಾಗದಂತಹ ಕಾರ್ಯ ಮಾಡುವಾಗ ಅನೇಕ ಸಲ ನಮ್ಮ ಮನದಿಚ್ಛೆ ಪೂರ್ಣವಾಗುವಂತೆ ಕೆಲಸಗಳಾಗುವದಿಲ್ಲ. ಆದರೆ....ಆದರೆ ಒಬ್ಬರಂತೆಯೇ ಇನ್ನೊಬ್ಬರೂ- ಮತ್ತೊಬ್ಬರೂ ಅದೇ ರೀತಿಯಲ್ಲಿ ತಮ್ಮ ತಮ್ಮ ಕಾರ್ಯವನ್ನು....ಜೀವನವನ್ನು ಸಾಗಿಸುತ್ತ.... ಮುಂದುವರೆದರೆ....?"

"....ಅಂದು ಭೂಮಿ ಸ್ವರ್ಗವಾದೀತು...."

"ಎಲ್ಲರೂ ಸುಖಿಯಾದುದನ್ನು ನೋಡಬೇಕೆಂಬ ಇಚ್ಛೆ ಅಂದು ಪೂರ್ಣವಾಗುವದು..."

"ಆದರೆ ಅದು ನನ್ನ ಆಯುಷ್ಯದಲ್ಲಿ ಸಾಧ್ಯವಿಲ್ಲ. ಆದ್ದರಿಂದ ತಕ್ಕ ಮಟ್ಟಿಗೆ ಸುಖಿಗಳಾದುದನ್ನಾದರೂ ನೋಡಬೇಕು ಎಂಬ ಸ್ವಾರ್ಥದಿಂದ ಇದ್ದು ಬಿದ್ದುದನ್ನು ಕೊಡುತ್ತೇನೆ.... ಕೊಟ್ಟಾಗ ಅವರಲ್ಲಿ ತಕ್ಕಮಟ್ಟಿಗಾದರೂ ತೃಪ್ತತೆ.... ಸಮಾಧಾನ ಕಂಡುಬರುತ್ತದೆ.... ಆಗ ಹೃದಯ ತುಂಬುತ್ತದೆ..." ಎಂದು.

ಇಂತಹ ಕಾಮಿನಿ ಯಾರಲ್ಲಿ ಗೌರವ ಹುಟ್ಟಿಸುವದಿಲ್ಲ...? ಅವಳ ಜೀವನ ಬರಿದಾಗಿದೆ. ಆದರೆ ಇನ್ನೊಬ್ಬರ ಜೀವನ ತುಂಬಲಿ ಎಂದು ಪ್ರಯತ್ನ ಪಡುತ್ತಾಳೆ. ಯಾರೇ ಕರೆಯಲಿ. ಯಾವುದೇ ವೇಳೆಯಲ್ಲಿ ಕರೆಯಲಿ, ಕರೆದವರನ್ನು ನಿರಾಶೆಗೊಳಿಸುವದಿಲ್ಲ. ಹಸನ್ಮುಖದಿಂದ ತನ್ನ ಕರ್ತವ್ಯ ಪೂರ್ಣಗೊಳಿಸುತ್ತಾಳೆ.

ಅವಳ ವೈಯಕ್ತಿಕ ಜೀವನದ ಬಗ್ಗೆ ಹಲವು ಜನರು ಹಲವು ಮಾತು ಹೇಳುವದು ನಿಜ.

ಇಂತಹಳಿಗೂ ಹಾಗೆಲ್ಲ ಹೇಳಬಹುದೆ .. ? ಆದರೂ ಜನ ಹೇಳುತ್ತಾರೆ. ಅದರ ಅರಿವು ಕಾಮಿನಿಗೂ ಇದೆ "ಅಂತಹ ವಿಚಾರ ಒಡನುಡಿಯುವದರಿಂದ ಅವರಿಗೆ ಸಮಾಧಾನ ದೊರೆಯುತ್ತಿದ್ದರೆ ಅವರ ಸಮಾಧಾನ ನಾನೇಕೆ ಕಸಿದುಕೊಳ್ಳಬೇಕು....?" ಎಂದು ಕೇಳುತ್ತಾಳೆ.

ಆದರೆ ಅವಳ ವಿಷಯಕ್ಕೆ ಕುಲಕರ್ಣಿಯವರಲ್ಲಿ ಅಪಾರ ಗೌರವವಿತ್ತು. "ಜನರು ನನ್ನೆದುರು ಕೂಡ ಅವಳ ವಿಷಯಕ್ಕೆ ಅಲ್ಲದ ಮಾತು ಆಗೀಗ ಆಡುತ್ತಾರೆ.... ತಮ್ಮ ತಾಯಿಯನ್ನು ತಾವೇ ಅವಮಾನಗೊಳಿಸುತ್ತಿರುವೆವೆಂಬುದರ ವಿಚಾರ ಅವರಿಗೆ ತಿಳಿಯದು...." ಎಂದು ಉಸುರುತ್ತಾರೆ.

ಅವಳು ನಿಜಕ್ಕೂ ಸಾಧ್ವಿ....ಅವಳು ಪತಿಯ ಜೊತೆಗೆ ಇದ್ದರೆ ಅವನನ್ನು ಸುಖಪಡಿಸಬಹುದಿತ್ತು. ತಾನೂ ಸುಖಿಯಾಗಬಹುದಿತ್ತು... ಆದರೆ.... ಪರಮಾತ್ಮನಿಗೆ ಅವಳಿಂದ ಹೆಚ್ಚಿನ ಸೇವೆ ಬೇಕಾಗಿದೆ .. ಅಂತೆಯೇ ಅವಳು ಅನೇಕರಿಗೆ ತಾಯಿಯಾಗಿದ್ದಾಳೆ....ಇದರಲ್ಲಿ ಅಸಾಧುತನವೆಲ್ಲಿಂದ ಬಂತು ? ಸಾಧ್ವಿತನಕ್ಕೆ ಭಂಗವೆಲ್ಲಿಂದ ಬಂತು....? " ಎಂದು ಕುಲಕರ್ಣಿಯವರು ಹೇಳಿದಾಗ ಕಣ್ಣೀರು ಹರಿಯುತ್ತಿತ್ತು.

ಮಾಧವರಾಯರು ಕೂಡ ಅವಳ ವಿಷಯವಾಗಿ ತುಂಬಾ ಗೌರವವಾಗಿ ಮಾತನಾಡುತ್ತಾರೆ.

" ನಾನು ಆ ತಾಯಿಯನ್ನು ತುಂಬಾ ತಪ್ಪಾಗಿ ತಿಳಿದುಕೊಂಡಿದ್ದೆ. ಅವಳ ನಡೆನುಡಿಯಲ್ಲಿ ತುಂಬಾ ಸಹಜತೆ ಇದೆ....ಯಾರ ಜೊತೆಗೂ ಮನ ಬಿಚ್ಚಿ, ಮುಕ್ತ ಹೃದಯದಿಂದ ಮಾತನಾಡುವಳು...ಅವಳು ಇನ್ನೊಬ್ಬರಿಗೆ ತೋರುವ ಮನುಷ್ಯ ಸಹಜ ಪ್ರೇಮಕ್ಕೆ, ಪ್ರೀತಿಗೆ ಅಥವಾ ಮಮತೆಗೆ ನಾನು ತಪ್ಪಾಗಿ ಭಾವಿಸಿದ್ದೆ....ಆದರೆ ಅವಳು ನನ್ನ ಕಣ್ಣು ತೆರೆಸಿದಳು....ಹೆಂಗಸಿಗೆ ತನ್ನ ಸ್ತ್ರೀತ್ವವನ್ನು ಕಾಯ್ದುಕೊಳ್ಳಲು ಯಾರೂ ಕಲಿಸಬೇಕಾಗಿಲ್ಲ. ಅದನ್ನು ಕಾಯ್ದುಕೊಳ್ಳುವದು ತುಂಬ ಕಠಿಣ ಕೆಲಸವೂ ಅಲ್ಲ....ಕೆಲವರು ಇಲ್ಲಿಂದ ಅಪಖ್ಯಾತಿ....ಹೆರವರಿಗೆ ತಿಳಿದರೆ ತನ್ನ ಭವಿತವ್ಯವೇನು....? ಎಂಬ ಹೆದರಿಕೆ

ಯಿಂದ ದೂರವಾಗುತ್ತಾರೆ. ಇನ್ನುಳಿದವರು ಇದು 'ಪಾಪ' ಎಂದು ದೂರಿರುತ್ತಾರೆ... ಆದರೆ ಆ ತಾಯಿ...ಇವೆರಡನ್ನೂ ಒಪ್ಪುವದಿಲ್ಲ....ಅವಳು ಕೇಳುವದು ಈಗಾಗಲೇ ನನಗೆ ನಾಕಷ್ಟು ಅಪಖ್ಯಾತಿ ಬಂದಿದೆ. ಅಂದಮೇಲೆ ನಾನು ನನ್ನ ಭವಿತವ್ಯಕ್ಕಾಗಿ ಹೆದರಬೇಕಿಲ್ಲ.... ..ಅಲ್ಲದೆ ಇದು ಪಾಪವೂ ಅಲ್ಲ ಹಸಿವಾದಾಗ ಊಟ ಮಾಡುವದೂ ಪಾಪವೆ.......? ಇದೂ... .. ಒಂದು....ಹಸಿವು... ಎಂದಾಗ ಕೇಳುವ ಗಂಡಸಿನ ಬಾಯಲ್ಲಿ ನೀರೂರದೆ ಇರುವದೆ ...?... ಕಾರ್ಯವು ಸಾಧಿಸಿತು ಎನ್ನಿಸುತ್ತಿತ್ತು...'ಆದರೆ....'ಎಂದು ಅವಳು ಮತ್ತೆ ಆರಂಭಿಸಿ 'ಇದರ ಉದ್ದೇಶವೇನು...? ಬರಿ ಹಣಕ್ಕಾಗಿಯೇ....?.. . ತಾಯಿ ಎದುರು ಹಣ ಚೆಲ್ಲಿ ಇದನ್ನು ಅಪೇಕ್ಷಿಸುವಿರಾ.......? ಎಂದು ಕೇಳಿದಾಗ ಕೆನ್ನೆಗೆ ಹೊಡೆದಂತೆ ಆಯಿತು. ಮತ್ತೆ ಒಂದೆರಡು ನಿಮಿಷ ತಡೆದು ಅವರು...ಇದು....ನಿಮ್ಮ ತಪ್ಪು ಅಲ್ಲ....ನನ್ನ ತಪ್ಪು... ನೀವು ಆಸ್ಪತ್ರೆಯಲ್ಲಿ ಮಲಗಿದ್ದಾಗ ನಾನು ಆರೈಕೆ ಮಾಡುವಾಗ ಅಷ್ಟೊಂದು ಆತ್ಮೀಯತೆಯನ್ನು ತೋರಿಸಬಾರದಿತ್ತು ...ವೇಳೆಗೆ ಸರಿಯಾಗಿ ಬಂದು ತೆರೆದ ಬಾಯಿಯಲ್ಲಿ ಔಷಧ ತುಂಬಿ ಹೋಗಿದ್ದರೆ ನೀವು ಎಂದಿಗೂ ಈ ಮಟ್ಟಕ್ಕೆ ಬರುತ್ತಿರಲಿಲ್ಲ....ಎಂದಳು... ಸುಮಿತ್ರಾ....ನಾನು ಅವಳನ್ನು ತುಂಬ ತಪ್ಪಾಗಿ ತಿಳಿದುಕೊಂಡಿದ್ದೆ...ಮೋಟಾರ ಅಪಘಾತದಲ್ಲಿ ಕಾಲು ಮುರಿದು ಕೊಂಡು ಆಸ್ಪತ್ರೆಯಲ್ಲಿ ಮಲಗಿದಾಗ ಅವಳು ನನ್ನ ಶುಶ್ರೂಷೆ ತುಂಬ ಮಾಡಿದಳು. ತಾಯಿಗಿಂತ ಹೆಚ್ಚಾಗಿ ಮಮತೆಯಿಂದ.....ಅದಕ್ಕೆ ನಾನು ತಿಳಿದುಕೊಂಡದ್ದು. ಹೆಂಡತಿಯ ಪ್ರೀತಿ ಎಂದು...ಅವಳು ನನ್ನ ಹಣಕ್ಕೆ ನನ್ನ ಸಿರಿವಂತಿಕೆಗೆ ಆಕರ್ಷಿತಳಾಗಿರುವಳೆಂದು ನನ್ನ ತಿಳುವಳಿಕೆ.....ಅದಕ್ಕೆ ಅವಳು ಉತ್ತರ ಕೊಟ್ಟದ್ದು ಆ ರೀತಿಯಲ್ಲಿ ಅವಳು ಮತ್ತೂ ಹೇಳಿದಳು—

"ಈ ಜಗದಲ್ಲಿ ಇರುವವು ಎರಡೇ ಎರಡು, ಗಂಡು-ಹೆಣ್ಣು, ಆದರೂ ಅವರಿಬ್ಬರ ಸಂಬಂಧ...ಪತಿ ಪತ್ನಿ ಎಂದಲ್ಲ....ಪ್ರಾಣಿಗಳಂತೆ ಹೆಣ್ಣು-ಗಂಡು ಎಂದಲ್ಲ....ಸ್ತ್ರೀ ತಾಯಿ... ಅಕ್ಕ ತಂಗಿ....ಮಗಳು...ಗಂಡಸು....ತಂದೆ ಅಣ್ಣ ........ಮಗ....ಇವು ಮನುಷ್ಯರೆನ್ನಿಸಿಕೊಂಡು ಬಾಳಬೇಕಾದವರಲ್ಲಿ ಇದ್ದ ಸಂಬಂಧ....ನೆಂಟತನ. ಪ್ರಾಣಿಗಳಲ್ಲಿ ಇವು ಯಾವ ಸಂಬಂಧವೂ ಇಲ್ಲ. ಗಂಡು....ಎಲ್ಲವೂ ಗಂಡು...ಹೆಣ್ಣು ಎಲ್ಲವೂ ಹೆಂಣು....ನಾವು ಮನುಷ್ಯರು

ಎಂದು ತಿಳಿದುಕೊಂಡಿದ್ದರೆ ನಾವೂ ಮನುಷ್ಯರಂತೆ ಬಾಳಬೇಡವೆ...?.... ರಾಯರೆ....ನೀವು ವಯಸ್ಸಿನಲ್ಲಿ ಹಿರಿಯರು....ಆದರೆ ಸ್ತ್ರೀಗೆ ನಮ್ಮವರು ಕರೆಯುವದು ಗೃಹದೇವತೆಎಂದು. ದೇವತೆ ಎಂದರೆ ತಾಯಿ.... ಅದೇತಾಯಿಯು ಅಧಿಕಾರದಿಂದ ಹೇಳಿದರೆ....ಕೋಪ ಇಲ್ಲವಷ್ಟೆ....?....ಎಂದು ಅವಳು ಕೇಳಿ ದಾಗ ಕೋಪವಲ್ಲ....ನಾಚಿಕೆಯಾಯಿತು ನನಗೆ.....ಅವಳಿಗೆ ಮುಖ ತೋರಿ ಸುವದಕ್ಕೂ ಹೇಸಿಗೆ ಎನ್ನಿಸಿತು. ಆ ವೇಳೆಯಲ್ಲಿ.....ಇಂತಹ ಮುಖ ಕಟ್ಟಿ ಕೊಂಡು ಬಾಳಬೇಕೆ? ಎಂದು ಕೂಡ ಎನ್ನಿಸಿತು........ಅವಳು ಮತ್ತೆ ನನ್ನ ಮುಖನೋಡಿ...ಮಾಧವರಾಯರೆ, ಯಾವುದೋ ವಿಷವೇಳೆಯಲ್ಲಿ ತಪ್ಪು ಆಗುತ್ತದೆ. ಅದಕ್ಕೆ ಪ್ರಾಯಶ್ಚಿತ್ತ ನಮ್ಮನ್ನು ನಾವು ತಿದ್ದಿಕೊಳ್ಳುವದರಲ್ಲಿದೆ. ....ಎಂದು ಹೇಳಿದಾಗ... ಅವಳ ವಿಷಯಕ್ಕೆ ಇಲ್ಲದ ಗೌರವ ನನ್ನಲ್ಲಿ... ಬೇರೆ ಸ್ತ್ರೀಯಾಗಿದ್ದರೆ....ಕೂಗಬಹುದಿತ್ತು.......ನನ್ನನ್ನು ಅವಮಾನಗೊಳಿಸಬಹು ದಿತ್ತು. ಅಂತಹದಾವುದೂ ನಡೆಯಲಿಲ್ಲ.... ಅಷ್ಟೇ ಅಲ್ಲ.... ಅವಳು ಎಂದಿ ನಂತೆಯೇ ಅದೇ ಪ್ರೇಮದಿಂದ, ಅದೇ ಮಮತೆಯಿಂದ, ತಾಯಿ ಮಗನನ್ನು ಕಾಣುವ ರೀತಿಯಲ್ಲಿ ಕಾಣತೊಡಗಿದಳು...!ಸುಮಿತ್ರಾ....ಜಗದಲ್ಲಿ 'ದೇವರು ಇಲ್ಲ' ಎಂದು ಹೇಳುವವರಿಗೆ ಕಾಮಿನಿಯು ಜೀವಂತ ಉದಾಹರಣೆಯಲ್ಲವೇ? ...ಈಗಲೂ ಕೂಡ ಅನ್ನಿಸುತ್ತದೆ... ನಾನೇಕೆ ಅಂದು ಅಂತಹ ಅವಿಚಾರಕ್ಕೆ ಕೈ ಹಾಕಿದೆ...? ಎಂದು. ಅಂದಿನ ಅವಿಚಾರ ನನ್ನಿಂದ ಘಟಿಸದಿದ್ದರೆ.... ತಾಯಿಯ, ದೇವತೆಯ.... ದರ್ಶನವಾದರೂ ಆಗುತ್ತಿತ್ತು...." ಇದು ಆದ ಕ್ಕೊಂದು ಸಮಾಧಾನ ಅಷ್ಟೆ... .... ಜಗದಲ್ಲಿ ಕೆಟ್ಟ, ದುಷ್ಟ ಜನರು ಇರುವ ರೆಂದೇ ಮಹಾತ್ಮರು ಜನ್ಮ ತಾಳುತ್ತಾರೆ.... ಅಲ್ಲವೆ ....? ....ರಾವಣನಿಲ್ಲದಿ ದ್ದರೆ ರಾಮನ ಹೆಸರಾದರೂ ನಮಗೆ ಗೊತ್ತಾಗುತ್ತಿತ್ತೆ....? .... ಕಂಸನಿಲ್ಲದಿ ದ್ದರೆ ಕೃಷ್ಣಾವತಾರಕ್ಕೆ ಅವಕಾಶವೆಲ್ಲಿ...? ರಾಕ್ಷಸರನ್ನು ಹಳಿಯುವದಕ್ಕಿಂತ ತಾವು ಪ್ರಾಣಾರ್ಪಣಕ್ಕೆ ಸಿದ್ಧರಾಗಿ ದೇವರನ್ನು ಪೃಥ್ವಿಗೆ ಎಳೆತಂದುದಕ್ಕಾಗಿ ಅವರಿಗೆ ಮಾನವ ಜನಾಂಗವೇ ಋಣಿಯಾಗಿರಬೇಕು.... ಅಲ್ಲವೆ...?"

ಮುಕ್ತ ಹೃದಯದಿಂದ ಮಾಧವರಾಯರು ಮಾತನಾಡುವದನ್ನು ಕೇಳಿ ದಾಗ, ಅವರಿಗಾಗಿ ಗೌರವ ಹುಟ್ಟುತ್ತದೆ. ಅವರು ಕೂಡ ಕಾಮಿನಿಯ ವಿಷ ಯಕ್ಕೆ ಗೌರವ ಪರವಾಗಿ ಮಾತನಾಡಿದುದನ್ನು ಕೇಳಿದರೆ ಕಾಮಿನಿಗಾಗಿ

ಆದರವು ಹೆಚ್ಚಾದರೂ ಮಾಧವರಾಯರು ಇಂತಹಹೇಯಕಾರ್ಯಕ್ಕೆ ಉದ್ಯು ಕ್ತರಾದರೇಕೆ.... ಎಂಬ ಪ್ರಶ್ನೆ ಮನದಲ್ಲಿ ಅದೆಷ್ಟು ಹತ್ತಿಕ್ಕಿದರೂ ಸೀಡಿದೇಳು ತ್ತದೆ ಸಿಡಿಮದ್ದಿನಂತೆ.

ಏಕೆ....?

ಕಾಮಿನಿಯನ್ನು ತಾಯಿ ಎಂದು ಗೌರವಿಸುತ್ತಾರೆ. ಕಾಮಿನಿಯಿಂದ ತಾವು ಪಾಠಕಲಿತುದಾಗಿ ಒಪ್ಪಿಕೊಳ್ಳುತ್ತಾರೆ. ಅದನ್ನು ಒಪ್ಪಿಕೊಳ್ಳುವ ಪ್ರಾಮಾಣಿಕತೆಯಲ್ಲಿ ಅವಿಶ್ವಾಸ ಅಥವಾ ಅಪನಂಬಿಕೆ ತೋರಲು ಸಾಧ್ಯವಿಲ್ಲ. ಆದರೆ....

ಆದರೆ ಕಾಮಿನಿಯಿಂದ ಕಲಿತ ಪಾಠವು ಮರೆತು ಹೋಯಿತೆ....? ಅಂದು ಕಾಮಿನಿಯನ್ನು ಬಯಸಿದ್ದರು ಅದು ಕೈಗೂಡಲಿಲ್ಲ.... ಕಾಮಿನಿ ಅಲ್ಲದಿದ್ದರೆ ಇಲ್ಲ... ಇನ್ನೊಬ್ಬಳು ಎನ್ನುವಂತೆ ನನ್ನಲ್ಲಿಗೆ ಬಂದರೆ....? ಅದಕ್ಕೆ ಸಹಾಯಕಳು ಕಾಮಿನಿ....!

ಕಾಮಿನಿ ಮಾಧವರಾಯರಿಗೆ ಸಹಾಯಕಳು....!

ಎಂತಹ ಆಶ್ಚರ್ಯ ! ಎಂತಹ ವಿಚಿತ್ರತೆ....?

ಒಬ್ಬಳು ದೇವಿ. ಇನ್ನೊಬ್ಬರು ಸಜ್ಜನರು. ಇಬ್ಬರೂ ಕೂಡಿ ಒಂದು ಹೆಣ್ಣನ್ನು ವ್ಯಭಿಚಾರಕ್ಕೆಳೆಯುವದು....!

ಮಾಧವರಾಯರು ನನ್ನನ್ನು ಹೆಂಡತಿಗಿಂತ ಹೆಚ್ಚಾಗಿ ಕಾಣುವದಾಗಿ ಹೇಳುತ್ತಾರೆ. ಹೆಂಡತಿಯನ್ನು ಮನೆಯಲ್ಲಿ ಬಿಟ್ಟು ನನ್ನಲ್ಲಿಗೆ ಬರುವವರ ಮಾತನ್ನು ನಾನು ನಂಬಬೇಕೆ ...?

ಹಾಗಾದರೆ ಸಾವಿತ್ರಿಯಾಗುವ ನನ್ನ ಕನಸಿಗೆ ನೀರು ಬಿಡಬೇಕೆ...?

ಎಂತಹ ವಿಚಿತ್ರ ಜಗತ್ತು ಇದು....? ಯಾರನ್ನೂ ನಂಬಲುಬಾರದು. ಯಾರನ್ನೂ ನಂಬದಿದ್ದರೆ ಬದುಕಲು ಸಾಧ್ಯವಿಲ್ಲ. ಕಾಮಿನಿಯನ್ನು ನಂಬಿದೆ. ಅವಳು ನನ್ನನ್ನು ಮಾಧವರಾಯರಿಗೆ— ಒಪ್ಪಿಸಿದಳು. ಒಪ್ಪಿಸುವಾಗ ಹೇಳಿ ದಳು "ನೀನು ಸುಖಿಯಾಗುವದಕ್ಕಾಗಿ ನನಗೆ ಬೇಡವಾದರೂ ಈ ಕಾರ್ಯ ಮಾಡಬೇಕಾಗಿದೆ" ಎಂದು.

ಸನ್ಯಾಸಿನಿಯಂತೆ ಇರುವ ಸ್ತ್ರೀಕೂಡ ಹೀಗೆ ಆಚರಿಸಬೇಕೆ....? ಹೀಗೆಲ್ಲ ಆಚರಿಸುವವರು ಸನ್ಯಾಸಿನಿಯರೆ....? ಅವಳೂ ಕೂಡ ಡಾಂಭಿಕಳೆ...? ಎಲ್ಲವೂ ನಟನೆಯೇ....?

ಮಾಧವರಾಯರ ಪ್ರೀತಿಕೂಡ ನಟನೆಯೇ? ಕಾಮಿನಿಯ ವರ್ಣನೆ ಮಾಡಿದ್ದೆಲ್ಲವೂ ಕಟ್ಟುಕತೆಯೆ...?

ಯಾವುದನ್ನೂ ತಿಳಿಯದ ಅವಸ್ಥೆಯಲ್ಲಿ ನನ್ನ ತಲೆ ಭ್ರಮಿಸುತ್ತಿತ್ತು.

ಕಾಮಿನಿ ಹೀಗೇಕೆ ಮಾಡಿದಳು...? ಮಾಧವರಾಯರಿಗೆ ಕಾಮಿನಿ ಸಹಾಯಕಳೆ....? ತನ್ನ ಮೇಲೆ ಕೈಮಾಡಲು ಬಂದ ಪರ ಪುರುಷನ ಕೈಯಲ್ಲಿ ತನ್ನನ್ನು ನಂಬಿದ ಓರ್ವ ನಿರಾಶ್ರಿತ ಅಬಲೆಯನ್ನೇಕೆ ಅವಳು ಒಪ್ಪಿಸಿದಳು?

ಸಜ್ಜನತೆಯ ದೊಡ್ಡ ಪಾಠವನ್ನು ಶುಚಿಯಾಗಿ ಹೇಳುವ ಮಾಧವ ರಾಯರು ಕಾಮಿನಿಯಿಂದ ಕೈ ಸುಟ್ಟುಕೊಂಡಿದ್ದರೂ ಅದೇ ಕೈಯಿಂದ ನನ್ನ ನ್ನೇಕೆ ಮುಟ್ಟಿದರು....? ಇನ್ನೂ ಅವರಿಗೆ ಹೆಣ್ಣಿನ ಮೋಹ ಸಾಕಾಗಿಲ್ಲವೆ....? ಸುಟ್ಟ ಗಾಯ ಪೂರ್ಣವಾಗಿ ಗುರುತುಳಿಯದಂತೆ ಮಾಯ್ದು ಹೋಗಿದೆಯೆ? ಕಾಮಿನಿಯಿಂದ ಒಂದು ಸಲ ಪಾಠ ಕಲಿತು, ಅವರು ಮತ್ತೆ ಪರಸ್ತ್ರೀಗಾಗಿ ಅಪೇಕ್ಷಿಸಿದರೇಕೆ....? ಪರಸ್ತ್ರೀಯನ್ನು ತಾಯಿಯಾಗಿ ಕಾಣಬೇಕೆಂದು ಅವ ರಿಗೇ ಪಾಠ ಕಲಿಸಿದ ಕಾಮಿನಿ, ಅವರಿಗೇನೆ ಪರಸ್ತ್ರೀಯಾದ ನನ್ನನ್ನು ಒಪ್ಪಿ ಸಿದಳೇಕೆ...? ಅವಳೆದುರು ಅವರು ಒಪ್ಪಿಕೊಂಡರೇಕೆ....?

ಪ್ರಶ್ನೆಯ ಸರಪಳಿ ಹರದಾರಿಯುದ್ದಕ್ಕೂ ಎಲ್ಲಿಯೂ ಕಡಿಯದೆ ನಿಂತಿದೆ ನನ್ನನ್ನು ಮುಂದೆ ಬಿಡದೆ. ಈ ಪ್ರಶ್ನೆಗಳಿಗೆ ಉತ್ತರ....?

ಕಾಮಿನಿ ಕೊಡಬೇಕು, ಮಾಧವರಾಯರು ಕೊಡಬೇಕು. ಅವರ ಕೊಟ್ಟ ಉತ್ತರ ನನಗೆ ವೇದವಾಕ್ಯವಾಗಬೇಕು. ಅವರು ಸತ್ಯ ಹೇಳಲಿ ಅಸತ್ಯ ಹೇಳಲಿ ಅದು ನನ್ನ ಪಾಲಿಗೆ ಸತ್ಯವಾಗಲೇಬೇಕು. ಅದಕ್ಕೆ ಅಸತ್ಯ ವೆಂದರೆ ನಾನು ದುಃಖಿ. ಏಕೆಂದರೆ ಅವರಿಲ್ಲದಿದ್ದರೆ ನಾನಿಲ್ಲ. ಏನೇ ಆದರೂ ಇಂದು ಅವರು ನನ್ನ ರಕ್ಷಕರು. ಅವರಿಲ್ಲದೆ ನನ್ನ ಬಾಳು ಇಲ್ಲ. ಅವರು ಕೈ ಬಿಟ್ಟರೆ ಮಾಧವರಾಯರಿಗಿಂತ ಕ್ರೂರರ ಕೈಗೆ ಸಿಕ್ಕು ಬಾಳಬೇಕು. ಬೇಡ

ವಾದರೆ....ಹದ್ದು ಕಾಗೆಗಳಿಗೆ ಅಥವಾ ಮೀನ ಮೊಸಳೆಗಳಿಗೆ ಆಹಾರವಾಗ ಬೇಕು....

ಮೀನ ಮೊಸಳೆಗಳಿಗೆ ಆಹಾರವಾಗದಿದ್ದರೆ ಮಾಧವರಾಯರಿಗೆ ಆಹಾರವಾಗಬೇಕು....

ಆದರೆ ಮಾಧವರಾಯರು ನನ್ನನ್ನ'ಆಹಾರ'ವೆಂದು ತಿಳಿದುಕೊಂಡಿಲ್ಲ. ನಾನು ಅವರ ಆಹಾರ ಅಲ್ಲ ನನಗಾಗಿ ಅವರಲ್ಲಿ ' ಕಾಮುಕ ' ಭಾವನೆ ಕಂಡು ಬರುವದಿಲ್ಲ.

ಗಂಡಸಿನ ಕಾಮದ ಉಗ್ರಾವಸ್ಥೆಯ ಸವಿಯನ್ನು ರಂಗನಿಂದ ಉಂಡಿ ರುವೆ. ಆತ ರಾಕ್ಷಸ...ಹೆಣ್ಣುಗಂಡಿನ ಇಚ್ಛೆಯಿಂದಲೇ ಕಾಮ ಜೀವನಕೆ ಸೊಗಸು ಎನ್ನುವದನ್ನು ಆತ ಅರಿಯನು. " ಅವನಿಗೆ ಬೇಕು ! ಅದಕ್ಕೆ ನಾನು ಬಲಿಯಾಗಬೇಕು ' ಇದುವೆ ಕೃತಿಯಿಂದ ಸಿದ್ಧವಾದುದು. ಅಂತಹ ಆಚರಣೆ ಮಾಧವರಾಯರಲ್ಲಿ ಇಲ್ಲ .. ....

ಅವರು ತಿರುತಿರುಗಿ ಹೇಳುತ್ತಾರೆ...." ನೀನು ನನಗೆ ಬೇಕು...ನೀನಿಲ್ಲ ದಿದ್ದರೆ....ನಾನು ಹಾಳಾಗಬಹುದು...." ಎಂದು. ಆದರೆ ಬೇಕಾದುದು ಏತಕ್ಕಾಗಿ....?

ದೈಹಿಕ ಜೀವನದಲ್ಲಿ ಅವರಿಗೆ ಆಸಕ್ತಿಯಿಲ್ಲ. ನನ್ನವರ ಸಹವಾಸದಲ್ಲಿ ನಾನು ಅನುಭವದಿಂದ ಹೇಳುವ ಮಾತು ಇದು. ಆದರೂ ಅವರು ಹೇಳು ತ್ತಾರೆ " ನೀನು ನನಗೆ....ಬೇಕು " ಎಂದು.

ಯಾವುದೇ ಕಾರಣದಿಂದ ಆಗಲಿ, ನಾನು ಅವರವಳು ಆಗಿರುವೆ. ಅದ ರಲ್ಲಿ ಸಂಶಯವಿಲ್ಲ. ನನಗೆಕೂಡ ಯಾವುದೂ ಬೇಕಾಗದಿದ್ದರೂ ಅವರು ನನ್ನನ್ನು ನಡುನೀರಿನಲ್ಲಿ ಕೈ ಬಿಡಬಾರದು ಎನ್ನಿಸುತ್ತಿದೆ. ಅದಕ್ಕಾಗಿ ನಾನು ಅವರಿಗೆ ಯಾವ ರೀತಿಯಿಂದಲೂ ವಿರೋಧವಾಗದ ರೀತಿಯಲ್ಲಿ ನಡೆದು ಕೊಳ್ಳುವೆ. ವಿವಾಹವಾಗಿರದಿದ್ದರೂ ವೈವಾಹಿಕ ಪತ್ನಿಗಿಂತ ಹೆಚ್ಚಾಗಿರುವೆ. ಅದನ್ನು ಅವರು ಕೂಡ ಒಪ್ಪಿಕೊಳ್ಳುತ್ತಾರೆ.

" ಸುಮಿತ್ರಾ,.... ನೀನು ಹೋದ ಜನ್ಮದಲ್ಲಿ ನನ್ನ ಪತ್ನಿಯಾಗಿ ದ್ದಿರಬಹುದು...,ಇಲ್ಲದಿದ್ದರೆ... ಸಂಬಂಧ ಇಷ್ಟು ಸಾಮೀಪ್ಯವಾಗಲು ಸಾಧ್ಯ

ವಿಲ್ಲ...ಹತ್ತಾರು ವರುಷ ಸಂಸಾರ ಮಾಡಿದ ಹೆಂಡತಿಗಾಗಿಕೂಡ ತನ್ನ ಗಂಡ ನಿಗಾಗಿ ನಿನ್ನಷ್ಟು ದಕ್ಷಳಾಗಿರಲಾರಳು...ಆರಂಭದಲ್ಲಿ ನಾನು ಸಲಹಬೇಕಾಗಿ ರುವ ಜೀವಿಗಳಲ್ಲಿ ನೀನು ಒಂದು ಎಂದು ಭಾವಿಸಿದ್ದೆ. ಆದರೆ... ನನ್ನನು ಸಲಹಬೇಕಾದವಳೇ ನೀನು ಎನ್ನುವದು ಈಗ ಮನದಟ್ಟಾಗತೊಡಗಿದೆ.... ನೀನೇ ಮುಂಚಿತವಾಗಿ ನನ್ನ ಜೀವನದಲ್ಲಿ ಬಂದಿದ್ದರೆ....?" ಎಂದು ಉಸಿರ್ಗ ರೆಯುತ್ತಾರೆ.

ಏಕೆ....?

ಮುಂಚಿತವಾಗಿ ನಾನು ಅವರ ಜೀವನದಲ್ಲಿ ಬಂದಿದ್ದರೆ....? ಅವರ ಜೊತೆಗೆ ವಿವಾಹವಾಗಿದ್ದರೆ.... ಆಗಿದ್ದರೆ...?

ನನ್ನ ಮನದಲ್ಲಿ ತಿರುತಿರುಗಿ ಪುಟಿದೆದ್ದು ಬರುವ ಅನೇಕ ಪ್ರಶ್ನೆಗಳಲ್ಲಿ ಇವೂ ಕೆಲವು ಅವರ ಜೀವನದಲ್ಲಿ ಮುಂಚಿತವಾಗಿ ಬಂದಿದ್ದರೆ........ ನನ್ನವರ ವಿವಾಹವಾಗುತ್ತಿತ್ತು. ನಾವಿಬ್ಬರೂ ಸುಖಿಗಳಾಗುತ್ತಿದ್ದೆವು. ಇಂದಿನ ವಿಚಾರದಿಂದ ಹಿಂದೆಂದೂ ಆಗದ ಮುಂದೆಂದೂ ಆಗಲಾರದ ಕನ ಸಿಗೆ ಕೊಡುವ ಉತ್ತರ.

ಮುಂಚಿತವಾಗಿ ನಾನವರ ಜೀವನದಲ್ಲಿ ಬಂದಿದ್ದರೆ....?

ಮುಂದೆ ಘಟಿಸಬಹುದಾದುದನ್ನು ಯಾವನೊಬ್ಬ ವಿದ್ವಾನ ಜ್ಯೋತಿಷಿ ಹೇಳಬಹುದು. ಆದರೆ ಎಂದೆಂದೂ ಆಗಲಾರದ ವಿಚಾರಕ್ಕೆ ಉತ್ತರಿಸು ವದು ಯಾರಿಗೂ ಸಾಧ್ಯವಿಲ್ಲ....

ಮುಂಚಿತವಾಗಿ ನಾನವರ ಜೀವನದಲ್ಲಿ ಬಂದಿದ್ದರೆ....?

ಇಂದು ಅವರು ತಮ್ಮ ಪತ್ನಿಯನ್ನು ತಾತ್ಸಾರ ಮಾಡುವಂತೆ ನನ್ನನ್ನು ಮಾಡಬಹುದಿತ್ತು.

ನಾನು ಇಂದಿನಂತೆಯೇ ಅವರಿಗನುಕೂಲಳಾಗಿ ಅವರ ಸೇವೆಗೆ ದಕ್ಷ ಳಾಗಿ ಇದ್ದಿದ್ದರೆ....?

ಇಂದು ಅವರು ಹೇಳುವಂತೆಯೇ ಅಂದು ಆಚರಿಸಬಹುದಾಗಿತ್ತಲ್ಲವೇ? ಯಾರು ಈ ಪ್ರಶ್ನೆಗೆ ಉತ್ತರಿಸುವವರು ? ...ನಾನು ರಂಗನ ಸೇವೆಯನ್ನು ದಕ್ಷೆಯಿಂದಲೇ ಮಾಡುತ್ತಿರಲಿಲ್ಲವೇ...? ಆದರೂ ಕೊನೆಗೆ "ನನಗೇನೂ ಅರಿ ಯದು." ಎಂದು ಹೇಳಲಿಲ್ಲವೆ....?

ಆಹುದು. "ನನಗೇನೂ ಅರಿಯದು" ಎಂದು ಹೇಳುವವ ನನ್ನ ಪತಿ ಯಾಗಿರಲಿಲ್ಲ. ಬೀದಿಯ ತಿಪ್ಪೆಯಲ್ಲಿ ಬಿದ್ದ ಹಣ್ಣು ನಾನಾಗಿದ್ದೆ ದಾರಿ ಯಿಂದ ಸಾಗುವ ಭಿಕ್ಷೆಯ ಹುಡುಗ ಅವನಾಗಿದ್ದ. ತಿಪ್ಪೆಯಲ್ಲಿದ್ದ ಹಣ್ಣಿಗೆ ಅವನೇ ಒಡೆಯ... ಅಂತೆಯೇ ಆದರ- ನನ್ನ- ಆವಸ್ಥೆಯನ್ನು ತನಗುಚಿತ ರೀತಿಯಲ್ಲಿ ಮಾಡಿದ ...

ಮಾಧವರಾಯರೂ ನನ್ನ ಪತಿಯಲ್ಲ....

ನಾನು ಮುಂಚಿತವಾಗಿ ಅವರ ಜೀವನದಲ್ಲಿ ಬರಲಿಲ್ಲ.... ಹಿಂದಿನಿಂದ ಬಂದಿದ್ದೇನೆ. ಮುಂಚಿತವಾಗಿ ಬಂದಿದ್ದರೆ ಪತ್ನಿಯಾಗುತ್ತಿದ್ದೆ. ಹಿಂದಿನಿಂದ ಬಂದುದಕ್ಕಾಗಿ ಆ ಜಾಗೆಯಿಲ್ಲದೆ ಸಿಕ್ಕ ಜಾಗೆಯಲ್ಲಿಯೇ ತೃಪ್ತಿಪಡಬೇಕು.

ಆ ಸ್ಥಾನವೂ ನನ್ನಿಂದ ಕಳೆದುಹೋಗಲಾರದಷ್ಟೆ....?

ಇದಕ್ಕೆ ಉತ್ತರ ಮಾಧವರಾಯರ ಆಶ್ವಾಸನ...

"ಸುಮಿತ್ರಾ.... ದುಃಖಿಯಪೇಕ್ಷಿಸುವದು ಸುಖವನ್ನು.... ದುಃಖಿ ಯಾದ ನಾನು ನಿನ್ನಹತ್ತರ ಬಂದೆ. ಬಂದುದು ಸುಖದ ಆಸೆಯಿಂದಲೂ ಅಲ್ಲ. ದುಃಖದ ನಿವಾರಣೆಗಾಗಿಯೂ ಅಲ್ಲ.... ನೀನೂ ದುಃಖಿ.... ನನ್ನಿಂದಾದಷ್ಟು ನಿನಗೆ ಸಹಾಯ ಮಾಡಬೇಕು ಎಂಬ ಬುದ್ಧಿಯಿಂದ... ಆದರೆ.... ನನ್ನಿಂದ ನಿನ್ನ ಸಾಂತ್ವನ ಮಾಡುವದಾಗಲಿಲ್ಲ. ಅದಕ್ಕೆ ಬದಲಾಗಿ ನಾನು ನಿನ್ನಿಂದ ಸಾಂತ್ವನ ಹೊಂದಿದೆ... ಪುನಃ ನನ್ನನ್ನು ದುಃಖಿ ಮಾಡುವದಿಲ್ಲವಷ್ಟೆ ?

ಎಂದು ಮಾಧವರಾಯರು ಕೇಳುವದು ಪ್ರಶ್ನೆಯಲ್ಲ; ಅದು ನನಗಿತ್ತ ಆಶ್ವಾಸನ....

ಆದರೆ ಕಾಮಿನಿ "ಗಂಡಸರನ್ನು ನಂಬಬೇಡ" ಎಂದು ಹೇಳುತ್ತಾಳಲ್ಲ? ನಾನು ಮಾಧವರಾಯರನ್ನು ನಂಬಬೇಡವೇ....? ಅವರ ಆಶ್ವಾಸನಕ್ಕೆ ಬೆಲೆ ಕೊಡದೆ ತುಚ್ಛ ಮಾಡಲೇ....?

"ಗಂಡಸರನ್ನು ನಂಬಬೇಡ" ಎಂದವಳು ನನ್ನನ್ನು ಅದೇ ಜಾತಿಯವರ ವಶಕ್ಕೆ ಏಕೆ ಒಪ್ಪಿಸುವಳು...? ಎಲ್ಲರೂ ಒಬ್ಬರಂತೆಯೇ ಇರುವರೆ....? ಹಾಗಿ ದ್ದರೆ ಜಗತ್ತೇ ಅವಿಶ್ವಾಸಮಯವಾಗಿ ವಿಶ್ವಾಸದ ಭಸ್ಮ ಕೂಡ ಸಾಗರದಲ್ಲಿ

ಅಗ್ರೈಶ್ಯವಾಗಬಹುದಿತ್ತು. ಪತಿವ್ರತೆಯಾದವರು ಪತಿಯನ್ನು ನಂಬದೇ ಪತಿ ವ್ರತೆಯರಾದರೆ... ?

ಸತ್ಯವಾನನಲ್ಲಿ ವಿಶ್ವಾಸವಿಲ್ಲದಿದ್ದರೆ ಸಾವಿತ್ರಿ ಆ ಭಯಂಕರ ಯಮ ನೊಂದಿಗೆ ಹೋರಾಡುತ್ತಿದ್ದಳಾದರೂ ಏಕೆ ? .. ಪತಿಗಾಗಿ ಪತ್ನಿಯಲ್ಲಿ ವಿಶ್ವಾ ಸವಿರಲೇಬೇಕು. ಇಲ್ಲದಿದ್ದರೆ ಅನರ್ಥ.

ಅನರ್ಥ ಕಂಡ ಗಂಡಸರನ್ನು ನಂಬುವದರಿಂದ.... ಲಾಲಸೆ ಇಲ್ಲದ ಗಂಡಸು ಸಿಕ್ಕುವದು ವಿರಲ .. ಗಂಡುನೆಂದು ಬಾಳುವವನಲ್ಲಿ ಸಹಜವಾಗಿ ಇರುವದು ಲಾಲಸೆ.... ಹೆಣ್ಣಿಗಾಗಿ ಲಾಲಸೆ.... ಅದು ಗಂಡಸಿನ ರಕ್ತದಲ್ಲಿ ಪರಂಪರಾಗತವಾಗಿ ಬೆಳೆದು ಬಂದಿದೆ. ಅದು ಅನಿವಾರ್ಯ ಮತ್ತು ಅವಶ್ಯ.

ಲಾಲಸೆ ಇಲ್ಲದಿದ್ದರೆ ಸಂಸಾರದಲ್ಲಿ ಸುಖವಿರಲಾರದು. ಲಾಲಸೆ ಯಿಂದಲೇ ಗಂಡು ಹೆಣ್ಣುಗಳಲ್ಲಿ ಒಂದಕ್ಕಾಗಿ ಇನ್ನೊಂದರಲ್ಲಿ ಎಳೆತ ಆ ಎಳೆ ತವೇ ಒಂದು ಬಂಧನ. ಆ ಬಂಧನದ ಬೆಳವಣಿಗೆಯಲ್ಲಿಯೇ ಅಡಗಿದೆ ಪ್ರಚ್ಛನ್ನ ವೇಷದಿಂದ ಪ್ರೀತಿ.... ಪ್ರೇಮ....

ಗಂಡು ಹೆಣ್ಣುಗಳ ಮಿಲನದ ಉದ್ದೇಶವೇನು........?.......ವಿವಾಹದ ಉದ್ದೇಶವಾದರೂ ಏನು....? ವಿವಾಹದ ಉದ್ದೇಶ ಹಿರಿಯರು "ವಂಶದ ಬೆಳ ವಣಿಗೆಗಾಗಿ ಎಂದು ಹೇಳುವದೂ, ಪುರಾಣವು ಪ್ರಜೋತ್ಪತ್ತಿಗಾಗಿ" ಎಂದು ಹೇಳುವದೂ ಒಂದೇ. ಅವರ ದೃಷ್ಟಿಯಲ್ಲಿ ಅದು ನಿಜವೂ ಕೂಡ. ಏಕೆಂದರೆ ಅವರು ಹಿರಿಯರು ಆದರೆ ಅವರೇ ತರುಣರಾಗಿದ್ದಾಗ 'ನೀನು ವಿವಾಹ ಮಾಡಿಕೊಳ್ಳುವ ಉದ್ದೇಶವೇನು ?' ಎಂದು ಕೇಳಿದರೆ ಎಂತಹ ಸ್ಪಷ್ಟವಾ ದಿಯೂ ಉತ್ತರಿಸಲಾರ. ಏಕೆಂದರೆ ಅವನ ಉತ್ತರಕ್ಕೂ ಅವನ ಹಿರಿಯರ ಮಾತಿಗೂ ತುಂಬಾ ಅಂತರ.

ಪ್ರಜೋತ್ಪಾದನೆಯೇ ವಿವಾಹದ ಉದ್ದೇಶವಾದರೂ ಅದು ದೇವ ಉದ್ದೇಶ. ದೇವರ ಇಚ್ಛೆ ಮನುಷ್ಯರದಲ್ಲ.

'ಸುಂದರ ತರುಣಿ'ಯನ್ನು ಮನುಷ್ಯರು ವಿವಾಹವಾಗಲಿಚ್ಛಿಸು ವದೇಕೆ....?

"ಪ್ರಜೋತ್ಪಾದನೆಗಾಗಿ" ಎಂಬ ಉತ್ತರ ಇದಕ್ಕೆ ಸರಿಹೋಗಬಹುದೆ? ಕುರೂಪಿ ಸ್ತ್ರೀಯರು ತಾಯಿಯಾಗುವದಕ್ಕೆ ಅನರ್ಹರೆ...?

ಸತ್ಯ ಅಡಗಿದ್ದುದು ಸ್ಪಷ್ಟತೆಯಲ್ಲಿ ಸ್ಪಷ್ಟವಾಗಿ ಹೇಳುವದಾದರೆ ಅದರ ಉದ್ದೇಶ- ಲಾಲಸೆ...ದೈಹಿಕ ಸುಖದ ಲಾಲನೆ ಆಸೆ... ತೃಷ್ಣೆ ....

ಜಗದ ಇತಿಹಾಸ ಇದನ್ನು ಸ್ಪಷ್ಟಪಡಿಸುತ್ತದೆ. ದೇವರಾಗಲಿ ದೈತ್ಯ ರಾಗಲಿ, ಮನುಷ್ಯರಾಗಲಿ, ಪ್ರಾಣಿಗಳಾಗಲಿ ಎಲ್ಲರಲ್ಲಿಯೂ ಅಡಗಿದ್ದುದು ದೈಹಿಕ ಸುಖದ ಲಾಲನೆ, ತೃಷ್ಣೆ. ಅದುವೆ ಒಂದು ಬಂಧನ ಎಂದೆಂದಿಗೂ ಕಡಿಯದ ಬಂಧನ.

ಈ ಕಡಿಯದ ಬಂಧನವೇ ಕಟ್ಟಿರುವದು ಇಬ್ಬರನ್ನು. ಗಂಡನ್ನು— ಹೆಣ್ಣನ್ನು. ಒಬ್ಬರಿಗಾಗಿ ಇನ್ನೊಬ್ಬರಲ್ಲಿ ಆಕರ್ಷಣೆ....ಆದರಿಂದ ಆತ್ಮೀಯತೆ ಮುಂದೆ ಪ್ರೀತಿ...

ಒಬ್ಬರಿಗಾಗಿ ಇನ್ನೊಬ್ಬರಲ್ಲಿ ಆಕರ್ಷಣೆ ಮುಂದುವರಿದು ಆತ್ಮಿಯತೆ ಯಲ್ಲಿ ಪ್ರೀತಿಯಲ್ಲಿ ಪರಿಣಮಿಸದಿದ್ದಾಗ ಆಕರ್ಷಣೆ ಆಕರ್ಷಣೆಯಾಗಿ ಉಳಿ ಯುವದು.

ಆಕರ್ಷಣೆ ಸತ್ಯವಾದರೂ ನೆರೆಯಂತೆ....

ನೆರೆ ಬರುತ್ತದೆ....ನಿಜ. ಆದರೆ ಬಂದ ನೆರೆ ಇಳಿದು ಹೋಗಲೇ ಬೇಕು. ಇಳಿಯುತ್ತದೆ.

ಆಕರ್ಷಣೆ ನೆರೆಯಂತೆ ಭೋರ್ಗರೆಯುತ್ತ ಬರುತ್ತದೆ. ಉಕ್ಕುತ್ತ ಬರುತ್ತದೆ. ಹುಚ್ಚುಹುಚ್ಚಾಗಿ ಇದ್ದುದನ್ನು ಕೊಚ್ಚಿಕೊಂಡು ನುಗ್ಗಿಕೊಂಡು ಬರುತ್ತದೆ. ಬಂದ ನೆರೆಯ ನೀರನ್ನು ತಡೆದು ಸಂಗ್ರಹ ಮಾಡುವದಕ್ಕೆ ಮಹಾ ಆಣೆ ಕಟ್ಟು ಬೇಕು. ಆತ್ಮೀಯತೆಯೇ ಆಣೆ ಕಟ್ಟು. ಆಣೆ ಕಟ್ಟಿನಲ್ಲಿ ತಡೆದ ನೀರು ಸಾಗರವಾಗಿ ನಿಲ್ಲುತ್ತದೆ. ಪ್ರೇಮಸಾಗರವಾಗಿ ತುಂಬಿ ನಿಲ್ಲುತ್ತದೆ....

ಆಣೆಕಟ್ಟು ಇಲ್ಲದಿದ್ದರೆ.. .ನೀರು ಹರಿದು ಹೋಗುತ್ತದೆ. ಹೊಳೆ, ಬೇಸಿ ಗೆಯ ಹೊಳೆಯಾಗಿ ಉಳಿಯುತ್ತದೆ....ಜೀವನದ ಒಂದು ಕಾಲದಲ್ಲಿ ಮಳೆ ಗಾಲ ಬರುತ್ತದೆ. ಬಂದಾಗ ಆಕರ್ಷಣೆಯ ನೆರೆ ಬರುತ್ತದೆ. ಆಣೆಕಟ್ಟು ಇಲ್ಲವೆಂದು ನೆರೆ ಬರುವದು ನಿಲ್ಲುವದಿಲ್ಲ.

ಕಾಮಿನಿ ಹೇಳುವ "ಗಂಡಸರನ್ನು ನಂಬಬೇಡ" ಇದು ಬುದ್ಧಿವಾದ, ಅನುಭವಿಗಳು ತಿಳಿಸುವ ತಿಳುವಳಿಕೆಯ ಮಾತು. ಅದನ್ನು ಅಲ್ಲಗಳೆಯು ವದೂ ಸಾಧ್ಯವಿಲ್ಲ.

ಆದರೆ ಆಕರ್ಷಣೆಯನ್ನು–ಲಾಲಸೆಯನ್ನು– ಧಿಃಕರಿಸಿ ಬಾಳುವದೂ ತುಂಬ ಕಠಿಣವಾದುದು.

ಲಾಲಸೆಯ–ಆಕರ್ಷಣೆಯ ನೆರೆಯಲ್ಲಿ ಎಲ್ಲರೂ ಸಿಗುತ್ತಾರೆ. ಕೆಲ ವರು ಆದರಿಂದ ಧನ್ಯರಾಗುತ್ತಾರೆ. ಕೆಲವರು ನುಚ್ಚುನೂರಾಗಿ ಕೊನೆಗೆ ಸಾಗರದಲ್ಲಿ ಹೇಳ ಹೆಸರಿಲ್ಲದವರಾಗುತ್ತಾರೆ.

ನನ್ನಲ್ಲಿಯೂ ಅಂತಹ ಜೀವನಕ್ಕಾಗಿ, ಸುಖಕ್ಕಾಗಿ ಲಾಲಸೆ ಇಲ್ಲವೆಂದು ಹೇಳಿದರೆ ಅದು ಡಾಂಭಿಕ ಉತ್ತರವಾದೀತು.........ನಾನೂ ಉಪ್ಪು ಉಣ್ಣುವ ಜೀವ. ಉಪ್ಪಿನ ಗುಣಗಳು ನನಗೆ ಬೇಕಾಗಲಿ ಬೇಡವಾಗಲಿ ಉತ್ಪನ್ನ ವಾಗುತ್ತವೆ....

ಲಾಲಸೆಯೇ ಒಂದು ಉಪ್ಪಿನಗುಣ. ಅದು ನನ್ನನ್ನು ಮೆಟ್ಟಿ ಆಳದಿದ್ದರೂ ಅದೂ ಒಂದು ಅಸ್ತಿತ್ವದಲ್ಲಿರುವ ವಸ್ತು....ಇಲ್ಲವೆಂದು ಬಹಿರಂಗವಾಗಿ ಹೇಳಿ ದರೂ ಅಲ್ಲಗಳೆಯಲು ಸಾಧ್ಯವಿಲ್ಲ. ಹಸಿವು ನೀರಡಿಕೆ ನಿದ್ರೆಯಂತೆ ನಿತ್ಯವೂ ಜನ್ಮತಾಳುವದು ಅದು. ಉಪವಾಸವಿರಬಹುದು. ನೀರಡಿಕೆಯಾದರೂ ತಡೆದುಕೊಳ್ಳಬಹುದು. ನಿದ್ರೆ ಬಂದರೂ ತಡೆದು ನಿಲ್ಲಿಸಬಹುದು....ಆದರೆ ಕೊನೆಯವರೆಗಲ್ಲ. ಕೆಲಕಾಲದ ವರೆಗೆ.....

ನಾನೂ ಸನ್ಯಾಸಿನಿಯಲ್ಲ. ಸಂಸಾರಿ ಎಂದು ಜಗದ ಮುದ್ರೆ ನನ್ನ ಮೇಲೆ ಇರದಿದ್ದರೂ ನಾನೂ ಸಂಸಾರವನ್ನು ಬಯಸುವ ಜೀವಿ. ಮಾಧವ ರಾಯರಿಂದಾಗಿ ಸಂಸಾರಿಯಾದ ಜೀವಿ.

ನನಗೂ ಹಸಿವು ಆಗುತ್ತದೆ. ಅಂತೆಯೇ ದೈಹಿಕ ಸುಖದ ಆಶೆ ನನ್ನ ಲ್ಲಿಯೂ ಮೂಡುತ್ತದೆ. ಅದನ್ನು ತಡೆದುಕೊಳ್ಳಬಹದು. ಆದರೆ ತ್ಯಜಿಸಿ ಬಾಳಬಹುದೆ....?

ಬಾಳಬಹುದು. ಆದರೆ ಮಾಧವರಾಯರ ಜೊತೆಗೆ ಇದ್ದು ಕೊಂಡು ಅಲ್ಲ........

ನನ್ನಂತಹದೇ ಮನಸ್ಸು ಮಾಧವರಾಯರಲ್ಲಿರಬಹುದು. ಅಂತೆಯೇ ಅವರು ನನಗೆ ಆಶ್ರಯ ಕೊಟ್ಟಿದ್ದಾರೆ. ಇಲ್ಲದಿದ್ದರೆ ಆಶ್ರಯ ಕೊಡುತ್ತಿದ್ದರಾದರೂ ಏಕೆ....?

ಅವರು ಹೇಳುವದು "ನೀನೂ ದುಃಖಿ.... ನನ್ನಿಂದಾದಷ್ಟು ಸಹಾಯ ಮಾಡಬೇಕೆಂಬ ಬುದ್ಧಿಯಿಂದ ನಿನ್ನ ಹತ್ತಿರ ಬಂದೆ." ಎಂದು.

ಅವರ ಮಾತಿನಲ್ಲಿ ನನಗೆ ಅವಿಶ್ವಾಸ ತೋರಿಸುವದಿಲ್ಲ. ಅದು ಸತ್ಯ ಎಂದೇ ನನ್ನ ಮತ.

ಆದರೆ ನನ್ನವರ ಮಧ್ಯದಲ್ಲಿ ಅದೇ ಸಂಬಂಧ ಇಂದೂ ಉಳಿದಿದೆಯೆ ?

ಅವರೇ ಹೇಳುವ "ಸರಕಾರದ ಕಾಯಿದೆ ಇಲ್ಲದಿದ್ದರೆ ನಾನು ನಿನ್ನ ಜೊತೆಗೆ ವಿವಾಹ ಮಾಡಿಕೊಳ್ಳುತ್ತಿದ್ದೆ" ಎನ್ನುವದು ನಮ್ಮಲ್ಲಿ ಪತಿ ಪತ್ನಿ ಸಂಬಂಧವನ್ನು ಸ್ಪಷ್ಟಪಡಿಸುವದಿಲ್ಲವೇ...?

ಉಳಿದೆಲ್ಲ ಸಂಬಂಧಗಳಿಗಿಂತ ಚಿರಕಾಲ ಬಾಳಿ ಉಳಿಯುವದು ಪತಿ ಪತ್ನಿಯರ ಸಂಬಂಧವಲ್ಲದೆ ಇನ್ನಾವುದೂ ಅಲ್ಲ. ಎಲ್ಲೆಲ್ಲಿಯೋ ದೂರದಲ್ಲಿ ಒಬ್ಬರು ಇನ್ನೊಬ್ಬರಿಗರಿಯದಂತೆ ಜನ್ಮ ತಾಳಿದ್ದರೂ ಅವರು ಕೂಡಿದ ಕ್ಷಣದಿಂದ ಸಾಯುವ ವರೆಗೂ ಒಂದಾಗಿ ಬಾಳುತ್ತಾರೆ. ಮಧ್ಯ ಅನೇಕ ಅನರ್ಥಗಳು ಒದಗುತ್ತವೆ ಜೀವನದ ಜ್ವಾಲಾಮುಖಿ ಬಾಯ್ತೆರೆದು ಅಗ್ನಿ ಪ್ರವಾಹವನ್ನು ಪ್ರವಹಿಸುತ್ತದೆ. ಆದರೂ ಅವರು ದೂರಾಗುವದಿಲ್ಲ... ತಮ್ಮ ಕೈಕಾಲು ನಡೆಯದಾದಾಗ ಕೈಗೋಲಾಗಲಿ ಎಂದು ಮಕ್ಕಳನ್ನು ಹೆರುತ್ತಾರೆ. ತರುಣ ಮಗ ತನ್ನ ಸಂಗಾತಿಯೊಂದಿಗೆ ತನ್ನ ಸಂಸಾರದಲ್ಲಿ ಮಗ್ನನಾಗುತ್ತಾನೆ. 'ತಂದೆ ತಾಯಿಗಳು 'ತನ್ನನ್ನು ಹೆತ್ತವರು' ಎನ್ನುವ ಕರ್ತವ್ಯಬುದ್ಧಿಯಿಂದ ಅವರನ್ನು ನೋಡುವದಲ್ಲದೆ ಆತ್ಯಂತಿಕ ಪ್ರೇಮದಿಂದಲ್ಲ. ಏಕೆಂದರೆ ಆತನ ಪ್ರೇಮ ಆತನ ಪತ್ನಿಯಲ್ಲಿರುತ್ತದೆ... ಮಗಳು ತನ್ನ ಪತಿಯೊಂದಿಗೆ ತನ್ನ ಮನೆಯಲ್ಲಿ.... ತನ್ನ ಹೃದಯವನ್ನು ತೆರೆದು ಹೇಳುವದಾದರೆ ಪತ್ನಿ, ಪತಿ ಎದುರು ಅಲ್ಲದೆ ಮಕ್ಕಳೆದುರು ಅಲ್ಲ... ಮಗನಿಗೆ ತಾಯಿ ತಂದೆಯ ದುಃಖದ ಕತೆಯಿಂದ ಕನಿಕರವೆನ್ನಿಸಬಹುದು. ಆದರೆ ಅವರೊಡನೆ ಐಕ್ಯವಾಗಲು ಸಾಧ್ಯವಿಲ್ಲ. ಪತಿ ಪತ್ನಿಯ ದುಃಖದಲ್ಲಿ ಲೀನನಾಗುತ್ತಾನೆ. ಪತಿ ಪತ್ನಿಯ

ಕಷ್ಟದಲ್ಲಿ ಕೈ ಚಾಚಿ ಕಸಿದುಕೊಳ್ಳುತ್ತಾಳೆ. ದುಃಖದಲ್ಲಿದ್ದ ಆಚರಣೆಯೇ ಸುಖದಲ್ಲಿಯೂ ಕೂಡ....

ಇದನ್ನು ಅಲ್ಲಗಳೆಯಲು ಸಾಧ್ಯವಿಲ್ಲ.

ಇದಕ್ಕೆಲ್ಲ ಕಾರಣ ಅವರಲ್ಲಿರುವ ಪ್ರೀತಿ. ಆತ್ಮೀಯತೆ ಇವಕ್ಕೆ ಮೂಲ ದೈಹಿಕ ಸುಖದ ಲಾಲಸೆ.

ಅಂತಹ ಸುಖದ ಲಾಲಸೆ, ಅಥವಾ ಆಶೆಯೇ ನನ್ನನ್ನು ಅವರ ಬಳಿಗೆ ಸಾಗಿಸದಿದ್ದರೂ ಅವರನ್ನು ನನ್ನ ಬಳಿಗೆ ಕರೆ ತಂದಿರಬಹುದು. ಅದಕ್ಕೆ ನಾನಾದರೂ ಏಕೆ ವಿರೋಧ ತೋರಿಸಬೇಕು ? ಅಥವಾ ಜುಗುಪ್ಸೆಪಟ್ಟು ಕೊಳ್ಳಬೇಕು....?

ಆದರೆ... ಅಂತಹದೇ ಆಕರ್ಷಣೆ ಮತ್ತೆ ಅವರನ್ನು ಬೇರೊಂದೆಡೆಗೆ ಎಳೆದರೆ...?

ಅಂತಹ ವಿಚಾರವೂ ಅಸಹನೀಯ.

ನಿಜಕ್ಕೂ ಇದು ಆಶ್ಚರ್ಯಕರ. ನಾನವರ ಪತ್ನಿಯಲ್ಲ; ಅವರು ನನ ಪತಿಯಲ್ಲ. ಆದರೂ ಅವರು ಇನ್ನೊಂದೆಡೆಗೆ ಆಕರ್ಷಿತರಾಗುವದನ್ನು ನನ್ನಿಂದ ಸಹಿಸಲಾಗದು.

ಸ್ತ್ರೀ, ಸಹನಾಮೂರ್ತಿ ಎಂದು ಹೇಳುವರು. ಆದರೆ ತನ್ನ ಪತಿ ತನ್ನನ್ನು ಅಗಲಿ ಅಥವಾ ತನ್ನಿಂದ ದೂರಾಗಿ ಇನ್ನೊಬ್ಬರ ಜೊತೆಯಲ್ಲಿರುವ ದನ್ನು ಸಹಿಸಲಾರಳು.

ಅದುವೇ ಕಾಮಿನಿಯ ಕತೆ.

ಕಾಮಿನಿ ಹೇಳುವದು ಕೂಡ ಅದನ್ನೇ—

"ಯಾವುದನ್ನೂ ಸಹಿಸಬಹುದು. ತನ್ನ ಪತಿ ತನ್ನಿಂದ ದೂರಾಗುವ ದನ್ನು, ದೂರಾಗಿ ಸನ್ಯಾಸಿಯಾಗುವದನ್ನೂ ದುಃಖದಿಂದಾದರೂ ಸಹಿಸ ಬಹುದು. ಮರಣ ಹೊಂದಿದುದನ್ನು ಕಣ್ಣಾರೆ ಕಾಣಬಹುದು. ಆದರೆ ತನ್ನ ಪತಿ ತನ್ನಿಂದ ದೂರಾಗಿ ಇನ್ನೊಬ್ಬ ಸ್ತ್ರೀಯ ಜೊತೆಗೆ ಹೋಗುವದನ್ನು ಸಹಿಸಲಾರಳು.... ತನ್ನಿಂದ ದೂರಾದ ಪತಿ, ಮರಣ ಹೊಂದಿದನೆಂದು ತಿಳಿ

ಡುಕೊಂಡು ಇರಬಾರದೇಕೆ....? ಆದರೆ ಇರುವದಿಲ್ಲ...ಇರಲು ಸಾಧ್ಯವಿಲ್ಲ."

" ಅದಕ್ಕೆ ಕಾರಣ....? ಸ್ವಾರ್ಥ. "

" ತನ್ನ ಸೊತ್ತು ಇನ್ನೊಬ್ಬರ ಪಾಲಾದುದನ್ನು ಸಹಿಸದಿರುವದು ಮನುಷ್ಯ ಸ್ವಭಾವ ಕೈಯಲ್ಲಿದ್ದ ಅಮೃತ ಬೀದಿಯಲ್ಲಿ ಬಿದ್ದು ಮಣ್ಣುಪಾಲಾ ಡುದನ್ನು ನೋಡಿ ಮರುಗಿ ಮುಖ ಚಿಕ್ಕದು ಮಾಡಿಕೊಂಡಿರಬಹುದು " ಆದರೆ ಕೈಯಲ್ಲಿದ್ದುದನ್ನು ಇನ್ನೊಬ್ಬರು ಕಸಿದುಕೊಂಡು ಹೋದುದನ್ನು ಸಹಿಸಲಾ ಗದು. "

" ಇದು ವಿಚಿತ್ರವಲ್ಲವೆ....? "

" ಆದರೂ ಸತ್ಯ...ಪತಿಯ ಮರಣವನ್ನು ಸಹಿಸುವಳು. ಆದರೆ ಪರರ ಪಾಲಾದುದನ್ನು ಸಹಿಸಲಾರಳು....ಅಂತಹ ಮನೋಭಾವ ಮನುಷ್ಯನದಿದೆ. ನಾನೂ ಮನುಷ್ಯಳು ಅಂತೆಯೇ ನಾನು ದುಃಖಿಯಾಗಿದ್ದೆ....ನನ್ನಂತಹರೇ ಸಾವಿರಾರು......ಲಕ್ಷಾವಧಿ . ...ಜನರು....ಸುಮಿತ್ರಾ.....ನನ್ನಂತಹರಲ್ಲಿ ಒಬ್ಬರು.......ಮಾಧವರಾಯರು........"

ಮಾಧವರಾಯರು....!...!

ಕಾಮಿನಿ ಹೇಳುತ್ತಾಳೆ ' ಮಾಧವರಾಯರು ' ಎಂದು.

ಅವರ ಯಾವ ವಸ್ತು ಪರರ ಪಾಲಾಗಿದೆ...?

ಅವರು ಉದಾರಿಗಳು. ಬೇಡದವರಿಗೆ ಕೂಡ ಬೇಕಾದುದನ್ನು ನೀಡುವ ಧನಿಗಳು....

ಅವರ ಯಾವ ವಸ್ತು ಪರರ ಪಾಲಾಗಿದೆ....?

ಯಾವ ವಸ್ತು ಪರರ ಪಾಲಾದರೂ ಮನುಷ್ಯ ಸಹಿಸುವ....

ಸ್ತ್ರೀಯಂತಹ ಸ್ವಭಾವವೇ ಪುರುಷನದು...

ಪತಿ ಪರರ ಪಾಲಾದುದನ್ನು ಸ್ತ್ರೀ ಸಹಿಸಳು....

ಪತ್ನಿ ಪರರ ಪಾಲಾದುದನ್ನು ಪತಿ ಸಹಿಸನು...

ಹಾಗಿದ್ದರೆ......?

ಛೀ........ಹಾಗಾಗಬಾರದು  ಅದು ಪಾಪ .. ....

ಆದರೆ ಯಾರಿಗೆ....?

ಮಾಧವರಾಯರು ತಾವಾಗಿ ದೂಡಿರಬಹುದೆ....? ತಾವಾಗಿ ದೂಡಿದವಳು ಎಲ್ಲಿ ಹೋದರೇನು— ಯಾರ ಪಾಲಾದರೇನು...? ಅದಕ್ಕಾಗಿ ದೂಡಿದವರು ದುಃಖಿಸಲಾರರು.

ಹಾಗಿದ್ದರೆ....ಅವಳಾಗಿಯೆ....?

ಹೀಗೂ ಆಗುವದೆ...? ಆಗಬಹುದೆ....?

ಅದಕ್ಕೇನೆ ಮಾಧವರಾಯರು " ನಾನೂ ದುಃಖಿ..." ಎಂದು ಹೇಳಿಕೊಳ್ಳುತ್ತಿರಬಹುದೆ...?

ಇದುವೆ...? ಅವರ ದುಃಖ ಇದುವೆ ಅವರ ದುಃಖವೆ....?

ಅದಕ್ಕೇ ಆವರು " ದುಃಖಿ ಅಪೇಕ್ಷಿಸುವದು ಸುಖವನ್ನು? ಎಂದು ಹೇಳಿದರೆ....?

"....ನಿನ್ನಿಂದಾಗಿ ನಾನು ಸಾಂತ್ವನ ಹೊಂದಿದೆ..........ನೀನು ಪುನಃ ನನ್ನನ್ನು ದುಃಖಿ ಮಾಡುವದಿಲ್ಲವಷ್ಟೆ....? " ಎಂದು ಕೇಳುವದು ಕೂಡ ನಾನು ಅವರನ್ನು ಬಿಟ್ಟು ಹೋಗಬಾರದೆಂದು ಕೇಳುವರೆ....?

ಜಗ ಎಂತಹ ವಿಚಿತ್ರವಿದೆ.. !

ಗಂಡಸು ಎಂತಹನೇ ಇರಲಿ ಅವನೊಂದಿಗೆ ಪ್ರಾಮಾಣಿಕಳಾಗಿದ್ದು ಸಂಸಾರ ಸಾಗಿಸುವ ಇಚ್ಛೆ ನನ್ನದು.

ಒಳ್ಳೆಯ ಪತಿಯನ್ನು ತಾನಾಗಿ ಹುಡುಕಿ ಅವನೊಂದಿಗೆ ಒಂದೇ ಮನದಿಂದ ಸಂಸಾರ ಸಾಗಿಸಲಿಚ್ಛಿಸಿದಳು ಕಾಮಿನಿ.

ಸದ್ಗುಣಿ ಪತಿ ತಾನಾಗಿ ದೊರೆತಿದ್ದರೂ ಅವನೊಂದಿಗೆ ಪ್ರಾಮಾಣಿಕಳಾಗಿ ಇರಬಯಸಲಿಲ್ಲ ಮಾಧವರಾಯರ ಪತ್ನಿ....

ಎಂತಹ ವಿಚಿತ್ರ....ಎಷ್ಟು ಅದ್ಭುತ ವಿಚಿತ್ರ....!

ದೇವನ ಸೃಷ್ಟಿಯೇ ಚಿತ್ರ ವಿಚಿತ್ರ ಜನಕ್ಕೊಂದು ಮನ. ಒಂದೊಂದು ಮನಕ್ಕೆ ಸಾವಿರಾರು ರೆಂಬೆಗಳು...ಒಂದೊಂದು ರೆಂಬೆಗೆ ಸಾವಿರಾರು ಎಲೆಗಳು ಒಂದೊಂದು ಎಲೆಯಲ್ಲಿ ಕೂಡ ಮತ್ತೆ ಸಾವಿರಾರು ಸೀಳುಗಳು....

ಇದಕ್ಕೆ ಅಂತವೆಲ್ಲಿ...?

ಈ ಜಗವನ್ನು ಅರಿತುಕೊಳ್ಳಲು ಸಾಧ್ಯವಿದೆಯೆ....? ಅರಿತುಕೊಂಡು ಬಾಳಲು ಸಾಧ್ಯವಿದೆಯೆ ? ಅರಿತುಕೊಂಡು ಬಾಳಲು ಅಸಾಧ್ಯವಿದ್ದಾಗ ಬಾಳುವದಾದರು ಹೇಗೆ...?

" ಇಂತಹದಕ್ಕೆಲ್ಲ ಹೆದರಿದರೆ ಹೇಗೇ " ಎಂದು ಕಾಮಿನಿ ಕೇಳುತ್ತಾಳೆ.

ಹೆದರಬಾರದು ಹೆದರಿದರೆ ಬಾಳುವೆ ಮಾಡುವದಾಗದು. ನಿಜ. ಆದರೆ ಸುತ್ತಲಿನಿಂದ ಮುತ್ತಿ ಬರುವವರಲ್ಲಿ ಒಬ್ಬರಾದರೂ ದೇವರಿಲ್ಲ. ಎಲ್ಲರೂ ದೈತ್ಯರು.

" ಮುತ್ತಿ ಬರುವವರೇ ದೈತ್ಯರು....ದೇವರು ಮುತ್ತಲು ಬರುವದಿಲ್ಲ. ಎಂದು ಕಾಮಿನಿ ಹೇಳುವಳು.

" ದೇವ ಹೊರಗಿನಿಂದ ಬರುವದಿಲ್ಲ.. ....ಅವನು ಬರುವದೇ ಇಲ್ಲ. ಏಕೆಂದರೆ ಆತ ಒಳಗೇ ಇರುತ್ತಾನೆ " ಎಂದು ಕುಲಕರ್ಣಿಯವರು ಹೇಳುತ್ತಿದ್ದರು.

" ದೈತ್ಯರನ್ನು ಹುಡುಕಲು ನಾವೆಲ್ಲಿಯೂ ಹೋಗಬೇಕಾಗಿಲ್ಲ. ಎಲ್ಲೆಲ್ಲಿಯೂ ಅವರೇ ಅವರಾಗಿ ತುಂಬಿಕೊಂಡಿದ್ದಾರೆ...ಆದರೆ ಹುಡುಕಿದರೂ ಸಿಕ್ಕಲಾರ, ದೇವ...ಎಂದು ಮಾಧವರಾಯರು ಹೇಳುತ್ತಾರೆ.

ಎಲ್ಲರೂ ತಮತಮಗೆ ತಿಳಿದುದನ್ನು ಹೇಳುತ್ತಾರೆ. ಆದರೆ ನಾನು....?

ನನಗೆ ಯಾವದೂ ತಿಳಿಯದಾಗುತ್ತದೆ....ಎಲ್ಲೆಲ್ಲಿಯೂ ಕಠಿಣತೆ ಕಂಡು ಬರುತ್ತದೆ. ಇದರಿಂದ ಈ ಕಠಿಣತೆಯಿಂದ ನಾನು ಮುಕ್ತಳಾಗಬಹುದೆ...."

ಒಂದು ದಿನ ಕುಲಕರ್ಣಿಯವರು ಹೇಳಿದ್ದರು—

" ಎಲ್ಲವೂ ಕಠಿಣವಿದೆ ನಿಜ. ಆದರೆ ಕಠಿಣವೇ ಸರಳವಿದೆ....ಸುಲಭವಿದೆ " ಎಂದು

ಎಷ್ಟೊಂದು ವಿಚಿತ್ರ ಅಲ್ಲವೆ ಅವರು ಹೇಳುವದು....? ಆದರೆ ಅವರನ್ನು ಪೂರ್ಣ ಅರಿತಾಗ ಅವರು ಹೇಳಿದುದು ನಿಜ. ಎನ್ನಿಸದೇ ಇರಲಾರದು

ಅವರು ಹೇಳುವದು—

“ ಅಂಬೆಗಾಲು ಇಕ್ಕುವ ಮಗುವಿಗೆ ಮೇಲಿದ್ದ ವಸ್ತು ತಗೆದುಕೊಳ್ಳುವದು ಕಠಿಣ. ಆದರೆ ನನಗೆ ನಿಮಗೆ ಅದು ಕಠಿಣವೆ...?....ಅಲ್ಲ ಬೆಳೆಯದಿರುವ ಮಗುವಿಗೆ ಮೇಲಿನ ವಸ್ತು ಕೈಗೆ ಸಿಕ್ಕುವದು ಕಠಿಣ ದುಸ್ತರ ಎನ್ನಿಸುವಂತೆ ಬೆಳೆಯದಿರುವ ಮನಸ್ಸಿಗೆ ಎಲ್ಲವೂ ಕಠಿಣವೆನ್ನಿಸುತ್ತದೆ. ಅವರ ಬೆಳೆಯದ ಮನದ ವಿಚಾರದಲ್ಲಿ ಅದು ಕಠಿಣವೂ ನಿಜ...ಆದರೆ ನಿಜಕ್ಕೂ ಕಠಿಣವೆ ?....ನೀವು ಮನೆ ಬಿಟ್ಟಾಗ ಬಾಳು ‘ ಕಠಿಣ ’ವೆನ್ನಿಸಿತ್ತು. ಆದರೆ ದಿನಗಳು ಕಳೆದು ಹೋದವಲ್ಲವೆ....?... ನಾವು ‘ ಕಠಿಣ ’ವೆಂದು ಕರೆಯುವದೇತಕ್ಕೆ .. ?....ಯಾವುದೊ ಒಂದು ಆಪತ್ತು ಆಕಸ್ಮಾತ್ತಾಗಿ ಬಂದಿದೆ ಎಂತಲೆ ಅಲ್ಲವೆ ನಾವು ಕಠಿಣತೆಯಲ್ಲಿ ಸಿಕ್ಕಿವೆ ಎಂದು ಹೇಳುವದು.......?....ಅದು ಬಂದಿವೆ ಎಂದಮೇಲೆ ಹೋಗಲೇಬೇಕಲ್ಲವೆ....?... ”

“...ಯಾವುದು ಇದೆ ಅದು...ಇಲ್ಲದಾಗುವದಿಲ್ಲ. ಆದರೆ ಯಾವುದು ಬಂದಿದೆ ಅದು ಹೋಗುವದು....ನಿಶ್ಚಿತ....ಆಕಾಶಕ್ಕೆ ತೂರಿದ ಕಲ್ಲು ಅಲ್ಲಿಯೇ ನಿಲ್ಲುವದೆ...?....ನಮ್ಮ ದೇಹದೊಂದಿಗೆ ಅಲ್ಲ ಆತ್ಮದೊಂದಿಗೆ ಬೆಳೆದು ಬಂದಿದೆ ಸರಳತನ. ಮಧ್ಯದಲ್ಲಿ ಉದ್ಭವಿಸಿದೆ ಕಠಿಣತನ....ಹುಟ್ಟಿದ್ದು ಸಾಯುವದು. ಆದರೆ ಯಾವುದರ ಜನ್ಮವೇ ಆಗಿಲ್ಲ ಅದು ಸಾಯುವದಾದರೂ ಹೇಗೆ......? ....ಕಠಿಣತೆ ಮಧ್ಯದಲ್ಲಿ ಆಕ್ರಮ ವೃತ್ತಿಯಿಂದ ಮೇಲೇರಿ ಬಂದಿದೆ.......ಅದು ಮೇಲೇರಿ ಬಂದಾಗ ಅಳ್ಳೆದೆಯವರಿಗೆ ಕೊಂಚ ಹೆದರಿಕೆಯಾಗುವದು ನಿಜ. ಆದರೆ ಧೈರ್ಯ ತಂದುಕೊಂಡು ತಡೆದು ನಿಂತರೆ, ಎದುರಿಸಿ ನಿಂತರೆ .. ... ಆಕ್ರಮತೆ, ಕಠಿಣತೆ ಪಲಾಯನ ಮಾಡುವದು. ಆಗ್ಗೆ ಉಳಿಯುವದು.... ಸರಳತೆ....”

“ನೀವು ಹೆದರುತ್ತಿರುವಿರಿ. ಅಂತೆಯೇ ಎಲ್ಲವೂ ಕಠಿಣವಿದೆ. ಕೊಂಚ ಧೈರ್ಯ ತಂದುಕೊಂಡು ಎದುರಿಸಿರಿ. ಕಠಿಣವೇ ಸರಳವಾಗುವದು. ಅಂಬೆಗಾಲು ಹಚ್ಚಿ ಮೇಲಿನ ವಸ್ತು ತೆಗೆದುಕೊಳ್ಳಲು ಹೋದರೆ ಕಠಿಣವೆನ್ನಿಸುವದು.... ಸಿಕ್ಕಲಾರದು. ಆದರೆ ನಿಮ್ಮ ಕಾಲಮೇಲೆ ಎದ್ದು ನಿಂತು ತೆಗೆದುಕೊಳ್ಳಿರಿ. ಆ ... ವಸ್ತುವೇ ನಿಮ್ಮೆಡೆಗೆ ಧಾವಿಸುವದು....”

ಕುಲಕರ್ಣಿಯವರ ಈ ಮಾತುಗಳು ಕೇಳುವದಕ್ಕೆ ತುಂಬ ವಿಚಿತ್ರವಲ್ಲವೇ? ಆದರೆ ಅವರು ತೋರಿಸಿದ ದಾರಿಯಿಂದ ಮುಂದೆ ಸಾಗಿದಾಗ ನಿಜವೂ

ಎನ್ನಿಸುತ್ತದೆ ಅವರ ವಿಚಾರ.

ಯಾವುದೂ ತಿಳಿಯದಾದಾಗ ಎಲ್ಲವೂ ಕಠಿಣವೆನ್ನಿಸುತ್ತದೆ........ ಕಣ್ಣು ಮುಚ್ಚಿದಾಗ.. .... ಎಲ್ಲೆಲ್ಲಿಯೂ ಕತ್ತಲೆ ಎನ್ನಿಸಿದಂತೆ ಆಗ್ಗೆ ಅನ್ನಿಸುತ್ತದೆ— 'ನಾನು ಈ ಕತ್ತಲೆಯಿಂದ ಮುಕ್ತಳಾಗಬಹುದೆ.......? ಎಂದು. ಆದರೆ ಕಣ್ಣು ತೆರೆಯದೆ ಬೆಳಕು ಕಾಣುವದಾದರೂ ....ಹೇಗೆ...? ಕಣ್ಣು ತೆರೆಯಬೇಕಾದವಳು ನಾನು....

ನಾನು ಕಣ್ಣು ತೆರೆದು ನೋಡಬೇಕು.... ನೋಡಲೇಬೇಕು.....

ಜಗವು ವಿಚಿತ್ರ. ಆದರೆ ವಿಚಿತ್ರತೆಗೆ ಹೆದರಿ ಅದನ್ನು ಅರಿತುಕೊಳ್ಳದೆ ಇರಲಾರದೀತೆ....? ಸುತ್ತುವರಿದು ಮುತ್ತುವವರು ದೈತ್ಯರು. ನಿಜ. ದೈತ್ಯರು. ಆದರೆ ಅವರಿಗೆ ಶರಣಾಗತಳಾಗುವದು ಹೇಗೆ....? ಶರಣಾಗತಳಾಗುವದೆಂದರೆ ನಾನೂ ದೈತ್ಯಕುಲದಲ್ಲಿ ಕೂಡಿಕೊಳ್ಳುವದು. ಅವರೊಡನೆ ಕೂಡಿಕೊಂಡು ಅವರಂತಾಗುವದು.

ಅದಾಗದು ನನ್ನಿಂದ.... ಅದಕ್ಕಾಗಿ ಕುಲಕರ್ಣಿಯವರು ನನ್ನನ್ನು ಬದುಕಿಸಲಿಲ್ಲ. ಅದಕ್ಕಾಗಿ ನನ್ನನ್ನು ರಕ್ಷಿಸಲಿಲ್ಲ... ಅದಕ್ಕಾಗಿ ಕಾಮಿನಿ ರಕ್ಷಿಸಲಿಲ್ಲ.... ಆದಕ್ಕಾಗಿ ಮಾಧವರಾಯರು ನನ್ನನ್ನು ಮುಂದೆ ಕರೆಯಲಿಲ್ಲ.

ನಾನು ಕುಲಕರ್ಣಿಯವರು ತೋರಿಸಿದ ದಾರಿಯಲ್ಲಿ ನಡೆಯುವಾಗ ಕಾಮಿನಿ ಕೊಟ್ಟ ಕೈದೀಪವನ್ನು ದಾರಿಗೆ ಹಿಡಿದುಕೊಂಡು ನಡೆಯಬೇಕು.

"ನಾವೂ ಕೂಡ ಕತ್ತಲೆಯಲ್ಲಿ ನಡೆಯಕೂಡದು. ಕತ್ತಲೆಯಲ್ಲಿ ದಾರಿ ಕಾಣಿಸಬೇಕಾದರೆ ಕೈದೀಪ ಬೇಕು. ಕೈ ದೀಪವಿದ್ದರೆ ದಾರಿಯ ಕಠಿಣತೆ ಸುಲಭವಾಗುವದು...ನಮ್ಮ ಸುರಕ್ಷತೆಗಾಗಿ, ನಮ್ಮ ಸಹಾಯಕ್ಕಾಗಿ ಬೆಳಕು ಬೇಕು. ಬೆಳಕು ಕೊಡುವ ಜ್ಯೋತಿ ಬೇಕು. ಅದನ್ನು ನಾವು ತಗೆದುಕೊಂಡು ಸಾಗಲೇ ಬೇಕು....ನಾವು ಜ್ಯೋತಿಯನ್ನು ಬೆಳಕನ್ನು ಕೈದೀಪವೆತ್ತಿಕೊಂಡು ಸಾಗುವಾಗ ಅದು ನಮಗಲ್ಲದೆ ಕತ್ತಲೆಯಲ್ಲಿ ಸಾಗುವ ಇನ್ನುಳಿದವರಿಗೂ ಬೆಳಕು ತೋರುವದು...ದಾರಿದೋರುವದು...."

ಎಂದು ಕುಲಕರ್ಣಿಯವರು ಹೇಳಿದ್ದರು...ಅದುವೇ ಅವರು ನನಗೆ ಹೇಳಿದ ಕೊನೆಯ ಮಾತು...ವಿಚಾರ....

ಕೊನೆಯದು...!

ಅಲ್ಲ....ಅವರ ವಿಚಾರಕ್ಕೆ ಕೊನೆಯಿಲ್ಲ. ಅದು ಎಂದಿಗೂ ಕೊನೆಯಾಗ ಲಾರದು ...ಅವರು ಕಲಸಿದ ವಿಚಾರ ದಾರಿಯ ಬುತ್ತಿಯಲ್ಲ....ಎಂದೆಂದಿಗೂ ಶಾಂತವಾಗದ ಜ್ಯೋತಿ....ಅದು ನನ್ನ ಜೊತೆಗೆ ಇರುವಾಗ ' ಕೊನೆಯದು ' ಎನ್ನುವದಾದರೂ ಹೇಗೆ....?

ಅವರು ಕಲಿಸಿದಂತೆ ಸಾಗಬೇಕು. ಅವರು ತೋರಿಸಿದ ದಾರಿಯಿಂದ ಸಾಗಬೇಕು....ಅವರು ಕಲಿಸಿದ್ದು— ಕಠಿಣತೆಯನ್ನು ಎದುರಿಸಲು...ಪರಿಸ್ಥಿತಿಗೆ ಹೊಂದಿಕೊಳ್ಳಲು.......ನಾನು ಪರಿಸ್ಥಿತಿಗೆ ಹೊಂದಿಕೊಂಡು ಕಠಿಣತೆಯನ್ನು ಎದುರಿಸಬೇಕು....

ಎಂತಹ ಕಠಿಣತೆ....!

ವಿಚಿತ್ರ ಜಗದಲ್ಲಿ ಬಾಳುವದು ಕಠಿಣವೇ? ಇಲ್ಲ. ಎಂದೆಂದಿಗೂ ಕಠಿಣವಲ್ಲ....ನನ್ನಂತೆ ಇನ್ನೊಬ್ಬರಿಲ್ಲ. ನಿಜ. ಆದರೂ ನನಗೆ ಅದರಿಂದ ತೊಂದರೆಯಿಲ್ಲ. ರಂಗ ನನ್ನಂತೆ ಇರಲಿಲ್ಲ. ನಾನು ತೋರಿದ ವಿಶ್ವಾಸ ಅವನು ತೋರಿಸಲಿಲ್ಲ. ಆದರೆ ಅದರಿಂದ ನನಗೆ ಉಪಯೋಗವೂ ಆಯಿತು. ಅಪಕಾರವೂ ಆಯಿತು.

ಉಪಯೋಗ ಅಪಕಾರ ಎರಡೂ ಬೇರೆ ಬೇರೆಯಾದರೂ ಇರುವದು ಒಂದೇ ಸ್ಥಳದಲ್ಲಿ, ಉಪ್ಪು, ಸಿಹಿ, ಕಾರ.... ಕಹಿ...ಎಲ್ಲವೂ ಒಂದಕ್ಕೊಂದು ವಿರುದ್ಧವಾದ ವಸ್ತು...ಆದರೆ— ನಿತ್ಯದ ಅನ್ನದಲ್ಲಿ ಎಲ್ಲವೂ ಕೂಡುವದಿಲ್ಲವೆ...? ಅದರಿಂದ ಅನ್ನಕ್ಕೆ ರುಚಿ ಬರುವದಿಲ್ಲವೆ....? ಹೃದಯದಲ್ಲಿ ತ್ಯಾಗಕ್ಕೆ ಹೊಂದಿಕೊಂಡೇ ಸ್ವಾರ್ಥವೂ ಇದೆ. ಸದ್ಗುಣದ ಭುಜಕ್ಕೆ ಭುಜ ಅನಿಸಿಕೊಂಡು ನಿಂತಿದೆ ದುರ್ಗುಣ. ದುರ್ಗುಣವಿಲ್ಲದಿದ್ದರೆ ಸದ್ಗುಣಕ್ಕೆ ಬೆಲೆಯಿಲ್ಲ... ರಂಗ ಅಪಕಾರ ಮಾಡಿರದಿದ್ದರೆ ಕುಲಕರ್ಣಿಯವರ ಉಪಕಾರದ ಉಪಯೋಗ ವಿರುತ್ತಿರಲಿಲ್ಲ.

ರಂಗನನ್ನು ನಾನು ತುಂಬ ಹಳಿದೆ....ಇನ್ನು ಕೂಡ ಮನದ ಸ್ಥೈರ್ಯ ಮನುಷ್ಯ ಸ್ವಭಾವಕ್ಕನುಸರಿಸಿ ಅಳಿದಾಗ ಹಳಿಯುವೆ. ಆದರೆ ಅದು ತಪು ಎನ್ನುವದರ ಅರಿವು ನನಗಾಗಿದೆ.

ರಂಗ ಒಬ್ಬ ವ್ಯಕ್ತಿ. ಅವನಂತಹರೇ ಹಲವರು. ಈ ಜಗದಲ್ಲಿ. ಅಂತಹ ರಲ್ಲಿ ಮಾಧವರಾಯರ ಪತ್ನಿಯೂ ಒಬ್ಬಳಿರಬಹುದು.

ಆದರೂ ಅವಳು ಹಾಗಿರಬಾರದು....ಹಾಗಿರಬಾರದಿತ್ತು ಎನ್ನುತ್ತದೆ. ಅದು ಮನುಷ್ಯನ ಶುದ್ಧ ಬುದ್ಧಿಯು, ಶುದ್ಧ ಹೃದಯದ ಸ್ವರ...

ಅವಳು ಹಾಗಿರಬಾರದು........ಹಾಗಿರಬಾರದಿತ್ತು ನಿಜ........ಅವಳು ಹಾಗಿರದಿದ್ದರೆ...ನಾನು ಇಂದು...ಇನ್ನೆಲ್ಲಿಯೊ .. ಅಥವಾ ಅದಾವ ನರಕ ದಲ್ಲಿಯೋ ಕೊಳೆಯುತ್ತಿರಬಹುದಾಗಿತ್ತು

ಹಾಗಿದ್ದರೆ......ಒಬ್ಬರ ಕೆಡಕಿನಿಂದಲೇ ಇನ್ನೊಬ್ಬರ ಕಲ್ಯಾಣವಾಗ ಬೇಕೆ....? ಇದುವೇ ಮನುಷ್ಯರ ಬಯಕೆಯೆ....? ಇಂತಹ ಬಯಕೆಯಿಂದ ಕಲ್ಯಾಣವಾದವರಿಗೆ ಸುಖವೆನ್ನಿಸಿದರೂ ಕೆಡಕಿನಲ್ಲಿ ಕೊಳೆಯುವವರ ಅವಸ್ಥೆ ಏನು....? ಅವರ ಭವಿತವ್ಯವೇನು...?

ಇನ್ನೊಬ್ಬರಿಗೆ ಕೆಡಕಾಗಿ ನನಗೆ ಕಲ್ಯಾಣವಾಗಲಿ ಎನ್ನುವ ಬಯಕೆ ಕೀಳು....ಅಷ್ಟೆ ಅಲ್ಲ... ಪಾಪ. ಅಂತಹ ಬಯಕೆ ನನ್ನಲ್ಲಿಲ್ಲ. ಆದರೆ ಬಯಸದೆ ಅಂತಹ ಪರಿಸ್ಥಿತಿ ಒದಗಿದಾಗ ನಾನು ಮಾಡಬೇಕಾದರೂ ಏನು....?... ಅಲ್ಲದೆ ಅವಳಿಗೆ ಕೆಡಕಾಗಿ ನನ್ನ ಕಲ್ಯಾಣವಾಗಿಲ್ಲ ಆದರೆ ಅವಳು ಕೆಟ್ಟಿರು ವಳೆಂದು ನನ್ನ ಕಲ್ಯಾಣವಾಗಿದೆ....

ನನ್ನ ಕಲ್ಯಾಣವಾಗಲಿ ಎಂಬ ಬಯಕೆ ಇಚ್ಛೆ ನನ್ನಲ್ಲಿದೆ. ಆದರೆ ಅದ ಕ್ಕಾಗಿ ಇನ್ನೊಬ್ಬರ ಕತ್ತು ಮುರಿಯುವ ಇಚ್ಛೆ ನನ್ನಲ್ಲಿಲ್ಲ.

ಆದರೆ ಹೀಗಾಗುವದೇಕೆ....?

'ಪೂರ್ವಜನ್ಮದ ಕರ್ಮವೇ ಇದಕ್ಕೆ ಉತ್ತರ....?

"ನನ್ನ ಪೂರ್ವಜನ್ಮದ ಪಾಪ" ಎಂದು ಮಾಧವರಾಯರು ಉಸರ್ಗರೆ ಯುತ್ತಾರೆ...ಪೂರ್ವಜನ್ಮದ ಪಾಪ ಎಂದು ಉಸಿರ್ಗರೆಯುವದಕ್ಕಿಂತ ಅದನ್ನು ಕಳೆದುಕೊಳ್ಳಲು ಪಾಪವನ್ನು ಪುಣ್ಯದಲ್ಲಿ ಪರಿವರ್ತಿಸಲು ಮನುಷ್ಯರು ಪ್ರಯ ತ್ನಿಸುವದಿಲ್ಲವೇಕೆ....? ಪ್ರಯತ್ನಿಸಿದರೂ ಸಾಧ್ಯವಾಗಲಿಕ್ಕಿಲ್ಲವೆ....? 'ಪ್ರಯ ತ್ನದಿಂದ ಪರಮೇಶ್ವರ ದೊರೆಯುತ್ತಾನೆ' ಎಂದು ಹೇಳುವದಿಲ್ಲವೆ....?

ಪ್ರಯತ್ನಕ್ಕೆ ಯಶದೊರೆಯಬೇಕಾದರೆ ಪ್ರಯತ್ನದಲ್ಲಿ ಪರಿಪೂರ್ಣತೆ ಇರಬೇಕು....ಪ್ರಯತ್ನ ಸುತ್ತುಕಡೆಯಿಂದಲೂ ಇರಬೇಕು...ನಿನಗೆ ಒಳ್ಳೆಯ

ದಾಗಬೇಕೆಂದು ಇಚ್ಛೆ ನನ್ನಲ್ಲಿದ್ದಾಗ ನಿನ್ನಲ್ಲಿ ಕೂಡ ಒಳ್ಳೆಯದನ್ನು ಮಾಡಿ ಕೊಳ್ಳಬೇಕೆಂಬ ಇಚ್ಛೆ ಇರಬೇಕು. ಅಂದರೇನೇ ಪ್ರಯತ್ನಕ್ಕೆ ಯಶಸ್ಸು ... ಇಲ್ಲದಿದ್ದರೆ ಪ್ರಯತ್ನ ನಿಷ್ಫಲ...." ಎಂದು ಕಾಮಿನಿ ಹೇಳುವಳು.

ಬೇಕು-ಬೇಡಗಳೆರಡೂ ಎರಡು ಬಲಿಷ್ಠ ಟಗರಿನಂತೆ ತಿಕ್ಕಾಟವಾಡ ತೊಡಗಿದರೆ ಗೆಲವನ್ನು ನಿರ್ಣಯಿಸುವದು ಕಠಿಣವಾದರೂ ಹಾನಿ ಮಾತ್ರ ಎರಡಕ್ಕೂ; ಎರಡೂ ಹತಬಲವಾಗುವವು. ಕೊನೆಗೆ ನೆಲಕ್ಕುರುಳುವವು.... 'ಒಳ್ಳೆಯದನ್ನು ಮಾಡಬೇಕು' ಎನ್ನುವದು ಮನುಷ್ಯನ ಹೃದಯದಲ್ಲಡಗಿದ ಸತ್ಯ. ಆ ಸತ್ಯವಿಲ್ಲದ ವ್ಯಕ್ತಿ ವಿರಳ. ಅದರಂತೆ ತನಗೆ ಒಳ್ಳೆಯದಾಗ ಬೇಕು' ಎನ್ನುವದೂ ಮನುಷ್ಯನ ಆಶೆ— ದುರಾಶೆ. ಆದರೆ 'ಒಳ್ಳೆಯ ದಾವುದು ?" ಎನ್ನುವದನ್ನು ನಿರ್ಣಯಿಸುವದು ಕಠಿಣ. ಒಳ್ಳೆಯದನ್ನು ಮಾಡಬೇಕು ಎನ್ನುವವನ 'ಒಳ್ಳೆಯದರ' ದೃಷ್ಟಿಕೋನ ತನಗೆ ಒಳ್ಳೆಯ ದಾಗಬೇಕು' ಎನ್ನುವವರ ದೃಷ್ಟಿಕೋನಕ್ಕೆ ವಿರುದ್ಧವಾಗಿದ್ದರೆ ಅಲ್ಲಿಗೆ ಆರಂಭ ವಾಗುವದು. ಬೇಕು-ಬೇಡಗಳ ಟಗರಿನ ತಿಕ್ಕಾಟ.... ...ಕೊನೆಗೆ....ಎರಡೂ ನಿರ್ಬಲವಾಗುವವು....

....ಅದರಿಂದ ಲಾಭ ಯಾರಿಗೆ....? 'ಒಳ್ಳೆಯದಾಗಬೇಕು' ಎನ್ನು ವವರಲ್ಲಿ.... ನಿರುತ್ಸಾಹ .. ಏಕೆಂದರೆ ತನಗೆ 'ಒಳ್ಳೆಯದು' ಕಂಡದ್ದು ಬೇಡ ವಾಗಿದೆ....ತಾನು ಒಳ್ಳೆಯದಾಗಲಿ ಎನ್ನುವವರಿಗೆ....

....'ಒಳ್ಳೆಯದಾಗಬೇಕು' ಎನ್ನುವವರಲ್ಲಿ ದ್ವೇಷ. ಏಕೆಂದರೆ ತನಗೆ ಸರಿಕಂಡದ್ದು ಇವರಿಗೆ ಹಿಡಿಸುವದಿಲ್ಲ....ತನ್ನನ್ನು ಹಾಳು ಮಾಡಲು ಬರು ತ್ತಾರೆ....ಎಂದು....

ಇದರಿಂದ ಮುಕ್ತಿ ಹೇಗೆ...." ?

"ಇದರಿಂದ ಮುಕ್ತಿಯೇ ಇಲ್ಲ.... ಮುಕ್ತಿಯಾಗುವದೇ ಆದರೆ ಮರಣ ದಿಂದ...." ಎಂದು ನಿರಾಶರಾದ ಮಾಧವರಾಯರು ಉಸಿರ್ಗರೆಯುತ್ತಾರೆ.

ಆದರೆ ಮರಣದಿಂದ ಕೂಡ ಮುಕ್ತಿ ದೊರಕಲಾರದು ಎನ್ನುವದನ್ನು ಅವರು ಚಿಂತಿಸಿಲ್ಲ.

"ಮರಣದಿಂದ ಮುಕ್ತಿ ಸಿದ್ಧನಿಗೆ....ಅಲ್ಲದೆ ಸಾಮಾನ್ಯರಿಗಲ್ಲ...... ಸಾಧಕನಿಗೂ ಅಲ್ಲ ... ತನ್ನ ಸಾವು ತನ್ನನ್ನು ಕಷ್ಟದಿಂದ ಮುಕ್ತ ಮಾಡಬಹು ದೆನ್ನುವ ಭ್ರಮೆಯಿಂದ ಕಷ್ಟದಲ್ಲಿ ಜರ್ಜರಿತನಾದ ವ್ಯಕ್ತಿ ಸಾವಿಗೆ ಶರಣು ಹೋಗುತ್ತಾನೆ.... ಅದು ಸಹಜವೂ ಆಹುದು ಅವನಿಗೆ.... ಏಕೆಂದರೆ ಅವನೆ ದುರು ಬೇರೆ ದಾರಿಗಳೇ ಇರುವದಿಲ್ಲ ಎಂದಲ್ಲ, ಆದರೆ ಅವನಿಗೆ ಕಾಣುವದಿಲ್ಲ, ಕಷ್ಟ ಪರಂಪರೆಯಲ್ಲಿ ಸಿಲುಕಿ ವಿಚಾರ ಶಕ್ತಿಯ ವೈವಿಧ್ಯವನ್ನೇ ಆತ ಕಳೆದುಕೊಂಡಿರುತ್ತಾನೆ...."

"....ಆದರೆ ಜನ್ಮ ತಾಳಿದ ವ್ಯಕ್ತಿ ವ್ಯಕ್ತಿಯಾಗಿಯೇ ಉಳಿದಿರುವದಿಲ್ಲ, ಆತನ ಮೊದಲು ತಂದೆ ತಾಯಿಗಳು....ಅವನಿಗೆ ಹೊಂದಿಕೊಂಡವರು....ಅವನ ಮುಂದೆ ಅವನ ಹೆಂಡರು... ಮಕ್ಕಳು. ಅವರಿಗೆ ಹೊಂದಿಕೊಂಡ ಸಂಸಾರ.... ಎಲ್ಲಿಂದಲೋ ಆರಂಭವಾಗಿ ಅನಂತ ದೂರದ ವರೆಗೆ ಹೀಗೆಯೇ ಮುಂದುವರಿ ಯುವದು ಈ ಸರಪಳಿ. ಆ ಸರಪಳಿಯಲ್ಲಿಯ ಒಂದು ಕಡಿ ಆತ.... ಅವನು ....ಇದ್ದರೂ ಅಲ್ಲಿಯೇ ಸತ್ತರೂ ಅಲ್ಲಿಯೇ... ಸತ್ತವನನ್ನು ಸರಪಳಿಯಿಂದ ಕಿತ್ತಿ ಒಗೆಯಲು ಸಾಧ್ಯವಿಲ್ಲ ... ಸಾಯುವವ ಸತ್ತು ತಾನು ಈ ಕಷ್ಟದಿಂದ ಎಳೆದಾಟದಿಂದ ಮುಕ್ತಿ ಹೊಂದುವೆನೆಂದು ಭಾವಿಸಿದ್ದರೆ ಅದು ಶುದ್ಧ ತಪ್ಪು.... ಆತ ಸತ್ತನಂತರವೂ ಮತ್ತೆ ಅದೇ ಸರಪಳಿಯಲ್ಲಿಯ ಕೊಂಡಿಯಾಗಿ ಅದೇ ಎಳೆದಾಟದಲ್ಲಿ ಸಿಕ್ಕು ಮತ್ತಷ್ಟು ಜರ್ಜರನಾಗುವನು..." ಎಂದು ಕುಲಕರ್ಣಿ ಯವರು ಹೇಳುತ್ತಿರುವಾಗ—

"ಹಾಗಿದ್ದರೆ ಮುಕ್ತಿಯೇ ಇಲ್ಲವೇ....?" ಎಂಬ ಪ್ರಶ್ನೆ ಸ್ವಾಭಾವಿಕ ಎದ್ದು ನಿಲ್ಲುವದು.

ಅದಕ್ಕೆ ಕುಲಕರ್ಣಿಯವರ ಉತ್ತರ "ಇದೆ.... ಪ್ರಶ್ನೆ ಎಂದ ಮೇಲೆ ಅದಕ್ಕೆ ಉತ್ತರವಿದ್ದಿರಲೇಬೇಕು.... ಉತ್ತರವಿಲ್ಲದಿದ್ದ ಪ್ರಶ್ನೆಯೇ ಇಲ್ಲ.... ಮೊದಲು ಉದ್ಭವಿಸುವದು ಉತ್ತರ.... ಹಿಂದಿನಿಂದ ಅದರ ಮಗುವಾಗಿ ಜನ್ಮ ತಾಳುವದು ಪ್ರಶ್ನೆ.... ಕೊನೆಗೆ ಲೀನವಾಗುವದು ಉತ್ತರದಲ್ಲಿ.... ಉತ್ತರ ಪ್ರಶ್ನೆಗಳ ಸಂಬಂಧ.... ದೇವ ಮನುಷ್ಯರಂತೆ....

..."ಮಾಯೆಯಿಂದ ಮುಕ್ತರಾಗುವದರಲ್ಲಿಯೇ ಅಡಗಿದೆ ಮುಕ್ತಿ...."

ಕುಲಕರ್ಣಿಯವರು ಸಹಜವಾಗಿ ಅಂತಹ ಮಾತುಗಳನ್ನು ಹೇಳು ತ್ತಾರೆ. ಅವರಿಗೆ ಅದು ಸಾಧ್ಯವೂ ಇರಬಹುದು. ಅಥವಾ ಇದೆ. ....ಆದರೆ ಮಾಧವರಾಯರಿಂದ ಅದು ಸಾಧ್ಯವೇ....?

'ಏಕಾಗಬಾರದು....?' ಎನ್ನುವ ಪ್ರಶ್ನೆಗೆ—

'ಅವರು ಕುಲಕರ್ಣಿಯವರಲ್ಲ' ಎಂಬುದೇ ಉತ್ತರ.

ಹುಟ್ಟಿದ ಪ್ರಾಣಿಗಳೆಲ್ಲ ದೇವರ ಮಕ್ಕಳು ನಿಜ. ಮಕ್ಕಳಾದವರೆಲ್ಲ ತಂದೆಯಂತೆ ದೇವರಾಗುವದಿಲ್ಲ ಇದು ಪ್ರತ್ಯಕ್ಷ ಕಂಡ, ಕಾಣುವ, ಕಾಣಲಿ ರುವ ಸತ್ಯ.

ಅದೇ ಸತ್ಯದ ಬೆಳಕಿನಲ್ಲಿ ನನ್ನನ್ನು ಮಾಧವರಾಯರನ್ನು ನಾನು ಕಂಡುಕೊಳ್ಳಬೇಕಾಗಿದೆ.

ನಾನೇನಾಗಬಹುದು ಎನ್ನುವದನ್ನು ನನ್ನಿಂದ ತಿಳಿಯಲು ಸಾಧ್ಯ ವಿಲ್ಲದಿದ್ದರೂ ನಾನೇನಿರುವೆ ಎನ್ನುವದನ್ನು ನಾನು ಅರಿತಿರುವೆ. ಅಂತೇ ಒಂದು ದಾರಿ ಹಿಡಿದಿರುವೆ ನಾನು ಹಿಡಿದ ದಾರಿಯಿಂದಲೇ ಮುಂದೆಸಾಗ ಬೇಕಾಗಿದೆ ನಾನು.

ಇದಲ್ಲದೆ ಬೇರೆ ದಾರಿಯೇ ಇದ್ದಿರಲಿಲ್ಲವೇ ?

ಅದಕ್ಕೆ ಉತ್ತರ 'ಇಲ್ಲ' ಎಂದಲ್ಲ ಇದ್ದವು ಹಲವಾರು ದಾರಿಗಳು. ಆದರೆ ಒಬ್ಬನೇ ಒಬ್ಬ ಹಲವು ದಾರಿಗಳನ್ನು ಒಂದೇ ಕಾಲದಲ್ಲಿ ಹಿಡಿಯಲು ಹೇಗೆ ಸಾಧ್ಯ....? ಅಂತೆಯೇ ಸರಿಕಂಡ ದಾರಿಯಲ್ಲದಿದ್ದರೂ ಸಿಕ್ಕ ದಾರಿ ಎಂದು ದಾರಿ ಹಿಡಿದಿರುವೆ.

"ಹಿಡಿದ ದಾರಿಯನ್ನೇ ಸರಿ ಮಾಡಿಕೊಂಡು ಮುಂದೆ ಸಾಗಬೇಕು.... ಅದುವೇ ನಿಜವಾದ ದಾರಿ..." ಎಂದು ಕುಲಕರ್ಣಿಯವರು ಹೇಳಿದ್ದಾರೆ.

ನಾನು ಕೂಡ ಅದನ್ನೇ ನಂಬಿ ಅದೇ ದಾರಿ ನನ್ನ ದಾರಿ ಎಂದು ಸಾಗು ತ್ತಿದ್ದೇನೆ. ಮಾಧವರಾಯರೊಡನೆ ಈ ಸಂಸಾರದಲ್ಲಿ.... ಸಂಸಾರಿಯಾಗಿ,

"ಸಂಸಾರದಲ್ಲಿ ಜನ್ಮ ತಾಳಿದ ಮೇಲೆ ಸಂಸಾರಿಯಾಗಲೇಬೇಕು"

ಯಾರಿಗೆ ಸಂಸಾರ ಮನೆಯ ನಾಲ್ಕು ಗೋಡೆಗಳ ಮಧ್ಯದಲ್ಲಿದೆ... ಯಾರಿಗೆ ಒಂದು ಚಿಕ್ಕ ಹಳ್ಳಿಯಲ್ಲಿದೆ.... ಯಾರಿಗೆ ಹವೆಯಂತೆ ಆಕಾಶ ಪೃಥ್ವಿ

ಯನ್ನೇ ವ್ಯಾಪಿಸಿದೆ...." ಸಂಸಾರ ಯಾರಿಗೂ ಬಿಟ್ಟಿಲ್ಲ. ಅದು ಬಿಡುವದೂ ಇಲ್ಲ...."

ಕಾಮಿನಿಯ ಮಾತು ನನಗೂ ನಿಜವೆನ್ನಿಸುತ್ತದೆ. ಅವಳು "ಸಂಸಾರ ವೆಂದರೆ ನೀರು" ಎಂದು ಹೇಳುತ್ತಾಳೆ.

" ಸುಮಿತ್ರಾ.... ಸಂಸಾರವೆಂದರೆ ನೀರು.... ನೀರಿಲ್ಲದೆ ಯಾವ ಪ್ರಾಣಿಯೂ ಬದುಕಲಾರ.... ಯಾರು ನೀರನ್ನು ಮಣ್ಣಿನ ಕೊಡದಲ್ಲಿ ತುಂಬಿ ಡುತ್ತಾರೆ. ಯಾರು ಅದಕ್ಕೆ ಬಂಗಾರದ ಹೂಜಿಯನ್ನು ಮಾಡಿಸುತ್ತಾರೆ.... ಕೆಲವರು ಕಾಜಿನ ಪಾತ್ರೆಯಲ್ಲಿ ಸರ್ವರಿಗೂ ಕಾಣುವಂತೆ ಇಡುತ್ತಾರೆ... ಆದರೆ ... ಯಾರೂ ಅದಿಲ್ಲದೆ ಇಲ್ಲ...."

".... ಅನ್ನವಿಲ್ಲದೆ ಒಂದೆರಡು ವಾರ ಕಳೆಯಬಹುದು.... ಆದರೆ ನೀರಿ ಲ್ಲದೆ ಕಳೆಯುವದು ಸಾಧ್ಯವಿಲ್ಲ.... ಸುಮಿತ್ರಾ... 'ನೀರು ಪ್ರಾಣ....ದೇವರು' ....ಎಂದೂ ಹೇಳುವರು.... ನೀರು ಕುಡಿಯಲು ಬೇಕು... ದೇಹ ತೊಳೆ ಯಲೂ ಬೇಕು... ನೀರಿನಿಂದಲೇ ಬದುಕು.... ನೀರಿನಿಂದಲೇ ಬಾಳು.... ಸಂಸಾರವೂ ನೀರಿನಂತೆಯೇ... ಬೇಕಾಗಲಿ ಬೇಡವಾಗಲಿ ಸಂಸಾರ ಮಾತ್ರ ಅವರನ್ನು ಹಿಡಿದಿದೆ ನೀರಿನಂತೆ. ದೇಹಕ್ಕೆ ಅಂಟಿದ ನೀರನ್ನು ಅದೆಷ್ಟು ಒರೆಸಿಕೊಂಡರೂ ಹೊಟ್ಟೆಯಲ್ಲಿಯ ನೀರನ್ನು ಒರೆಸಿ ಒಣಗಿಸಲು ಸಾಧ್ಯವೆ ? ....ಹಾಗೆಯೇ ಸಂಸಾರ...."

"...ಆದರೆ ನೀರು ಅವಶ್ಯವೆಂದು ತುಂಬಿ ಇಟ್ಟುಕೊಂಡರೆ ಕೆಟ್ಟು ಹೋಗುವಂತೆ— ಸಂಸಾರವೂ ಬಿಡದ್ದು ಎಂದು ಅದನ್ನೇ ಅಪ್ಪಿಕೊಂಡರೆ ಅಲ್ಲಿಯೂ ಕೆಡಕು ತಪ್ಪಿದಲ್ಲ... ತುಂಬಿಟ್ಟ ನೀರು ಕೊಳಚೆಯಾಗುವಂತೆ ಸಂಸಾರಕ್ಕೆ ಬಿಗಿದಪ್ಪಿಕೊಂಡರೆ ಅದು ಕೊಳಚೆಯಾಗಿ ಎಲ್ಲವನ್ನೂ ಹೇಸಿ ಮಾಡುತ್ತದೆ..."

ಎಂದು ಕಾಮಿನಿ ಹೇಳುವಾಗ 'ಅಹುದು....' ಸಂಸಾರವನ್ನು ಬಿಗಿ ದಪ್ಪಿಕೊಳ್ಳಬಾರದು' ಎಂದು ಅನ್ನಿಸುತ್ತದೆ....ಕುಡಿಯುವ ನೀರನ್ನು ನಿತ್ಯ ತುಂಬಿಟ್ಟು ಉಪಯೋಗಿಸುವಂತೆ ಸಂಸಾರದಲ್ಲಿಕೂಡ ನಿತ್ಯ ನೂತನತೆಯನ್ನು ನಿರ್ಮಿಸಿಕೊಳ್ಳಬೇಕು....ನಿತ್ಯ ನೂತನತೆ ಎಂದಾಗ ದಿನಕ್ಕೊಂದು ಸಂಸಾರ

ಸ್ಥಾಪಿಸುವದಲ್ಲ....ಇದ್ದುದನ್ನು ಕೊಳೆಯಾಗದಂತೆ ನೋಡುವದು. ಅದರಲ್ಲಿ ಯಾವ ತರದ ಕಿಲ್ಮಿಷ ಸೇರದಂತೆ ಕಾಯುವದು....ಹತ್ತಿದ ಕೊಳೆಯನ್ನು ತೊಳೆದು ಹಾಕುವದು.

...ಸಂಸಾರ ಹಸನ್ಮುಖದಿಂದ 'ಇರುವದು...ಹಸನ್ಮುಖದಿಂದ ಇರಿಸು ವದು....

ಎಲ್ಲರ ಸಂಸಾರವೂ ಹಸನ್ಮುಖದಿಂದ ಬಾಳತೊಡಗಿದರೆ.......? ಎಲ್ಲರ ಸಂಸಾರವನ್ನೂ ಹಸನ್ಮುಖದಿಂದ ಬಾಳಿಸಲು ಪ್ರಯತ್ನ ಮಾಡಿದರೆ...?

" ನೆರೆ ಹೊರೆಯುವರನ್ನು ಪ್ರೀತಿಸು ' ಎಂದು ಎಲ್ಲರೂ ಹೇಳುತ್ತಾರೆ. ...ಪ್ರೀತಿಸುವವ ನೆರೆ ಹೊರೆಯುವ. ಪ್ರೀತಿಸಿಕೊಳ್ಳುವವವ ನೆರೆಹೊರೆ ಯುವ....ಅಲ್ಲವೆ....?

ಇದನ್ನು ತಿಳಿದು ನಡೆದರೆ.... ಇದನ್ನು ಅರಿತುಕೊಂಡು ಬಾಳಿದರೆ ಯಾರೂ ಯಾರ ವೈರಿಗಳಾಗಿ ಬಾಳುವದಿಲ್ಲ.

ಈ ವಿಷಯವನ್ನು ಅರಿತುಕೊಂಡಿದ್ದರೆ ಮಾಧವರಾಯರ ಪತ್ನಿ ಮಾಧವ ರಾಯರನ್ನು ದೂಡುತ್ತಿರಲಿಲ್ಲ....ಮಾಧವರಾಯರೂ ದುಃಖಿಯಾಗಿ " ನನ್ನ ಪೂರ್ವ ಜನ್ಮದ ಪಾಪ " ಎಂದು ಉಸಿರ್ಗರೆಯುತ್ತಿರಲಿಲ್ಲ.

ಅವಳು ಅರಿತುಕೊಂಡಿಲ್ಲ. ಅಂತೆಯೇ ಮಾಧವರಾಯರಿಗೆ ಉಸಿರ್ಗ ರೆಯದೆ ಬೇರೆ ಏನನ್ನೂ ಮಾಡಲು ಸಾಧ್ಯವಿಲ್ಲ.

" ಬೇರೆ ಏನನ್ನೂ ಮಾಡಲೂ ಸಾಧ್ಯವಿಲ್ಲ.........ಸಾಧ್ಯವಿದ್ದುದನ್ನೆಲ್ಲ ಮಾಡಿಯಾಯಿತು.....ಇದರಿಂದ ಪಾರಾಗಲು ಒಂದೇ ಒಂದು ದಾರಿಯಿದೆ. ಅದೆಂದರೆ ಮರಣ...ನಾನೋ...ಇಲ್ಲವೆ....ಅವಳು" ಎಂದು ಮಾಧವರಾಯರು ಹೇಳಿದಾಗ ಅವರ ಮನದಲ್ಲಿ ಅಲ್ಲೋಲ ಕಲ್ಲೋಲವೆಬ್ಬಿಸುವ ವಿಚಾರದ ಝಂಝಾವಾತದ ಅರಿವು ಆಗುತ್ತದೆ.

ಗಂಡಸು ಎಲ್ಲವನ್ನೂ ಸಹಿಸುತ್ತಾನೆ....,ಆದರೆ ಪತ್ನಿಯ.....ವ್ಯಭಿಚಾರ ವನ್ನು ಸಹಿಸಲು ಸಾಧ್ಯವಿಲ್ಲ. ಎನ್ನುವದು ಮನದಟ್ಟಾಗುತ್ತದೆ....

ಗೌತಮ-ವೃತ್ತಿಯಿಂದ ಋಷಿ....ಪರಲೋಕದ ಸಾಧನೆಗಾಗಿ ಈ ಲೋಕದಲ್ಲಿ ವೈರಾಗ್ಯ ತಳೆದವ. ತಾಮಸತೆಗೆ ಅವನಲ್ಲಿ ಎಡೆಯಿಲ್ಲ. ಆದರೆ

ಅಂತಹ ವೈರಾಗಿ ಅಹಲ್ಯೆಗೆ ಶಾಪಕೊಟ್ಟ....

" ಶಿಲೆಯಾಗಿ ಬೀಳು......." ಎಂದು.

ಪಾಪ ಘಟಿಸಿದರೂ ಅಹಲ್ಯೆ ಪಾಪಿಯಲ್ಲ... ದೋಷ ಅವಳಿಂದಾದರೂ ಅವಳು ನಿರ್ದೋಷಿ.

ಆದರೆ ತಾಮಸಕ್ಕಿಳಿದ ಸಾತ್ವಿಕತೆಯಲ್ಲಿ ವಿಚಾರಕ್ಕೆ ಆಸ್ಪದವಿರಲಿಲ್ಲ. ಸಾತ್ವಿಕತೆಯನ್ನು ಪಾದಾಕ್ರಾಂತ ಮಾಡಿ ಆಳತೊಡಗಿತ್ತು ತಾಮಸ ಛತ್ರಪತಿಯಾಗಿ....ಕ್ಷಣಕಾಲ ಬುದ್ಧಿ ಭ್ರಂಶವಾಗಿತ್ತು...ಸನ್ಯಾಸಿಯು ಸಂಸಾರ ಕೂಪದಲ್ಲಿ ಕಾಲು ತೊಳೆಯುತ್ತಿದ್ದ. ವೈರಾಗ್ಯವನ್ನು ಸ್ವಾರ್ಥ ಅಪ್ಪಿಕೊಂಡಿತ್ತು. ಸರ್ವಸ್ವವನ್ನು ಮರೆಯಿಸುವಂತೆ...

ಗೌತಮನಂತೆ ಮಾಧವರಾಯರು ಋಷಿಗಳಲ್ಲ. ಸಂಸಾರದಲ್ಲಿ ಸುಖದಿಂದಿರಬೇಕೆಂದು ಬೇಡಿ ಬಯಸಿ ಹುಡುಕಿ ವಿವಾಹವಾಗಿದ್ದರು ಸುಂದರಿಯನ್ನು.

ಇನ್ನಾರಿಗೂ ಸಿಕ್ಕದ ಸುಂದರ ಯುವತಿ ತನ್ನವಳಾಗಿರುವಳು ಎಂಬ ಹೆಮ್ಮೆಯಲ್ಲಿರುವಾಗ ತನ್ನವಳಾಗಿದ್ದ ತರುಣಿ ತನ್ನವಳಾಗದೇ ಇನ್ನೊಬ್ಬರವಳು ಎನ್ನುವದರ ಅರಿವಾದರೆ...?

ಕೊಲ್ಲಬಹುದು.... ಸಾಯಬಹುದು... ಇಲ್ಲವೇ ಹುಚ್ಚಾಗಬಹುದು...

ಆದರೆ ಯಾವುದೂ ಆಗಲಿಲ್ಲ ...!

ಅದಕ್ಕೆ ಕಾರಣ ವೈರಾಗ್ಯವಲ್ಲ. ತಾಳ್ಮೆಯೂ ಅಲ್ಲ. ಹೇಡಿತನವೂ ಅಲ್ಲ.

"ನಾನು ಏನನ್ನೂ ಮಾಡಲು ಸಮರ್ಥನಿದ್ದೆ.... ಆದರೆ ಯಾವದನ್ನೂ ಮಾಡಲಿಲ್ಲ. ಅವಳನ್ನು ಕಡಿದು ಹಾಕುವಷ್ಟು ಕೋಪ ಅವಳ ವಿಚಾರ ಮಾಡಿದಾಗ ಮೂಡುತ್ತಿತ್ತು.... ಅವಳು.... ನನ್ನವಳಾಗಿಯೆ.... ಉಳಿದಿದ್ದರೆ ... ಎನ್ನುವ ವಿಚಾರವೂ ಬರುತ್ತದೆ ಅವಳ ಸೌಂದರ್ಯ ನನ್ನ ಕಣ್ಣು ಕುಕ್ಕಿಸಿದಾಗ.... "

"ಆದರೂ ನಾನು ಏನನ್ನೂ ಮಾಡಲಿಲ್ಲ..." ಎಂದು ಮಾಧವರಾಯರು ಹೇಳುತ್ತಾರೆ. ಕಣ್ಣಲ್ಲಿ ನಿರಾಶೆಯ ಭಾವ ತಂದು.

ಅವರ ಪತ್ನಿಯ ವಿಷಯ ಹೇಳುವಾಗ 'ನಾನು ಸುಂದರಿಯಲ್ಲ' ಎಂದು ನನಗನ್ನಿಸುತ್ತದೆ. ಸುಂದರಿಯಲ್ಲದಿದ್ದರೂ ನನ್ನನ್ನು ಇವರು ಎಷ್ಟು ಮೆಚ್ಚಿ ಕೊಂಡಿರುವರಲ್ಲ ಎಂಬ ವಿಚಾರವೂ ಬರುತ್ತದೆ.... ಅವರು ಮೆಚ್ಚಿಕೊಂಡ ದ್ದನ್ನು ಮನದಲ್ಲಿ ತಂದರೆ ನಾನೂ ಸುಂದರಿ ಇದ್ದಿರಬಹುದೇ...? ಎಂಬ ಗರ್ವವೂ ಕೆಲವೊಂದು ಅಂಶದಲ್ಲಿ ಚಿಕ್ಕ ಮೀನ ಚಿಣ್ಣನೆ ಆಗಸದೆಡೆಗೆ ಹಾರಿ ಪುನಹ ನೀರಿನಲ್ಲಿ ಮಾಯವಾಗುವಂತೆ ಮುಳುಗಿ ಮಾಯವಾಗುತ್ತದೆ.

ಅಂತಹದೇ ಯಾವದೊಂದು ಸಂದರ್ಭದಲ್ಲಿ ಅವರು "ಬಾಹ್ಯ ಸೌಂದ ರ್ಯಕ್ಕೆ ಮರುಳಾಗುತ್ತಾರೆ ಅಲ್ಲದೆ ಮೆಚ್ಚುವದಿಲ್ಲ... ಮೆಚ್ಚುವದು ಅಂತರಿಕ ಸೌಂದರ್ಯ. ಅದು ಹೃದಯದಲ್ಲಿದ್ದು ಅನಂತ ರೂಪದಲ್ಲಿ ಪ್ರಕಟವಾಗುತ್ತದೆ... ಕರುಣೆಯಲ್ಲಿ.... ದಯೆಯಲ್ಲಿ.... ಮಮತೆಯಲ್ಲಿ... ಪ್ರಾಮಾಣಿಕತೆಯಲ್ಲಿ... ಆದರ್ಶದಲ್ಲಿ...." ಎಂದು ಹೇಳುತ್ತಾರೆ.

ನನ್ನ ಅನುಭವದ ಕೋಟೆಯ ಗೋಡೆಗೆ ಅವರ ಮಾತು ಅವರ ವಿಚಾರ ಅಪ್ಪಳಿಸಿ ಪ್ರತಿಧ್ವನಿಗೈಯುತ್ತವೆ.

"ಸೌಂದರ್ಯ ಹೃದಯದಲ್ಲಿದ್ದು ಅನಂತ ರೂಪದಲ್ಲಿ ಪ್ರಕಟವಾಗು ತ್ತದೆ..." ಎಂದು.

ಯಾರು ಅಲ್ಲಗಳೆಯಬಹುದು ಇಂತಹ ವಿಚಾರವನ್ನು....?

ಮುಖದ ಮೇಲೆ ಕಟ್ಟಡವಿ ಬೆಳೆದ ಸತ್ಯ ಸಾಧುವಿನ ತತ್ವ ವಿವೇಚನೆ ಯಲ್ಲಿ ಸೌಂದರ್ಯ ಅಡಗಿಲ್ಲವೆ....?

ತಾಯಿಯ ಮಮತೆಯಲ್ಲಿ, ಆವರಣದಲ್ಲಿ ಸೌಂದರ್ಯ ಅಡಗಿಲ್ಲವೆ....? ಪತ್ನಿಯ ಪ್ರೇಮವೇ ಸೌಂದರ್ಯದ ವಲಯವಾಗಿ ಪತಿಯನ್ನು ಬಂಧಿಸಿ ರುವದಿಲ್ಲವೇ.......? ತ್ಯಾಗಿಯ ಆದರ್ಶದ ಸೌಂದರ್ಯವೇ ಸರ್ವರನ್ನೂ ಆಕರ್ಷಿಸುವದಿಲ್ಲವೆ...? ಮಹಾತ್ಮರ ದಯೆಯ ಸೌಂದರ್ಯವೇ ಸರ್ವರ ಮೇಲೆ ಅಮೃತ ಸಿಂಚನ ಮಾಡುವದಿಲ್ಲವೇ...? ಕರುಣಾನಿಧಿಯ ಕರುಣೆ ಸೌಂದ ರ್ಯದ ಬೃಹತ್ತಾಕಾರವನ್ನು ತಳೆದಿರುವುದರಿಂದಲೇ ಅಲ್ಲವೆ ಸಮಸ್ತ ಪ್ರಾಣಿ ಗಳು ಆತನ ಕರುಣೆಯ ಸೌಂದರ್ಯವನ್ನು ಯಾಚಿಸುತ್ತಿರುವದು....?

ವಿಚಾರದ ಯಂತ್ರಕ್ಕೆ ತುಸು ತಟ್ಟಿದರೂ ಸಾಕು ತಡೆಯದೇ ಧಾವಿಸು ತ್ತದೆ... ಅದನ್ನು ತಡೆದು ನಿಲ್ಲಿಸುವದೂ ಕಠಿಣ. ತಡೆ ಹಾಕಿದರೂ ಕೂಡ ತಡೆತಡೆದು ಮತ್ತೆ ಮತ್ತೆ ಧಾವಿಸುತ್ತಿದೆ ಚಿಕ್ಕ ಮಗುವಿನಂತೆ.

ಏನನ್ನೂ ವಿಚಾರ ಮಾಡದೆ ಗಾಣದೆತ್ತಿನಂತೆ ಸುತ್ತಿನಲ್ಲಿಯೇ ಸುತ್ತು ತ್ತಿದ್ದೆ ತಂದೆ-ತಾಯಿಯ ಮನೆಯಲ್ಲಿದ್ದಾಗ. .... ಕುಲಕರ್ಣಿಯವರು ಜಗ ತ್ತನ್ನೆ ನನ್ನೆದುರು ನಿಲ್ಲಿಸಿ 'ನೋಡು... ಏನೇನಿದೆ ಇಲ್ಲಿ.... ...” ಎಂದು ಎಲ್ಲ ವನ್ನೂ ತೋರಿಸಿದರು.... ಕಾಮಿನಿ ಸಾಧುವಿನ ಜಪಮಾಲೆಯ ಜೊತೆಗೆ ಅಸಾಧುವಿನ ಇನ್ನೊಂದು ರೂಪವನ್ನು ತೋರಿಸಿದಳು....

ಏನೇನಿದೆ.... ಜಗದಲ್ಲಿ....! ಎಲ್ಲವೂ ಇದೆ. ಏನು ಬೇಕೆನ್ನಿಸುವದೋ ಎಲ್ಲವೂ ಜಗದಲ್ಲಿದೆ. ಜಗದಲ್ಲಿದ್ದುದೆಲ್ಲವೂ ಬೇಕೆನ್ನಿಸುತ್ತದೆ— ಒಬ್ಬರಿಲ್ಲ ಒಬ್ಬರಿಗೆ....

ಆದರೆ ಬೇಕೆನ್ನಿಸುವದು ಸಿಕ್ಕುವದು ಕಠಿಣ.

“ಶುದ್ಧ ಮನದಿಂದ ಬೇಡಿದರೆ ಬೇಡಿದ್ದು ಸಿಕ್ಕೇ ಸಿಗುವದು” ಎಂದು ಕುಲಕರ್ಣಿಯವರು ಹೇಳಿದರೂ ಅದು ಕಾಮಿನಿಗೆ, ಮಾಧವರಾಯರಿಗೆ, ನನಗೆ ಸಿಕ್ಕಿತೆಲ್ಲಿ ?

ಬೇಡುವ ನಮ್ಮ ಮನಗಳು ಶುದ್ಧವಿರಲಿಲ್ಲವೇ....?

ಸುಂದರ ಪತ್ನಿ ತನ್ನವಳಾಗಬೇಕು ಎನ್ನುವ ಮಾಧವರಾಯರ ವಿಚಾರ ದಲ್ಲಿ ಅದೆಲ್ಲ ಅಶುದ್ಧತೆ ಇದೆಯೇ.... ?

ಪತಿಯೊಂದಿಗೆ ಪ್ರಾಮಾಣಿಕತೆಯಿಂದ ಸಂಸಾರ ಮಾಡಬೇಕೆನ್ನುವ ಕಾಮಿನಿಯ ವಿಚಾರ ಅಶುದ್ಧವೇ....?

ಏಕೆ ಸಿಕ್ಕಲಿಲ್ಲ...ಅವರಿಗೆ... ಅವರ ಇಚ್ಛಿತಗಳು....?

ಏಕೆ...?

ಇದಕ್ಕೂ ಉತ್ತರ ಪೂರ್ವಜನ್ಮದ ಕರ್ಮವೇ....?

ಅದಕ್ಕೆ ಕುಲಕರ್ಣಿಯವರು ಹೇಳುವದು—

“ಮನುಷ್ಯನ ಸತ್ಕರ್ಮಕ್ಕೆ, ಸದ್ವರ್ತನಕ್ಕೆ ಸತ್ಪ್ರಯತ್ನಕ್ಕೆ ಕಾರ್ಯ ಕೈಗೂಡದಿದ್ದರೆ...ಅದಕ್ಕೆ ' ಪೂರ್ವಜನ್ಮದ ಕರ್ಮ ' ಎನ್ನದೆ ವಿಧಿಯಿಲ್ಲ” ಎಂದು.

ಈ ಉತ್ತರ ಅಷ್ಟು ಸಮಾಧಾನಕಾರಕವಾಗಿಲ್ಲ. ಆದರೆ ಅದನ್ನೊಪ್ಪದಿದ್ದರೆ ಅದಕ್ಕೆ ಬೇರೆ ಯಾವ ಉತ್ತರವೂ ಇಲ್ಲ. ಅಂತೆಯೇ ಮನುಷ್ಯ ತನ್ನಿಂದಾಗದ್ದ, ತನ್ನಿಂದ ಕೈಗೂಡದ ಕಾರ್ಯಕ್ಕೆ 'ಪೂರ್ವಜನ್ಮದ ಕರ್ಮ.... ಪೂರ್ವ ಜನ್ಮದ ಪಾಪ' ಎಂದು ಹೇಳಿ ನಿಟ್ಟುಸಿರು ಇಡುತ್ತಾನೆ.

ಮಾಧವರಾಯರು ಕೂಡ ಮಾಡಿದ್ದು ಅದನ್ನೇ—

"ಯಾವುದು ನನ್ನಿಂದ ಆಗಲಾರದೋ ಅದಕ್ಕಾಗಿ ಬಾಳುವ ಜನ್ಮವನ್ನು ಮಣ್ಣು ಮಾಡುವದರಲ್ಲಿ ಯಾವ ಲಾಭವು ಅಡಗಿದೆ....? ಎಲ್ಲವೂ ಪೂರ್ವ ಜನ್ಮದ ಕರ್ಮ" ಎಂದು ನಿರಾಶೆಯಿಂದು ಹೇಳುವಾಗ.... 'ಇವರು ಎಲ್ಲ ಪ್ರಯತ್ನವನ್ನೂ ಮಾಡಿರಲೇಬೇಕು' ಎನ್ನುವದು ಮನದಟ್ಟಾಗುತ್ತದೆ.

ಅವರ ಬಗ್ಗೆ ಕಾಮಿನಿ ಕೂಡ "ಸುಮಿತ್ರಾ.......ಗಂಡಸರನ್ನು ನಾನು ದ್ವೇಷಿಸುತ್ತಿದ್ದೆ; ಆದರೆ ವ್ಯಕ್ತಿಗಳನ್ನಲ್ಲ....ಮಾಧವರಾಯರಿಗಾಗಿ....ನಿಜಕ್ಕೂ ನಾನು ದ್ವೇಷಿಯಾಗಬೇಕಿತ್ತು........ಆದರೆ ಅವರಿಗಾಗಿ ನನ್ನಲ್ಲಿ ಕೋಪ ಮೂಡಲಿಲ್ಲ; ಕರುಣೆ ಎನ್ನಿಸಿತು. ಅವರ ವಿಚಾರ ಕೇಳಿದಾಗ....ತನ್ನೊಬ್ಬ ಸಾವಿರ ವರುಷದ ಸ್ನೇಹಿತನೆದುರು ಹೇಳುವ ರೀತಿಯಲ್ಲಿ ಅವರು ತಮ್ಮ ಕತೆಯನ್ನು ನನ್ನೆದುರು ಹೇಳಿದಾಗ 'ಅಯ್ಯೊ....ಪಾಪ" ಎನ್ನಿಸಿತು..."

"....ಸಜ್ಜನತೆಗೆ ಈ ಜಗದಲ್ಲಿ ಬೆಲೆಯಿಲ್ಲ.' ಇಲ್ಲಿ ಬಾಳ ಬೇಕಾದರೆ... ದುಷ್ಟ ಶಕ್ತಿಯ ದುಷ್ಟವಿಚಾರದ ಗಂಟು ಕೈಯಲ್ಲಿರಬೇಕು' ಎಂದೂ ಅನ್ನಿಸಿತು........"

"...ಸುಂದರನಾದ ಸಜ್ಜನನಾದ ಪತಿ ದೊರಕಬೇಕು. ಎನ್ನುವ ಸ್ತ್ರೀ ಮನೋಭಾವಕ್ಕೂ ಒಳ್ಳೆಯ ಸೌಂದರ್ಯವತಿಯಾದ್ದ ಸುಸೀಲ ಪತ್ನಿ ದೊರೆಯಬೇಕು ಎನ್ನುವ ಪುರುಷ ಭಾವಕ್ಕೂ ಯಾವ ಅಂತರವೂ ಇಲ್ಲ. ಅಂತೆಯೇ ನಾನು ಮಾಧವರಾಯರಾಗಿ ವಿಚಾರ ಮಾಡಿದಾಗ ಅವರ ಪತ್ನಿಯ ಆಚರಣೆ ತಪ್ಪು ಎನ್ನಿಸುತ್ತದೆ...."

"........ದೈಹಿಕ ಸುಖದ ಅವಶ್ಯಕತೆ ಎಲ್ಲರಿಗೂ ಇದೆ. ಆದಕ್ಕಾಗಿ ಯಾರನ್ನೂ ದೂಷಿ ಎಂದು ಹೇಳಲು ಸಾಧ್ಯವಿಲ್ಲ...ಆದರೆ....ದೈಹಿಕ ಸುಖ

ವೆಂದರೆ ಸ್ವಚ್ಛಂಥ ವೃತ್ತಿಯಲ್ಲ..." ಇದನ್ನು ಅವರ ಪತ್ನಿ ಅರಿತು ನಡೆದಿದ್ದರೆ ಇಂದು ಮಾಧವರಾಯರು ದುಃಖಿಗಳಾಗುತ್ತಿರಲಿಲ್ಲ.... 'ದೈಹಿಕ ಸುಖದ ಆಶೆಯನ್ನು ಒತ್ತಿಟ್ಟು ಪತಿಯೊಡನೆ ಪತಿವ್ರತೆ ಯಾಗಿ ಬಾಳಬೇಕು' ಎಂದು ಹೇಳುವ ಸನಾತನ ವೃತ್ತಿ ನನ್ನಲ್ಲಿಲ್ಲ....ಪತಿವ್ರತೆ 'ಯಾಗಿರುವದೆಂದರೆ' ಪತಿ ಎಂಬ ದೇಹದ ಗಂಡಿನೊಡನೆ ಒಂದೇ ಮನದಿಂದ ಸಂಸಾರ ಮಾಡುವದಲ್ಲ; ಪತಿ ಎನ್ನುವ ಹೃದಯದೊಂದಿಗೆ ಪತ್ನಿ ಹೃದಯವನ್ನು ಸಮರಸ ಮಾಡಿ ಜೀವನವನ್ನು ನಂದನವನ ಮಾಡುವದು....ದೈಹಿಕತೆಗೆ ಅಲ್ಲಿ ಸ್ಥಾನವೇ ಇಲ್ಲ. ಇದು ನನ್ನ ವಿಚಾರವೇ ಅಲ್ಲ. ಸರ್ವರೂ ಒಪ್ಪಬೇಕಾದ ವಿಚಾರ........"

"....ದೈಹಿಕ ವಾಸನೆಯೊಂದಿಗೆ ಮಾನಸಿಕ ಅಸ್ವಸ್ಥತೆಯೂ ಸೇರಿದರೆ ಮನುಷ್ಯ ಮಧ್ಯ ಸೇವಿಸಿದ ಮಂಗನಾಗುತ್ತಾನೆ...."

"....ಅಂತಹದೇ ಅವಸ್ಥೆ ಮಾಧವರಾಯರದಿತ್ತು...."

"....ಗಂಡಸು ಗಂಡಸಾಗಿ ಪೃಥ್ವಿಯನ್ನು ಆಳುವ ಛತ್ರಪತಿಯಾಗಬಹುದು....ಆದರೆ ಅವನನ್ನು ಸರಿಯಾದ ಮಾರ್ಗದಿಂದ ಮುಂದುವರಿಸುವದಕ್ಕೆ, ಅವನಿಗೆ ಉತ್ಸಾಹ ತುಂಬುವದಕ್ಕೆ, ಅವನನ್ನು ಸರಿಯಾಗಿ ನೋಡಿಕೊಳ್ಳುವದಕ್ಕೆ ಸ್ತ್ರೀ ಬೇಕು. ಸ್ತ್ರೀಯಿಲ್ಲದೆ ಇದು ಅಸಾಧ್ಯ...."

"... ಅಂತಹ ಸ್ತ್ರೀ ಹೃದಯದ ಕೊರತೆ ಮಾಧವರಾಯರಿಗಾದಾಗ... ಮಾಧವರಾಯರು ಚೇಳು ಕಡಿದ ಮಂಗನ ಅವಸ್ಥೆಗೆ ಇಳಿದರು...."

"....ಅವರಿಗೆ ಅಂತಹ ವೇಳೆಯಲ್ಲಿ ಸ್ತ್ರೀ ಹೃದಯದ ತಾಯಿಯಾಗುವ ಯೋಗ್ಯತೆ, ಹೃದಯವಿದ್ದ ಸ್ತ್ರೀಯ ಅವಶ್ಯಕತೆ ಇದ್ದಿತು..."

"ಹುಟ್ಟಿದಾಗ ತಾಯಿಯ ಮೊಲೆ ಹಾಲಿಗಿಂತ ತಾಯಿಯ ಮಮತೆಯೇ ಮಗುವನ್ನು ಬೆಳೆಸುವದು.... ಮೊಲೆ ಹಾಲಿನ ಬದಲು ಬೇರೆ ಏನನ್ನೂ ಕೊಡಲು ಸಾಧ್ಯವಿದೆ. ಆದರೆ ಮಮತೆಗೆ ಸರಿಯಾಗುವ 'ಕವ್ ಆ್ಯಂಡ ಗೇಟ' (Cow and gate) ಅನ್ನ ಇನ್ನೂ ಅಸ್ತಿತ್ವದಲ್ಲಿ ಬಂದಿಲ್ಲ....ಬರುವದೂ ಇಲ್ಲ ವಯಸ್ಸಿಗೆ ಬರುವ ವರೆಗೆ ತಾಯಿಯ 'ತಾಯಿ ಮಮತೆ' ವಯಸ್ಸಿಗೆ ಬಂದ ನಂತರ ಪತ್ನಿಯ 'ತಾಯಿ ಮಮತೆ' ಯಿಂದಲೇ ಗಂಡಸು ಪುರುಷನಾಗಿ ಬಾಳುವನು.... ಅದಿಲ್ಲದ ಗಂಡಸು... ಕಾಡು ಪ್ರಾಣಿ...."

"ತಾಯಿಯಿಲ್ಲದೆ ಬೆಳೆದ ಮಾಧವರಾಯರಿಗೆ ಪತ್ನಿ ಬಂದ ನಂತರ 'ತಾಯಿಯ ಮಮತೆ' ದೊರತಿದ್ದರೆ ಅವರೂ ಕೀರ್ತಿವಂತರಾಗಬಹುದಿತ್ತು. ಆದರೆ...?"

"..ಆದರೆ ಅದಕ್ಕೆ ಬದಲಾಗಿ....ಅವರ ಇದ್ದ ಹೃದಯವನ್ನು ಛಿನ್ನ ವಿಚ್ಛಿನ್ನ ಮಾಡುವಂತಹ ಕ್ರೂರ ಅಸ್ತ್ರ ಅವರನ್ನು ಕೊರೆಯಹತ್ತಿತು, ಪತ್ನಿಯ ರೂಪದಲ್ಲಿ...."

"...ಪರ್ವತ ಶಿಖರದಿಂದ ಉರುಳಿದ ಕಲ್ಲಿನಂತೆ ಮಾಧವರಾಯರು ಭರದಿಂದ ಉರುಳುತ್ತ ನಡೆದಿದ್ದರು ಅವರನ್ನು ತಡೆಯುವದಕ್ಕೆ ಶಕ್ತಿ ಬೇಕಿದ್ದಿತು. ಮೇಲಿನಿಂದ ಬರುವ ರಭಸದ ಆ ಘಾತವನ್ನು ತಡೆದುಕೊಳ್ಳುವಂತಹ ಶಕ್ತಿ ಅವರನ್ನು ತಡೆಯುವದಕ್ಕೆ ಬೇಕಿದ್ದಿತು .. ಆಗಲೆ....ನಾನು ನಿನ್ನ ಪರಿಚಯ ಮಾಡಿಕೊಟ್ಟೆ..."

"....ಸುಮಿತ್ರಾ....ಇದು ಪಾಪವೆ....?"

"ನನ್ನ ಸನಾತನಿ ಮನ ಹೇಳುತ್ತದೆ ನೀನು ಮಾಡಿದ್ದು ಪಾಪ...." ಎಂದು....ಏಕೆಂದರೆ ಓರ್ವ ಸ್ತ್ರೀಯ ದೇಹ ವಿಕ್ರಯಕ್ಕೆ ನಾನು ಕಾರಣಳಾದೆ ಎಂದು....ಆದರೆ ಸ್ತ್ರೀಯ 'ದೇಹ ವಿಕ್ರಯ'ವೆಂದರೇನು...?"

"ಯಾವ ವಿಷಯವನ್ನೂ ಮೂಲದ ವರೆಗೆ ವಿಚಾರ ಮಾಡಿದಲ್ಲಿ ಎಲ್ಲವೂ ಅಶ್ಲೀಲವೆನ್ನಿಸುತ್ತದೆ. ಸಂಸಾರವೆಂದರೂ 'ದೇಹ ವಿಕ್ರಯ' ವಲ್ಲವೆ........?.... .. ಗಂಡು ಹೆಣ್ಣನ್ನು ಮನೆಗೆ ತರುವ ಉದ್ದೇಶವಾದರೂ ಏನು....?"

"ತನ್ನ ಸಂಸಾರವನ್ನು ಬೆಳಸಲಿ ಎಂದಲ್ಲ...ತನ್ನನ್ನು ಸುಖದಿಂದಿಡುವದಕ್ಕೆ- ತನ್ನ ಎಲ್ಲ ಆಶೆಗಳನ್ನು ಪೂರೈಸುವದಕ್ಕೊಂದು ಜೀವ ಇರಲಿ ಎಂದು...."

"...ಸುಮಿತ್ರಾ.... ಈ ಜಗದಲ್ಲಿ ಯಾರೂ ತ್ಯಾಗಿಗಳಿಲ್ಲ... ಅದರಲ್ಲಿ ಗಂಡಸಂತೂ ಅತ್ಯಂತ ಸ್ವಾರ್ಥಿ. ಸ್ವಾರ್ಥದ ರಸದಿಂದ ಎರಕ ಹೊಯ್ದ ಮೂರ್ತಿ ಎಂದರೆ ಗಂಡಸು.... ಅಂತಹ ಗಂಡಸು ಎಂದಾದರೂ ಮಹಾ ಉದ್ದೇಶದಿಂದ ಎಲ್ಲಿಯೋ ಗೊತ್ತಿಲ್ಲದಲ್ಲಿ ಜನ್ಮ ತಾಳಿದ ಇಸ್ನಾರದೋ ಮಗಳನ್ನು ತೆಂದು ತನ್ನ ಮನೆಯ ಒಡತಿಯನ್ನು ಮಾಡಬಹುದೇ...? ...ಹೊಟ್ಟೆ

ಯಲ್ಲಿ ಹುಟ್ಟಿದ ಬೆನ್ನಿಗೆ ಬಿದ್ದ ಹೆಣ್ಣುಮಗಳನ್ನು ದೂಡಿ ಕೊಡುವ ಕಠೋರ ಜಾತಿಯದು....ಇಲ್ಲ... ನಾನು ಯಾರಿಗೂ ಕಠೋರ ಮಾತು ಹೇಳಲಾರೆ.... ತಿರುತಿರುಗಿ ನನಗೆ ಕುಲಕರ್ಣಿಯವರ ಉಪದೇಶ ನೆನಹಿಗೆ ಬರುತ್ತದೆ...."

" ನೀವು ಯಾರನ್ನೂ ದ್ವೇಷಿಸಬೇಡಿರಿ....ಅನ್ಯಾಯ ಘಟಿಸುವದು ಸ್ವಾರ್ಥ, ಮನುಷ್ಯನಮೇಲೆ ಅಧಿಕಾರ ನಡೆಯಿಸುವಾಗ ಆಶೆ ಮನುಷ್ಯನನ್ನು ಮುತ್ತಿದಾಗ....ದ್ವೇಷಿಸಲು ನೀವೂ ಆರಂಭಿಸಿದರೆ....ನೀವೂ ಸ್ವಾರ್ಥಿಗಳಾಗು ವಿರಿ....ಆಶೆಯೂ ನಿಮ್ಮನ್ನು ಮುತ್ತಿದೆ ಎನ್ನುವ....ಅರ್ಥವಾಗುವದು......... ದ್ವೇಷ ನಿಸ್ವಾರ್ಥಿಗಳಲ್ಲಿ ಆಶೆ ತೊರೆದವರಲ್ಲಿ ಎಂದಿಗೂ ನೆಲಿಸದು....ಅಲ್ಲದೆ.... ದಂಡಸು....ನಿಮ್ಮ ತಂದೆ....ನಿಮ್ಮ ತಮ್ಮ....ಅಣ್ಣ ....ಮಗ...."

ಎಂದು ಹೇಳಿದ ಕುಲಕರ್ಣಿಯವರ ವಿಚಾರ ಸತ್ಯವೆನ್ನಿಸಿ ಅಂದಿನಿಂದ ವಿಚಾರದಲ್ಲಿಯ ಕಠೋರತೆಯನ್ನು ತೆಗೆದು ಹಾಕಲು ಪ್ರಯತ್ನಿಸುತ್ತಿರುವೆ.... ಆದರೂ....ಅಭ್ಯಾಸ...."

"....ಸುಮಿತ್ರಾ....ತಾಯಿಯಾಗುವ ಯೋಗ್ಯತೆಯಿದ್ದವಳೇ ಸ್ತ್ರೀಯಾಗಿ ಹುಟ್ಟುತ್ತಾಳೆ...ಅಂತಹ ಯೋಗ್ಯತೆ ನಿನ್ನಲ್ಲಿದೆ....ಎಲ್ಲರಲ್ಲಿಯೂ ಇರುತ್ತದೆ.... ಆದರೆ ಯಾವುದೋ ಒಂದು ಕಾರಣ ಬೆಂಕಿಯನ್ನು ಬೂದಿ ಮುಚ್ಚುವಂತೆ ಅವರ ತಾಯ್ತನವನ್ನು ಮುಚ್ಚಿರುತ್ತದೆ....ಬೂದಿ ಹೊರಟು ಹೋದರೆ....?

"....ಸುಮಿತ್ರಾ....ನಿನಗೂ ಆಧಾರವಿರಲಿಲ್ಲ.........ನನ್ನ ಆಧಾರವೆಂತ ಹುದು....? ಅಂತೆಯೇ ಎಲ್ಲವನ್ನೂ ವಿಚಾರಿಸಿ....ನಿನ್ನ–ಅವರ ಪರಿಚಯ ಮಾಡಿಸಿದೆ...."

"....ನೀನು ಕೋಪಿಸಬಹುದು . ಸುಮಿತ್ರಾ....ಅನೇಕ ತಪ್ಪು ಕೆಲಸ ಗಳನ್ನು ನಾನೂ ಮಾಡುತ್ತೇನೆ....ಇದೂ ಒಂದು ಅಂತಹದೇ ಎಂದು ತಿಳಿ ದುಕೊ....ತಪ್ಪಿದ್ದರೆ....ಕ್ಷಮಿಸು ..."

"....ಯಾರಿಗೂ ಕೆಡಕಾಗಬೇಕೆಂಬ ಭಾವನೆ ನನ್ನಲ್ಲಿಲ್ಲ...."

ಎಂದು ಕಾಮಿನಿ ಹೇಳುವಾಗ ಅವಳ ಕಂಗಳಲ್ಲಿ ಅಶ್ರು ತುಂಬಿರು ತ್ತವೆ....

ಆಗೀಗ ನನ್ನ ಮನದಲ್ಲಿ ಪುಟಿದೇಳುವ " ಕಾಮಿನಿ ನನ್ನನ್ನು ಮಾಧವ ರಾಯರಿಗೆ ಒಪ್ಪಿಸಿದಳೇಕೆ ? " ಎನ್ನುವ ವಿಚಾರಕ್ಕೆ ಉತ್ತರವೂ ದೊರತಿತು.

" ಸುಮಿತ್ರಾ....ನೀನಿಲ್ಲದಿದ್ದರೆ ನಾನು ಹಾಳಾಗುತ್ತಿದ್ದೆ..." ಎಂದು ತಿರುತಿರುಗಿ ಹೇಳುವ ಮಾಧವರಾಯರ ಮಾತು ಕೂಡ ಅಸತ್ಯವೆಂದು ಅನ್ನಿಸುವದಿಲ್ಲ.

ನಾನು ಮಾಧವರಾಯರನ್ನು ತಡೆದೆನೆ....? ಹೇಗೆ....? ನನಗೆ ಅರಿವಿಲ್ಲದೆ ನನ್ನಿಂದಾದ ಕಾರ್ಯಕ್ಕಾಗಿ ನಾನು ಧನ್ಯಳೆಂದುಕೊಳ್ಳಬಾರದು. ಆದರೆ ಕಾಮಿನಿ ಹೇಳುವಂತೆ—

" ತಾಯಿಯಾಗುವ ಯೋಗ್ಯತೆ ಇದ್ದವಳೇ ಸ್ತ್ರೀಯಾಗಿ ಹುಟ್ಟುತ್ತಾಳೆ" ಎನ್ನುವದು ಅಸತ್ಯವೂ ಇರಲಾರದು. ತಾಯಿ ಸತ್ತ ಮಗನನ್ನು ಜೋಪಾನ ಮಾಡುವ ಕಾರ್ಯ ತಂದೆಯಿಂದ ಅಸಾಧ್ಯ ಆತ ತಾಯಿಯ ಹೃದಯವನ್ನು ತನ್ನ ಹೃದಯಕ್ಕೆ ಹೊಂದಿಸಿಕೊಂಡರೂ ತಾಯಿಯಾಗಿ ಕಾಯಲಾರ. ....ಸ್ತ್ರೀ ಯಾವ ಕಷ್ಟವಿಲ್ಲದೆ ಆ ಕಾರ್ಯವನ್ನು ಸಹಜವಾಗಿ ನೆರವೇರಿಸುವಳು.. .ಏಕೆಂದರೆ...ಅವಳು ತಾಯಿಯು

....ಅವಳು... ತಾಯಿಯು....

....ನಾನೂ ತಾಯಿ....ನನ್ನ ಕಾರ್ಯ ಸಲಹುವದು....ಎಲ್ಲರನ್ನೂ ಸಲಹುದು....ಮಾಧವರಾಯರನ್ನು ಕೂಡ....

ಅವರ ಹಣ ನನ್ನ ದೇಹವನ್ನು ಬಾಳಿಸಬಹುದು ...ಆದರೆ ಅದೇ ಹಣ ಅವರನ್ನು ಅವರ ದೇಹವನ್ನು....ಅವರ ಮನವನ್ನು ಹಾಳು ಮಾಡುವದು, ಧ್ವಂಸ ಮಾಡುವದು....ಹೇಳ ಹೆಸರಿಲ್ಲದೆ ಉಧ್ವಸ್ಥ ಮಾಡುವದು....

ಸುಮಿತ್ರಾ....ಹಣ ಅಮೃತವಲ್ಲ ವಿಷ........ಹಣಕ್ಕೆ ದೊರೆಯದ್ದಿಲ್ಲ. ಆದರೆ ದೊರೆಯುವದೆಲ್ಲವೂ ದೊರೆತನಂತರ ವಿಷವಾಗುತ್ತದೆ........ಅಥವಾ ದೊರೆತದ್ದೇ ವಿಷವಿರುತ್ತದೆ. ಅದೇ ವಿಷ ನನ್ನನ್ನು ಹಾಳುಮಾಡುವದರಲ್ಲಿತ್ತು...

"....ನನ್ನ ಮನ ತುಂಬ ವಿಚಿತ್ರವಾಗಿತ್ತು... ಹೃದಯ ತುಂಬ ಕಾತರಗೊಂಡಿತ್ತು.

... ಕಟುಕರ ಕೈಯಲ್ಲಿಯ ತಾಯಿ ಕಳೆದುಕೊಂಡ ಕರುವಾಗಿದ್ದೆ ನಾನು. ....ಎಲ್ಲೆಲ್ಲಿಯೂ ಕಟುಕಶೆ ಕಠೋರ ಕಂಗಳಿಂದ ನನ್ನನ್ನು ಎಳೆಯುತ್ತಿತ್ತು...

ನಿಃಸಹಾಯನಾದ ನಾನು ತಡೆದದ್ದು ಆಶ್ಚರ್ಯ....ಭಾವಿಸಬೇಕೆಂದಾಗ.... ಕಾಮಿನಿಯ ಮಾತು... ನೆನಹಿಗೆ ಬರುತ್ತಿದ್ದವು.

" ತಾಯಿಯಿಂದ... ಇದನ್ನೇ ಅಪೇಕ್ಷಿಸುವಿರಾ..."...."

" ಅಯ್ಯೋ " ಎನ್ನುತ್ತಿದ್ದೆ....ವಿಚಾರದಿಂದ ಹುಚ್ಚನಾಗುತ್ತಿದ್ದೆ........ ಕಾಮದ ಕಂಗಳಿಗೆ ಕಂಡಲ್ಲೆಲ್ಲ....ಕಾಮ ಕಾಣುತ್ತಿತ್ತು ಕೇಕೆಹಾಕಿ ಕುಣಿ ಯುವದು...ಅಂತಹ ಅವಸ್ಥೆಯಲ್ಲಿ ಅತ್ತ ಧಾವಿಸುತ್ತಿದ್ದೆ.......ಅಜ್ಞಾತ ಪ್ರಚಂಡ ಶಕ್ತಿ...ನನ್ನನ್ನು ಎಳೆದೊಯ್ಯುತ್ತಿತ್ತು........ತೀರ ಹತ್ತಿರ ಹೋಗು ತ್ತಿದ್ದೆ....ಹೆಣ್ಣಿನ ದೇಹವನ್ನು ಕಾಮದ ಕಂಗಳಿಂದ ಕಂಡಾಗ...ಇದು ನನ ಗಾಗಿಯೇ ಇದ್ದುದು....ಎನ್ನಿಸುತ್ತಿತ್ತು. ತೀರ ಹತ್ತಿರ ಹೋಗುತ್ತಿದ್ದೆ.... ದೇಹದಿಂದ ಕಂಗಳು ಆ ದೇಹದ ಕಂಗಳತ್ತ ಸೆಳೆದಾಗ... ಅಲ್ಲಿ....ಕಾಣುವ ದೇನು....? "

" ಕಾಮವಲ್ಲ, ದೀನತೆ...ನಿಃಸಹಾಯತೆ....ನಿರ್ಬಲತೆ..."

" ನನ್ನ ಕಂಗಳಿಗೆ ಅದೆಲ್ಲ ಕಾಣಬಾರದು...."

"ಆದರೂ ಕಾಣುತ್ತಿದ್ದವು. ಕಾಮದ ಕಣ್ಣಿನಲ್ಲಿ ಅಂಜನ ಹಾಕಿ ಕೇಳು ತ್ತಿದ್ದವು...ಹೇಳುತ್ತಿದ್ದವು.... 'ನೋಡು ಇವಳನ್ನು....ನಿನಗೆ ಇವಳ ದೇಹ ಬೇಕೇ...? ತೆಗೆದುಕೊ...ಅದಕ್ಕೆ ಪ್ರತಿಫಲ....ನೀನು ಕೊಡುವ ಹಣ....ನಿನ್ನ ಹಣಕ್ಕೆ ಅವಳು ಕೊಡುವದು ದೇಹ...."

"ದೇಹ....! ಎಲಬು ಮಾಂಸದ ಮುದ್ದೆಗೆ ತೊಗಲಿನ ಹೊದಿಕೆ ಇಟ್ಟ ದೇಹ...."

" ಇಂತಹದೇ ಇದಕ್ಕಿಂತ ಸುಂದರವಾದ ದೇಹ ಮನೆಯಲ್ಲಿದೆ...ಅದು ನನ್ನದೆಂದು ಇದೆ. ನಾನು ತಂದ ದೇಹವದು...ನನ್ನ ಅನ್ನದಿಂದ ಬೆಳೆಯುವ ದೇಹವದು....ಯಾವಾಗ ಬೇಡಿದರೂ ಸಿಕ್ಕುವ ದೇಹವದು..."

" ನನಗೆ ಬೇಕಾದುದು....ದೇಹವೇ....? "

" ನನಗೆ ದೇಹದಿಂದ ಶಾಂತಿ ಸಿಕ್ಕುವದಾದರೆ...ಇಲ್ಲಿಗೆ ಬರಬಾರದು ....ಮನೆಯಲ್ಲಿಯೇ ಇದೆ...."

"....ಅಲ್ಲ....ಅಲ್ಲ........ಅಲ್ಲ "

"....ಸುಮಿತ್ರಾ....ಹುಚ್ಚನಂತಾಗುತ್ತಿದ್ದೆ ... ಏನು ಮಾಡುವದಕ್ಕೂ ತಿಳಿಯದು..."

" ಹುಚ್ಚನಂತೆ ಹೊರಡುತ್ತಿದ್ದೆ. ಹೊತ್ತು ವೇಳೆ ಇಲ್ಲದೆ....ಯಾವುದು ಏನು....ಎಲ್ಲಿಗೆ ಎನ್ನುವದರ ಪರವೆಯಿಲ್ಲದೆ...."

"....ಕೆನ್ನೆಗೆ ಏಟು ಬಿದ್ದಾಗ ಪ್ರಜ್ಞೆ ಮೂಡುತ್ತದೆ. ಎಂದು ಹೇಳುವದು ಸುಳ್ಳಲ್ಲ. ಇಂತಹದೇ ಒಂದು ವೇಳೆಯಲ್ಲಿ...ನಾನು ಮೋಟಾರಿಗೆ ಸಿಕ್ಕು ಕಾಲು ಮುರಿದುಕೊಂಡೆ. "

....ಅಲ್ಲಿ ಕಂಡಳು....ಆ ತಾಯಿ...ಕಾಮಿನಿ....

" ಅವಳು ಕೇಳಿದಳು...."

" ತಾಯಿಯಿಂದ....ಇದನ್ನೇ ಅಪೇಕ್ಷಿಸುವಿರಾ....? ಎಂದು..."

ಅಂದಿನಿಂದಹೆಣ್ಣುಗಳಲ್ಲಿ....ಅವರ ಕಂಗಳಲ್ಲಿ....ನಿರ್ಬಲತೆ ದೀನತೆ.... ನಿಃಸಹಾಯತೆಯ ಜೊತೆಗೆ ಮತ್ತೊಂದು ಭಾವವನ್ನು ಕಾಣತೊಡಗಿದೆ...."

"....ಅಂದಿನಿಂದಂತೂ ಯಾವುದೂ ಬೇಡವಾಗತೊಡಗಿತು "

" ಆದರೂ ದೇಹಕ್ಕೆ ಆಶೆ....ಆ ಆಶೆಯ ಕೈವಶವಾಗಿ ಓಡುತ್ತಿದ್ದೆ.... ಧಾವಿಸುತ್ತಿದ್ದೆ. ದೂರ....ದೂರ ಎಲ್ಲಿ ನನ್ನ ಒಳ್ಳೆಯ ಮನ ಸದ್ಬುದ್ಧಿ ಸುಳಿಯುವದಿಲ್ಲವೋ ಅಲ್ಲಿಯವರೆಗೆ...

"...ಕೊನೆಯ ಕ್ಷಣದಲ್ಲಿ...."

" ತಾಯಿಯಿಂದ ಇದನ್ನೇ ಅಪೇಕ್ಷಿಸುವಿರಾ....? " ಎನ್ನುವದು ನನ್ನ ಅಧಃಪತನಕ್ಕೆ ಅಡ್ಡಿಯಾಗುತ್ತಿತ್ತು ದೇವದೂತನಾಗಿ...."

" ಮತ್ತೆ ವಿಚಾರಿಸುತ್ತಿದ್ದೆ...ನನಗೆ ಬೇಕಾದುದೇನು...? "

ದೇಹ ತನಗೆ ಬೇಕಾದುದನ್ನು ಹೇಳುತ್ತಿತ್ತು....ಮನ ತನಗೆ ತಿಳಿದದ್ದನ್ನು ಹೇಳುತ್ತಿತ್ತು. ಎರಡೂ ವಿಚಾರಗಳ ಮಥಿತಾರ್ಥ—"

" ನನಗೆ ಬೇಕಾದವಳು....ಪತ್ನಿ....ಹೆಣ್ಣು ಅಲ್ಲ..."

" ಯಾವ ಹೆಣ್ಣು ತಾಯಿಯಾಗಬಹುದು, ಆದರೆ ಪತ್ನಿಯಾಗಲಾರಳು. ಪತ್ನಿಯಾಗುವ ಕಾರ್ಯತುಂಬ ಕಠಿಣ. ಅದಕ್ಕೆ ಯೋಗ್ಯತೆ ಬೇಕು...

"....ದೊರೆಯಬಹುದೆ....? " ದೇಹ ಕೇಳುತ್ತಿತ್ತು.

"ಮನ ಉತ್ತರಿಸುತ್ತಿರಲಿಲ್ಲ....ಇಂತಹ ವೇಳೆಯಲ್ಲಿಯೇ ಕಾಮಿನಿಯು ನಿಮ್ಮ ವಿಚಾರ...ನಿಮ್ಮ ಕತೆ ಹೇಳಿ "ನಿಮ್ಮ ಸಹಾಯ ಅವಳಿಗೆ ಅವಶ್ಯವಿದೆ" ಎಂದು ಹೇಳಿದಳು. ಕೊನೆಗೆ ಅವಳು....

"ಅವಳು ಗೃಹಲಕ್ಷ್ಮಿಯಾಗಲು ಯೋಗ್ಯಳು. ಆದರೆ ಅವಳ ದುರ್ದೈವ...." ಎಂದೂ ಉಸಿರ್ಗರೆದಳು...."

" ಆಗಲೇ ಮನಕ್ಕೆ ಆಶೆ...ದೇಹಕ್ಕೆ ದುರಾಶೆ...."

"ನಿಮ್ಮ ಪರಿಚಯವಾಗಿರದಿದ್ದರೆ....ನಾನು ತುಂಬ ದಿನ ಅದೇ ಅವಸ್ಥೆಯಲ್ಲಿ ತಡೆಯುತ್ತಿರಲಿಲ್ಲ. ದೇಹಕ್ಕೆ ಕಸವು ಹೆಚ್ಚು....ಉಪದೇಶ ಹಳೆಯದಾದಂತೆ ಶಕ್ತಿ ಕಳೆದುಕೊಳ್ಳುತ್ತದೆ. ಆಗ್ಗೆ ದೇಹದ ಕಸುವು ಬೆಳೆಯುತ್ತದೆ... ಒಂದು ದಿನ... ನಾನೂ....ದೇಹದೊಂದಿಗೆ..."

" ನೀವು....ನನ್ನನ್ನು ಬದುಕಿಸಿದಿರಿ....ಹಾಳಾಗುವವನನ್ನು ತಡೆದಿರಿ...."

"ಇದೂ ನ್ಯಾಯವೇ...? ಪಾಪವಲ್ಲವೆ....? " ಎಂಬ ವಿಚಾರ ಉದ್ಭವಿಸುತ್ತದೆ. ಆಗೆಲ್ಲ....ಮನಕ್ಕೆ ಸಮಾಧಾನ.... "ಇವಳು ನನ್ನ ಪತ್ನಿ....ಪತ್ನಿಯ ಜೊತೆಗೆ ಸಂಸಾರ ಪಾಪವಲ್ಲ..." ಎನ್ನುವದು...."

"ಇದು ಸರಿ ಎಂದು ನಿನಗನ್ನಿಸುವದಿಲ್ಲವೆ....? "

ಎಂದು ಮಾಧವರಾಯರು ಕೇಳುತ್ತಾರೆ.

ಅವರು ಹೇಳುವದು ಸರಿ...ಯೋಗ್ಯ. ಎಂದು ನನಗೂ ಅನ್ನಿಸದೆ ಇಲ್ಲ. ಪತಿ ಪತ್ನಿಯರಾದವರು ಪತಿ ಪತ್ನಿಯರಂತೆಯೇ ಇರಬೇಕಲ್ಲವೆ....?

ನಾನು ಮಾಧವರಾಯರ ಪತ್ನಿ....

ಹಾಗೆಲ್ಲ ಜನ ಹೇಳುವದಿಲ್ಲ. ಆದರೆ ನಾನು ಕೇಳಬೇಕಾದುದು ಜನವನ್ನಲ್ಲ. ಮಾಧವರಾಯರನ್ನು ಅವರೇ ಹೇಳುತ್ತಾರೆ 'ನಾನು ಅವರ ಪತ್ನಿ' ಎಂದು. ಆದ್ದರಿಂದ—

ನಾನು ಮಾಧವರಾಯರ ಪತ್ನಿ.

ಒಬ್ಬರ ಪತ್ನಿಯಾಗುವದರಿಂದ ಸ್ತ್ರೀಯ ಅಸ್ತಿತ್ವ ಅಳಿಯುತ್ತದೆ ಎಂದು ಕಾಮಿನಿ ಹೇಳಿದ್ದಳು. ಆದರೆ ನನ್ನ ವಿಚಾರದಲ್ಲಿ 'ಅಸ್ತಿತ್ವ ಅಳಿಯುವದಿಲ್ಲ, ಉಂಟಾಗುತ್ತದೆ'

ಇಂದಿನ ವರೆಗೆ ನಾನೇನಿದ್ದೆ....? ನನಗೆ ಅಸ್ತಿತ್ವವೆಲ್ಲಿತ್ತು....? ನಿಜಕ್ಕೂ ವಿಚಾರ ಮಾಡಿದಲ್ಲಿ ತಂದೆಯ ಮಗಳಿಗೆ ಅಸ್ತಿತ್ವವೇ ಇಲ್ಲ. ಸ್ತ್ರೀಗೆ ಅಸ್ತಿತ್ವವೇ ಇದ್ದುದಾದರೆ ಯಾರೊಬ್ಬರ ಪತ್ನಿಯಾದ ನಂತರ ಮಾತ್ರ.

ನಾನು ಮಾಧವರಾಯರ ಪತ್ನಿ. ಆದ್ದರಿಂದ ನನಗೂ ಅಸ್ತಿತ್ವ....

ಬೀದಿ ಪಾಲಾಗಲು ಹೊರಟ ನಾನು ಮನೆಯ ಬೆಳಕಾದೆ....ಮಾಧವ ರಾಯರ ಮನೆಯ ಬೆಳಕಾದೆ....

ಮನೆಯಿಂದ ಬೀದಿಗೂಡಲು ಹೊರಟ ಅವರೂ ಮತ್ತೆ ಮನೆ ಸೇರಿದರು.

"ಮನೆ ಎಂದರೆ ಇದು...ಶಾಂತಿಯಿಂದ ಗುಡಿಸಿಲಲ್ಲಿ ನೀರು ಕುಡಿದಾದರೂ ಇರಬಹುದು. ನಾನೂ ಇರುವೆ. ಅದರಲ್ಲಿ ನನಗೆ ಸಮಾಧಾನವಿದೆ. ಆನಂದವಿದೆ. ಆದರೆ....

"ಆದರೆ....ಪ್ರೇಮವಿಲ್ಲದ ಮನವಿಲ್ಲದ ಭವ್ಯ ಮನೆಯಲ್ಲಿ ಒಂದು ಕ್ಷಣ ಕೂಡ ಇರುವದಾಗದು. ಅದು ಮನೆಯಲ್ಲ ಪೇಟೆ....ಪಲ್ಲೆಯ ಪೇಟೆ .. ಅಲ್ಲಿ ಕುಳಿತವರೂ ವ್ಯಾಪಾರಿಗಳೂ ಬಂದವರೂ ವ್ಯಾಪಾರಿಗಳು....ಯಾರಹಿತವನ್ನು ಯಾರಿಗೂ ಸಾಧಿಸುವದಿಲ್ಲ. ಎಲ್ಲರೂ ಒಬ್ಬರನ್ನು ಸೆಳೆದು ಹೆಚ್ಚು ಲಾಭಗಳಿಸ ಬೇಕೆನ್ನುವವರು....ನನ್ನ ಆ ಮನೆಕೂಡ ಅದೇ ಆಗಿದೆ..."

"....ಸುಮಿತ್ರಾ...ಇಲ್ಲಿ ನೀನಿರುವಿ .. ನಿನ್ನ ಹೃದಯವಿದೆ....ನನಗಾಗಿ ಮಿಡಿಯುವ ನಿನ್ನ ಹೃದಯವಿದೆ....ಅಂತೆಯೇ ಸುಮಿತ್ರಾ....ಇಲ್ಲಿ ಎಲ್ಲವೂ ಇದೆ....ಇದಕ್ಕಾಗಿಯೇ ನಾನು....ಕಾತರಿಸಿದ್ದು........ಹಲುಬಿದ್ದು. ಸಂಕಟ ಪಟ್ಟಿದ್ದು...."

"....ಕೊನೆಗೂ ದೊರಕಿತು....ದೊರಕಿತು..."

ಎಂದು ಸಮಾಧಾನ ಹೊಂದುತ್ತಾರೆ ಮಾಧವರಾಯರು.

ಅವರ ಸಮಾಧಾನದಿಂದ ನನ್ನಲ್ಲಿ ಧನ್ಯತೆ.

ಅವರ ಸಮಾಧಾನ ನನ್ನ ಧನ್ಯತೆ ಎರಡೂ ಕೂಡಿದಾಗ ನಮ್ಮ ಚಿಕ್ಕ ಸಂಸಾರದಲ್ಲಿ ಹೊಸ ನೊಬಗುಕಂಡು ಬರತ್ತದೆ... ಸಂಸಾರದ ಬಳ್ಳಿ ಹಂದರ ತುಂಬ ಹಬ್ಬಿ....ಹೂ ಬಿಡುತ್ತದೆ. ಹೂವಿನ ಕಂಪು ಎಲ್ಲೆಲ್ಲಿಯೂ ಅಡಗುತ್ತದೆ....ಎಲ್ಲೆಲ್ಲಿಯೂ ಪಸರಿಸುತ್ತದೆ.

ಹಾಗೆ ಪಸರಿಸಬಾರದಿತ್ತು.

ಸಂಸಾರದ ಸುಗಂಧ ಎಲ್ಲೆಲ್ಲಿಯೂ ಪಸರಿಸಿ ಎಲ್ಲರನ್ನೂ ಮುಗ್ಧಗೊಳಿಸಬಾರದಿತ್ತು....ಅದರಿಂದಲೇ ನನ್ನ ಘಾತವಾಯಿತು. ಮತ್ತೊಂದು ಆಘಾತವಾಯಿತು.

ಅದೇ ಕೊನೆಯ ಆಘಾತ....

ಅಲ್ಲಿಗೆ ನನ್ನ ಬಾಳುವ ಆಶೆ ಕಡಿದು ಹೋಯಿತು. ಬದುಕಬೇಕೆನ್ನುವ ಇಚ್ಛೆಗೆ ಪೂರ್ಣವಿರಾಮ ಕೊಟ್ಟಂತಾಯಿತು.

ನನ್ನ ಸಂಸಾರ ನಾಟಕದ ಕೊನೆಯ ಅಂಕಿನ ಪಡದೆ ಬಿದ್ದಂತಾಯಿತು... ಅಲ್ಲ ಬಿದ್ದಿತು. ಸಂಸಾರ ನಾಟಕದ ಕೊನೆಯ ಪರದೆ....ಧೊಪ್ಪೆಂದು ಹರಿದು ಬಿದ್ದಿತು.

ನಾಟಕವೂ ಮುಗಿದಿತು....

ಮುಗಿಯದಿದ್ದರೂ ಮುಗಿಸಬೇಕಾಯಿತು........ಏಕೆಂದರೆ ನಾಟಕ ಗೃಹವೇ ಝಂಝಾವಾತಕ್ಕೆ ಸಿಲುಕಿ ಹಾರಿ ಹೋಗಿತ್ತು.

ಎಲ್ಲಿಗೆ....?

ಮಸಣದ ಮೂಲೆಯಲ್ಲಿ ಉರಿಯುವ ಚಿತೆಯೇ ನನ್ನ ನಾಟಕ ಗೃಹದ, ನಾಟಕದ ಸಂಸಾರದ ಚಿತೆಯಾಗಿತ್ತು. ಆ ಚಿತೆಯ ಬೆಳಕಿನಲ್ಲಿ... ಕಂಡವರೆಲ್ಲರೂ ಕೇಕೆ ಹಾಕಿ ನಗುತ್ತಿದ್ದರೂ ಅವರ ನಗು ಚಿತೆಯ ಮಧ್ಯದಲ್ಲಿಯ ನನ್ನ ಶವಕ್ಕೆ ಕೇಳುತ್ತಿತ್ತು....ನನ್ನ ಶವ ಲಜ್ಜೆಯಿಂದ ಅಲ್ಲಿಯೇ ತಲೆ ತಗ್ಗಿಸುತ್ತಿತ್ತು.

ಸುತ್ತೆಲ್ಲ....ಜ್ವಾಲೆ....ಒಳಗೂ ಜ್ವಾಲೆ....ಎಲ್ಲೆಲ್ಲಿಯೂ ಜ್ವಾಲೆ...ನಾನು ಮಾಡಿದ ಅಪರಾಧವೇನು....? ಯಾರನ್ನೂ ಮುರಿದು ತಿನ್ನುವ ಹೊಂಚು ಹಾಕಿರಲಿಲ್ಲ. ಯಾರ ಮನೆಗೂ ಬೆಂಕಿ ಇಟ್ಟು ಬಾಳುವ ವಿಚಾರ ಕನಸು ಮನ

ಷ್ಟಿನಲ್ಲಿಯೂ ಮಾಡಿರಲಿಲ್ಲ. ಯಾರಿಗೂ ನೋವಾಗದ ರೀತಿಯಲ್ಲಿ ನಡೆದು ಆದರ್ಶವನ್ನು ಸಾಧಿಸುವ ಕನಸಿನ ಹುಚ್ಚುತನದಲ್ಲಿ ನಾನಿದ್ದೆ.

ನನ್ನ ಆದರ್ಶತೆ ಭಸ್ಮವಾಯಿತು....ಇಲ್ಲ. ಆದಕ್ಕೆ ಬೆಂಕಿ ಕೊಡಲಾಯಿತು...

"ಸುಮಿತ್ರಾ ನೀನು ನಿಜಕ್ಕೂ ದುರ್ದೈವಿ...." ಎಂದು ಕಾಮಿನಿ ನನ್ನನ್ನು ಬಿಗಿದಪ್ಪಿದಳು. ತಾಯಿಯಾಗಿ....ತಾಯಿಯ ಉಡಿಯು ಕೂಡ ಸುಖಕರವೆನ್ನಿಸದಷ್ಟು ಕಠೋರವಾಗಿತ್ತು ವೇದನೆ. ನೀರಿನಿಂದ ಬಯಲಿಗೆ ಬೀಸಾಕಿದ ಮೀನು ತಾಯಿ ಪಕ್ಕದಲ್ಲಿದ್ದರೇನು...? ದೂರದಲ್ಲಿದ್ದರೇನು....? ಜ್ವಾಲೆಯಿಂದ ಹುರುಪಳಿಸಿದ ದೇಹಕ್ಕೆ ತಾಯಿಯ ಅಪ್ಪಿಗೆಯಿಂದ ಸುಖವೆನ್ನಿಸುವದೆ?

ಸುಖ...!

ಅದು ನನ್ನ ಏಳು ಜನ್ಮದ ವೈರಿ. ನಾನೆಲ್ಲಿಯೂ ಕೊಂಚ ವಿಶ್ರಮಿಸುತ್ತಿದ್ದರೂ ಧಾವಿಸಿ ಬಂದು ನನ್ನನ್ನು ಕಾಡುತ್ತಿತ್ತು.

ನಾನು ಯಾರಿಗೂ ಯಾವ ಅಪಕಾರವನ್ನೂ ಮಾಡಿರಲಿಲ್ಲ. ಕಾಮಿನಿ ಕೂಡ ಆದನ್ನೇ ಹೇಳುತ್ತಿದ್ದಳು.

" ಯಾರಿಗೂ ಕೆಡಕು ಮಾಡದ ನಿನಗೆ ಈ ರೀತಿ ಸಂಕಟಗಳು ಒದಗು.ವದನ್ನು ನೋಡಿದರೆ ಪರಮಾತ್ಮನ ಅಸ್ತಿತ್ವದಲ್ಲಿಯೇ ನಂಬಿಗೆ ನಷ್ಟವಾಗುತ್ತದೆ...ವಿಶ್ವಾಸ ಹಾರಿ ಹೋಗುತ್ತದೆ...ಈ ಜಗಕ್ಕೆ ಬೆಂಕಿ ಕೊಟ್ಟು ಅದು ಸುತ್ತಲಿನಿಂದ ದಹಿಸುತ್ತ ಬರುವಾಗ ಅದರಲ್ಲಿ ಸಿಕ್ಕು ಎಲ್ಲರೂ ಕೀಸರಿಡುವಾಗ...ನೋಡಿ ಕೇಕೆ ಹಾಕಬೇಕು ಎನ್ನಿಸುತ್ತದೆ....ನೀನು ಯಾರಿಗೆ ಏನು ಮಾಡಿರುವೆ....? "

ನಾನು ಯಾರಿಗೂ ಯಾವ ಕಾಲದಲ್ಲಿ ಕೂಡ ಅಪಕಾರ ಮಾಡಿಲ್ಲ. ಅಂತಹ ವಿಚಾರವೂ ನನ್ನದಿಲ್ಲ ..ತಿಳಿಯದ ಹುಚ್ಚುದಿನಗಳಲ್ಲಿ .ಗಂಡಿನೊಡನಾಡಿದ ಪಾಪವೊಂದನ್ನುಳಿದರೆ ನಾನು ಮಾಡದುದಾದರೂ ಏನು....?

ಕುಲಕರ್ಣಿಯವರು ಕೂಡ " ಸುಮಿತ್ರಾ.........ನಿಮ್ಮಿಂದ ಯಾವ ಪಾಪವೂ ಘಟಿಸಿಲ್ಲ " ಎಂದು ಹೇಳಿಲ್ಲವೆ...?

ಕುಲಕರ್ಣಿಯವರು...

ತಡೆದ ದುಃಖ ಉಮ್ಮಳಿಸಿ ಬರುತ್ತದೆ....

"ಸುಮಿತ್ರಾ... ಕಣ್ಣೀರಿಡಬೇಡ.... ನನ್ನಾಣೆ.... ಎಂದು ಕಟ್ಟಪ್ಪಣೆ ಮಾಡಿದ್ದಾರೆ ಅವರು ಆದರೆ ಕಣ್ಣೀರು ಕಟ್ಟಪ್ಪಣೆಯನ್ನೂ ಕಟ್ಟೆನ್ನೂ ಕಿತ್ತಿನೆದು ನುಗ್ಗುತ್ತಿದೆ.... ಹೇಗೆ ತಡೆಯಿಲಿ? ಯಾರ ಹತ್ತಿರ ಹೋಗಿ ನನ್ನ ದುಃಖವನ್ನು ಹೇಳಿಕೊಳ್ಳಲಿ....? ನನ್ನ ದುಃಖವನ್ನು ಕೇಳಿಕೊಂಡು ನನ್ನನ್ನು ಸಾಂತ್ವನ ಮಾಡುವ ದೇವದೂತ ಇರುವನಾದರೂ ಎಲ್ಲಿ...?

ಧಾವಿಸಿ ಬಂದ ದೇವನೇ ಬಿಟ್ಟುಕೊಟ್ಟು ತೆರಳಿದಾಗ ದೇವದೂತ ಬರುವನಾದರೂ ಹೇಗೆ? 'ಕಷ್ಟಕಾಲದಲ್ಲಿ ಸಹಾಯಕ್ಕೆ ದೇವರು ಧಾವಿಸುವನು' ಎಂದು ಕುಲಕರ್ಣಿಯವರು ಹೇಳುತ್ತಿದ್ದರು.

ಎಲ್ಲಿರುವ...? ಎಲ್ಲಿರುವ ಆ ದೇವ....?.... ಕುಲಕರ್ಣಿಯವರ ಮಾತು ಸುಳ್ಳೆಂದು ಹೇಳಲಾ...? ಹೇಗೆ ಹೇಳಲಿ ..?... ಹೇಗೆ ಹೇಳದೆ ಇರಲಿ...?

ಎಲ್ಲಿಯಾದರೂ ಇದ್ದರೆ ಬರಬಾರದೆ ಧಾವಿಸಿ....? ನನ್ನ ದುಃಖಕ್ಕೆ ಮನಕರಗಿ ಬಾರದಿದ್ದರೂ ಕುಲಕರ್ಣಿಯವರ ಮಾತು ಸತ್ಯಕ್ಕಿಳಿಸುವದಕ್ಕಾದರೂ ಬರಬಾರದೆ...?

ಸುಳ್ಳು.... ಸುಳು.... ಎಲ್ಲವೂ ಸುಳ್ಳು ... ಈ ಜಗದಲ್ಲಿ ಸತ್ಯ.... ನ್ಯಾಯ ಎಲ್ಲವೂ ಸುಳ್ಳು....

ಅನ್ಯಾಯವೇ ಇಲ್ಲಿ ಎಲ್ಲರನ್ನು ಆಳುವ ರಾಜ. ಸುಳ್ಳು ಆ ರಾಜನ ಕುಲದೇವತೆ... ಈ ರಾಜ್ಯದಲ್ಲಿ ಮಾನವರಿಗೆ... ನನ್ನಂತಹರಿಗೆ ಸ್ಥಾನವಿಲ್ಲ.... ಇಲ್ಲಿ ಬದುಕುವವರೆಲ್ಲರೂ ರಾಕ್ಷಸರು. ದೈತ್ಯರು. ದೆವ್ವಗಳು... ಅವರಿಗಾಗಿಯೇ ನಿರ್ಮಾಣವಾದ ರಾಜ್ಯವಿದು....

ಈ ರಾಜ್ಯದಿಂದ ನನ್ನನ್ನು ಮುಕ್ತ ಮಾಡುವರು ಯಾರು .. ....? ಯಾರು.......?

ಕುಲಕರ್ಣಿಯವರಾದರೂ ಇದ್ದರೆ........?

"ಅವರ ವಿಚಾರ ಇನ್ನು ನಾವು ಮಾಡುವದು ಹುಚ್ಚತನ...." ಎಂದು ಕಾಮಿನಿ ಹೇಳುವಳು.

ಆಹುದು ಹುಚ್ಚುತನ.... ಅವರು ಎಂದಿಗೂ ಬರಲಾರರು.... ಎಂದೆಂದಿಗೂ ಬರಲಾರರು....

ಇಲ್ಲ... ಬರುವರು... ನಿಶ್ಚಿತವಾಗಿ ಬರುವರು... ಅವರೇ ಹೇಳಿದ್ದಾರೆ....
"ಸುಮಿತ್ರಾ.... ನಾನು ಬರುವೆ... ನಿಶ್ಚಿತವಾಗಿ ಬರುವೆ.... ನಿನ್ನ ಮಗ
ನಾಗಿ... ಬರುವೆ..."

ಎದೆ ಬಿರಿಯುತ್ತದೆ. ಗಂಟಲು ಹರಿದು ಛಿನ್ನವಿಚ್ಛಿನ್ನವಾಗುವಷ್ಟು
ಕೂಗಬೇಕೆನ್ನಿಸುತ್ತದೆ.

" ಕೂಗಿದರೆ ಬರುವದೇನು ...? ಬರಲಾರದವ್ಪು ಏನು ಮಾಡಿದ್ದರೂ
ಬರುವದಿಲ್ಲ" ಎಂದು ಕಾಮಿನಿ ನನ್ನ ಕೂದಲಮೇಲೆ ಕೈಯಾಡಿಸುತ್ತಾಳೆ.

ಆದರೂ ಸಮಾಧಾನವಿಲ್ಲ. ಹೆತ್ತ ತಂದೆ ತಾಯಿಗಳ ಮನೆಯನ್ನು
ತ್ಯಜಿಸದೆ.... ಅವರ ನೆನಹು ಕೂಡ.... ಬರುವದಿಲ್ಲ. ಸರಸವಾಡಿ ಸುಖವುಂಡ
ರಂಗನ ನೆನಹಿಲ್ಲ.... ಆದರೆ ... ಕುಲಕರ್ಣಿಯವರು....

ಅವರು ಹೆತ್ತವರಲ್ಲ. ಹೊಂದಿದವರಲ್ಲ.... ಎಲ್ಲಿಂದಲೋ ಬಂದು
ನನ್ನನ್ನು ಕರೆದುಕೊಂಡರು....

ಅವರು ನನಗೆ ದೇವರಾದರು— ತಂದೆತಾಯಿಗಳಾದರು.... ಪತಿಯಾಗು
ವದರಿದ್ದರು... ಕೊನೆಗೆ ಹೇಳಿದರು "ಸುಮಿತ್ರಾ.... ನಿನ್ನಮಗನಾಗಿ ಬರುವೆ"
ಎಂದು.

ಒಬ್ಬ ತಂದೆಯಾಗಬಹುದು... ಪತಿಯಾಗಬಹುದು.... ಇಲ್ಲವೆ ಪುತ್ರ
ನಾಗಬಹುದು ಆದರೆ ಇವರು ಎಲ್ಲವೂ ಆಗಿದ್ದರು... ಅಲ್ಲದೆ ತಾಯಿ ಕೂಡ.

....ನನ್ನ.... ಹೃದಯದ ವೇದನೆಯನ್ನು ಯಾರೆದುರು ತೋಡಿಕೊ
ಳ್ಳಲಿ.... ? ... ಗೋಕುಲವೆಲ್ಲ ಹೇಳಹೆಸರಿಲ್ಲದಂತೆ ಕೊಚ್ಚಿಕೊಂಡು ಹೋಗು
ವಾಗ ಆ ಕೃಷ್ಣ ಬಂದು ಪರ್ವತವನ್ನೇ ಲೀಲೆಯಾಗಿ ಎತ್ತಿ ಹಿಡಿದು ಸರ್ವ
ರನ್ನೂ, ಸರ್ವಸ್ವವನ್ನೂ.... ಕಾಯ್ದನಂತೆ ! ...ಇದಕ್ಕೆ ಪುರಾಣವೆನ್ನಬ
ಹುದು... ಎಂದೋ ಆದ ಕತೆ ಎಂದು ಹೇಳಬಹುದು... ಆದರೆ ನಾನು
ಹೇಳಹೆಸರಿಲ್ಲದಂತೆ ಕೊಚ್ಚಿಕೊಂಡು ಹೋಗುವಾಗ ಕುಲಕರ್ಣಿಯವರು
ಧಾವಿಸಿ ತಮ್ಮ ಕೃಪಾಛತ್ರವನ್ನು ಲೀಲಾಜಾಲವಾಗಿ ಎತ್ತಿ ಹಿಡಿದರು....
ನನ್ನನ್ನುಳಿಸಿದರು.... ನನ್ನನ್ನು ಕಾಯ್ದರು.... ಕೊನೆಗೆ...

ನನ್ನನ್ನು ಕೈಬಿಟ್ಟು ಹೋದರು.... ಏಕೆ ನನ್ನ ಕತ್ತು ಹಿಚುಕಿ ಹಾಕಿ
ಹೋಗಲಿಲ್ಲ....?

ನಾನು ಪಾಪಿ ಎಂದೆ...? ....ನನ್ನ ಪಾಪವೇ ಅವರನ್ನು ಸಂಕಟಕ್ಕೀಡು ಮಾಡಿತೆ...? ಅವರ ಪುಣ್ಯವೇ ಅವರ ಆಯುಷ್ಯವನ್ನು ನನ್ನಲ್ಲಿ ಸುರಿದಿತೇ...?

'ಅಯ್ಯೋ... ಯಾರಿಗೆ ಬೇಕಿದೆ ಈ ಹಾಳು ಜೀವನ....? ಯಾರಿಗೆ ಇದರಿಂದ ಸುಖವಿದೆ....? ನನಗೂ ಸುಖವಿಲ್ಲ....ನನ್ನನ್ನು ಹೊಂದಿದವರಿಗೂ ಸುಖವಿಲ್ಲ....... ನಾನು... ಪಾಪಿ.... ಮಹಾ ಪಾಪಿ........ನನ್ನ ನೆರಳಿನಿಂದ ಹಸಿರು ಗಿಡ ಸುಟ್ಟು ಹೋಗುವದು....ಹೊಟ್ಟೆಯಲ್ಲಿ ಬಂದ ಕೂಸು ಕಣ್ಣು ತೆರೆಯುವ ಮೊದಲೇ ಕಣ್ಣು ಮುಚ್ಚಿತು....ಆಶ್ರಯಕೊಟ್ಟ ದೇವರು ದೂರಾದರೂ. ನೆರವು ಕೊಡುತ್ತಿರುವ ಮಹಾನುಭಾವರಿಗೂ ನನ್ನಿಂದ ಅವಮಾನ....

ಯಾರಿಗಾಗಿ ಬಾಳುವದು......? ಯಾರನ್ನು ನಂಬಿ ಕೊಂಡು ಬಾಳುವದು...?

ನನ್ನ ದೇವರು ನನ್ನಿಂದ ದೂರಾದ ದಿನವೇ ನಾನು ಉಳಿಯ ಬಾರದಿತ್ತು....ಆದರೆ....ಆದರೆ ಅವರು....

" ಸುಮಿತ್ರಾ....ನೀನು ಬಾಳಬೇಕು....ಅದು ನನ್ನ ಆಶೆ....ನಾನು ನಿನ್ನ ಮಗನಾಗಿ ಬರುವೆ....ಅದು ನನ್ನ ಇಚ್ಛೆ...." ಎಂದರು ...

ತುಂಬಿದ ಕಣ್ಣೀರಿನ ಕಟ್ಟೊಡೆದು ಅವರ ಪವಿತ್ರ ಪಾದಪದ್ಮವನ್ನು ತೊಳೆಯಲು ಧಾವಿಸಿದಾಗ ಮೃತ್ಯುವಿನೊಡನೆ ಸರಸನಾಡುವ ಅವರು ಹಸನ್ಮುಖದಿಂದ—

"ಹುಚ್ಚಿ....ಪ್ರವಾಸಕ್ಕೆ ಹೊರಟವರನ್ನು ಬೀಳ್ಕೊಡುವ ಪದ್ಧತಿಯೆ ಇದು....?....ನನ್ನ ಪ್ರವಾಸದಲ್ಲೆಲ್ಲ....ನಿನ್ನ ಹಸನ್ಮುಖ ನನ್ನ ಕಣ್ಣೆದುರು ಇರಬೇಕು. ಅಂದರೆ ನನಗೆ ಆನಂದ...ನಿನ್ನ ಕಣ್ಣೀರು ನನ್ನಲ್ಲಿ ಸಂತಸ ಮಾಡಿಸಲಾರದು...ನಾನು....ಆನಂದದಿಂದ ಇರಬೇಕೆಂದು ನಿನ್ನ ಇಚ್ಛೆ ಇಲ್ಲವೆ....?" ಎಂದು ಕೇಳುವಾಗ....ಹೇಗೆ ಆಕ್ರೋಶಿಸದೇ ಇರಲಿ....? ಹೇಗೆ ಕಣ್ಣೀರು ತಡೆಯಲಿ ?

ದೇವಾ.... ದೇವಾ.... ಏಕೆ....ಇಂತಹ ಮಹಾ ಸಂಕಟವನ್ನು ವಿಪತ್ತನ್ನು ನನ್ನ ಮೇಲೆ ತಂದಿರುವೆ...? ಆದರೆ ನನ್ನ ಮಾತನ್ನು ಕೇಳಲು ದೇವನೆಲ್ಲಿಹನು...? ದೇವನಿಹನೆ....?

ದೇವನಿರುವನೆ...? ಇದ್ದರೆ... ಎಲ್ಲಿ....? ಎಲ್ಲಿ....?

ಇದ್ದ ನನ್ನ ದೇವ.... ಇಲ್ಲಿ ನೆಲಿಸಿದ್ದ. ನನ್ನನ್ನು ತ್ಯಜಿಸಿ ಹೋಗಲು ಸಿದ್ಧನಾಗಿರುವಾಗ ಅದನ್ನು ತಡೆಯುವ ಶಕ್ತಿ ಈ ದುರ್ಭಾಗ್ಯಗಳಲ್ಲಿರಲಿಲ್ಲ... ಸಾವಿತ್ರಿಯ ಶಕ್ತಿ ನನ್ನಲ್ಲಿದ್ದರೆ....? ಇದ್ದರೆ....? ಯಮ ಎಂದೆಂದಿಗೂ ಪೃಥ್ವಿಯನ್ನು ಪ್ರವೇಶಿಸದಂತೆ ಮಾಡುತ್ತಿದ್ದೆ.... ಆದರೆ.... ?

ನನ್ನಿಂದ ಯಾವುದೂ ಸಾಧ್ಯವಿರಲಿಲ್ಲ....ಯಾವದೂ ಸಾಧ್ಯವಿರಲಿಲ್ಲ....

ನನ್ನಿಂದ ಸಾಧ್ಯವಿದ್ದದು ಒಂದೆ.... ಒಂದೆ...ಒಂದು ನನ್ನ ದೇವ ನನ್ನಿಂದ ದೂರಾಗುವದನ್ನು........ಎಂದೆಂದಿಗೂ ಬಾರದಂತೆ.....ಇನ್ನೆಂದಿಗೂ ನನ್ನೊಂದಿಗೆ ಕೂಡದಂತೆ...ಮತ್ತೆಂದೂ ನನ್ನೊಂದಿಗೆ ಮಾತನಾಡದಂತೆ... ನನ್ನಿಂದ ದೂರಾಗುವದನ್ನು... ಮರೆಯಾಗುವದನ್ನು ನೋಡುವದು...ನಿಃಸಹಾಯಳಾಗಿ ನೋಡುತ್ತ ಕುಳಿತುಕೊಳ್ಳುವದು....

"ಎಲ್ಲರೂ ಒಂದಿಲ್ಲೊಂದು ದಿನ ಹೋಗುವವರು" ಎಂಬುದು ಸಮಾಧಾನವಲ್ಲ ವೈರಾಗ್ಯವಲ್ಲ ದಹಿಸುವ ಜ್ವಾಲೆಯಲ್ಲಿ ಎರಚುವ ಎಣ್ಣೆ...ಎಣ್ಣೆಯಿಂದ ಜ್ವಾಲೆ ಶಾಂತವಾಗುವದೆ....?

ನನ್ನ ಅಡೆ ತಡೆ....ಶಾಪ....ಆಕ್ರೋಶ....ಕಣ್ಣೀರು....ಯಾವವು ಅವರನ್ನು ತಡೆಯಲು ಶಕ್ತವಿರಲಿಲ್ಲ.

ಎಲ್ಲಿ ಅಡೆ ತಡೆಯನ್ನು ಕಿತ್ತೆಸೆದು, ಪಾಪಿಗಳ ಲೋಕದಲ್ಲಿ ಬಾಳುವದು ಅವಮಾನ....ಅಸಹ್ಯ...ಎಂದು. ಎಂದು ಆತ್ಮಜ್ಯೋತಿ .. ಜಗದಿಂದ ದೂರವಾಗಿ ಶಾಂತಲೋಕದಲ್ಲಿ ಪರಮಾತ್ಮನೊಂದಿಗೆ ಐಕ್ಯವಾಗಲು ತನ್ನ ಪ್ರಯಾಣ ಬೆಳಸಿತು......ದೇವದೂತರೊಂದಿಗೆ.....ದೇವನ ವಿಮಾನಾರೂಢವಾಗಿ........

ಪರಮಾತ್ಮನಲ್ಲಿ....ಆತ್ಮ ಐಕ್ಯನಾದ ..

ನಾನು.... ?

ಈ ಪಾಪಿಗಳ ಲೋಕದಲ್ಲಿ ಪಾಪಿಗಳೊಡನೆ ಕೂಡಿ ಪಾಪ ಅನ್ನದಿಂದ ದೇಹ ಬೆಳೆಸಿಕೊಂಡು ಪಾಪದ ಬಟ್ಟೆಯಿಂದ ದೇಹ ಮುಚ್ಚಿಕೊಂಡು ಪಾಪವನ್ನೇ ಉಸಿರಾಡಿಸುತ್ತ ಪಾಪದ ವಿಷಜಂತುವಾಗಿ ಬಾಳಲು.... ಇರಬೇಕಾಯಿತು.

ಕಾಮಿನಿ....

"ಸುಮಿತ್ರಾ.... ನಮ್ಮ ದುರ್ಭಾಗ್ಯ.... ಅವರು ನಮ್ಮೊಂದಿಗೆ ಇರಲಾ ರರು. ಎಂದೇ ಅವರನ್ನು ಬಂಧಿಸಿ ಹಾಕಲು ನಿನ್ನನ್ನು ಅವರ ಕೊರಳಿಗೆ ಕಟ್ಟಲು ವಿಶ್ವಪ್ರಯತ್ನ ಮಾಡಿದೆ.... ಯಶಸ್ವಿಯೂ ಆಗಿದ್ದೆ....ಆದರೆ ಈ ರೀತಿ ಅಕಸ್ಮಾತ್ತಾಗಿ ನಮ್ಮ ಆಶೆಗೆ ಅಂತವಾಗುವದೆಂದು ಯಾರು ಎಣಿಸಿದ್ದರು....? ಮನುಷ್ಯನ ಪ್ರಯತ್ನಕ್ಕಿಂತ ದೇವನ ಇಚ್ಛೆ ಹಿರಿದು..." ಎಂದು ಉಸಿ ರ್ಗರೆಯುವಳು....

"....ಸುಮಿತ್ರಾ.... ಅವರ ಹತ್ತಿರ ಇರುವಾಗ ಜಗತ್ತೆ ಮರೆತುಹೋಗು ತ್ತದೆ... ಮಹಾತ್ಮರ ಹತ್ತಿರ ಪರಮಾತ್ಮ ಇರುತ್ತಾನೆ ಎನ್ನುವದರ ಸತ್ಯತೆ ಯನ್ನು ಕುಲಕರ್ಣಿಯವರ ಹತ್ತಿರ ಕುಳಿತಾಗ ಕಂಡುಕೊಳ್ಳಬಹುದಿತ್ತು.... ಎಂತಹ ಪ್ರಸನ್ನತೆ.... ಎಂತಹ ಶಾಂತತೆ.... ನನ್ನ ಪೂರ್ವ ಜನ್ಮದ ಪುಣ್ಯ ಅಂತಹರ ಸನ್ನಿಧಿ.... ಕ್ಷಣಕಾಲವಾದರೂ ಲಭಿಸಿತು.... ಅವರ ಕ್ಷಣದ ಸಹ ವಾಸ.... ನಮ್ಮ ಪಾಪವನ್ನು ತೊಳೆಯುವದಕ್ಕೆ ಸಾಕು...

"ನನಗೂ ಎಲ್ಲವೂ ಬೇಡ ಎನ್ನಿಸುತ್ತಿದೆ. ಹೀಗೆಯೇ ಅವರೆದುರು ಒಂದು ದಿನ ಹೇಳಿದಾಗ ಅವರು—"

"ಬೇಡ ಎನ್ನಿಸುವದೆಂದರೇನೇ 'ಬೇಕು' ಎನ್ನಿಸಿದಂತೆ.... ಬೇಡವಾ ದುದು ಏನು....? ನಮಗೆ ಬೇಕು ಎನ್ನಿಸಿದ್ದೇ ಅಲ್ಲವೇ ..? ...'ಬೇಕು' ಎನ್ನುವದು ಇಲ್ಲದಿದ್ದರೆ 'ಬೇಡ' ಎನ್ನುವದಕ್ಕೆ ಆಸ್ಪದವೆಲ್ಲಿ.... ನಾವು 'ಬೇಕು' ಎಂದಾಗ ಬೇಡಿದ್ದು ದೊರೆಯಿಸಿಕೊಳ್ಳುವ ಶಕ್ತಿ ನಮ್ಮಲ್ಲಿದ್ದರೇನೇ 'ಬೇಡ' ಎನ್ನುವದಕ್ಕೆ ನಮಗೆ ಅಧಿಕಾರ. ಅದಿಲ್ಲದಿದ್ದರೆ ನಮಗೆ 'ಬೇಡವಾಗಿದೆ' ಎಂದು ಹೇಳಲು ಅಧಿಕಾರವಿಲ್ಲ." ಎಂದು ಹೇಳಿದ್ದರು....

"ಸುಮಿತ್ರಾ... ಅವರು ಎಲ್ಲ ದೃಷ್ಟಿಯಿಂದಲೂ ನಮ್ಮ ಕೈಕಟ್ಟಿ ಹೋಗಿ ದ್ದಾರೆ.... ನಮ್ಮ ಕರ್ತವ್ಯ ಅವರು ತೋರಿಸಿದ ಮಾರ್ಗದಿಂದ ಸಾಗಿ ನಮ್ಮ ಉದ್ಧಾರವನ್ನು ನಾವು ಮಾಡಿಕೊಳ್ಳುವದು. ಅಲ್ಲದೆ ಅವರ ಆಜ್ಞೆಯನ್ನು ಲ್ಲಂಘಿಸಿ ಪಾಪಿಗಳಾಗುವದಲ್ಲ...." ಎಂದೂ ಕಾಮಿನಿ ಹೇಳುತ್ತಾಳೆ

ಆದರೆ ನನಗೆ ಯಾವುದರಿಂದಲೂ ಸಮಾಧಾನವಿಲ್ಲ....ಜಲಕ್ಕೇ ಜ್ವಾಲೆ

ತಗಲಿ ಆಗಸದೆತ್ತರದ ವರೆಗೆ ಉರಿನಾಲಿಗೆ ಚಾಚಿದಾಗ ಮೀನಕ್ಕೆ ಸಮಾ ಧಾನವೆಲ್ಲಿ....? ಶಾಂತಿ ಎಲ್ಲಿ....? ಆನಂದವೆಲ್ಲಿ....? ....ಏನಾಯಿತು ಏನಾ ಯಿತು....? ಏಕೆ ಹೀಗೆಲ್ಲ ... ಅನಾಹುತ....?

ಯಾವ ಪ್ರಶ್ನೆಗೂ ಸಮರ್ಪಕ ಉತ್ತರ ಕೊಟ್ಟು ಸಾಂತ್ವನಗೊಳಿಸುವ ಕಲ್ಪವೃಕ್ಷವೇ ಕಣ್ಣೆದುರಿನಿಂದ ಮಾಯವಾದಾಗ.... ಎಂತಹ ಸಮಾಧಾನ ಎಲ್ಲಿಯ ಸಮಾಧಾನ....?

ಆದರೂ ಮನುಷ್ಯನ ಬಾಳು ತುಂಬ ವಿಚಿತ್ರ .. ಅಂತಹ ದಿನವು ಮರೆ ಯದಿದ್ದರೂ ದೂರ ದೂರವಾಗುತ್ತ ನಡೆಯಿತು. ಇಂದಿನ ಸಂಗತಿ ನಾಳಿಗೆ ನಿನ್ನೆಯದಾಗುವದು... ಹಳೆಯದಾಗುವದು...

ಕುಲಕರ್ಣಿಯವರನ್ನು ಕಳೆದುಕೊಂಡು ನಾನು ಅನಾಥಳಾಗಿ ಇಂದನ್ನು ನಿನ್ನೆಗೆ ನೂಕಿದಾಗ ಸತ್ಯ ಸಂಗತಿ ಹಿಂದೆ ಸರಿದು ನಿನ್ನೆ.... ಅದಕ್ಕೂ ಹಿಂದೆ ಸರಿಯುತ್ತಲಿತ್ತು. ಅದು ಮುಂದೆ ಸರಿದಷ್ಟೂ ನಾನು _ಮುಂದೆ- ಮುಂದೆ ಮುಂದುವರಿಯುತ್ತಲಿದ್ದೆ. ಅಂತರ ಕ್ಷಣ ಕ್ಷಣಕ್ಕೂ ಬೆಳೆಯು ತ್ತಲಿತ್ತು....

ಕೊನೆಗೊಂದು ದಿನ—

ಬರುವ ದಿನ ಭೂತವಾಗಿ ಬಂದಿತು......ನನ್ನನ್ನು ನುಂಗುವದಕ್ಕೆ ಬಂದಿತು. ಧಾವಿಸುತ್ತ ನನ್ನನು ಮುತ್ತುವದಕ್ಕೆ ಬಂದಿತು....ಮುತ್ತಿ ನನ್ನನ್ನು ಧ್ವಂಸ ಮಾಡಲಿಕ್ಕೆ ಬಂದಿತು.... ನನ್ನನ್ನು ಭಸ್ಮ ಮಾಡಲಿಕ್ಕೆ ಬಂದಿತು....

ನಾನು...?

ಅದರ ದವಡೆಯಲ್ಲಿ ಸಿಕ್ಕು ನುಚ್ಚು ನೂರಾದೆ ನಾನು......ಬದುಕುವ ಆಶೆಯೆಲ್ಲ ಧೂಳಿಗೂಡಿತು....ನಾನು ಕಂಡವರ ಕಾಲೊಳಗಿನ ಕಾಲುಕಸ ವಾದೆ....

ಇಲ್ಲಿ...ನಾನಷ್ಟೇ ಕಾಲುಕಸವಾಗಲಿಲ್ಲ....ಕಸವಾದ ನನ್ನನ್ನು ಎತ್ತಿ ಮೇಲಕ್ಕೆತ್ತಿಕೊಂಡವರನ್ನೂ ಕಾಲುಕಸ ಮಾಡಿದೆ....

ಅಯ್ಯೋ... ಅದು ದುರ್ದಿನ... ಆ ದುರ್ದಿನ ನನ್ನಿಂದಾಗಿ ಮಾಧವ ರಾಯರ ಮುಖಕ್ಕೆ ಮಣ್ಣು. ಮಾಧವರಾಯರ ಮಾನದ ಮಡಿಕೆಯನ್ನು ಬೀದಿಗೆ ಬೀಸಾಕಿ ಚೂರು ಮಾಡಲಾಯಿತು....

ಅದೂ ನನ್ನಿಂದಾಗಿ...

ಅವರ ಪತ್ನಿ ಎಂದು ತಿಳಿದು ಕೊಂಡಿದ್ದ ನನ್ನಿಂದಾಗಿ....

ಅದೂ ಅವರ ಪತ್ನಿಯಿಂದ....!

ಅಗ್ನಿಯ ಸಾಕ್ಷಿಯಾಗಿ ದೇವ ಬ್ರಾಹ್ಮಣರೆದುರು ತನ್ನ ಪತಿ ಎಂದು ಒಪ್ಪಿಕೊಂಡ ಪತ್ನಿಯಿಂದ....!

ತನ್ನ ಅವಮಾನ ತನ್ನ ಪತ್ನಿಯಿಂದ ಅದೂ ತನ್ನ ಪತ್ನಿ ಎಂದುಕೊಂಡ ವಳ ಕಾರಣಕ್ಕಾಗಿ...! ತಾನು ಸುಖಿಯಾಗಬೇಕೆಂದು ಹುಡುಕಿ ಮನೆಗೆ ತಂದ ಹೆಣ್ಣಿನಿಂದ ತನ್ನ ಸುಖದ ಕನಸು ಉದ್ವಸ್ತವಾಗುವದು ಆಶ್ಚರ್ಯ ವಲ್ಲವೆ....? ಆದರೂ ಆಯಿತು.... ಅವರ, ನಾನು ಪತಿಯೆಂದು ಕೊಂಡು ಸಂಸಾರ ಮಾಡುವವರ, ಮಾಧವರಾಯರ ಕನಸು ಉಧ್ವಸ್ಥವಾಯಿತು.... ನನ್ನ ಜೊತೆಗೆ ಸುಖವಾಗಿ ಜೀವನ ಕಳೆಯ ಬೇಕೆನ್ನುವ ಅವರ ಕನಸನ್ನು ಕನಸಿನಲ್ಲಿ ಕೂಡ ಅನುಭವಿಸಗೊಡಲಿಲ್ಲ....

ಯಾರು....? ಅವರ ಪತ್ನಿಯೆ...?

ಅಲ್ಲ ಅವರ ಪತ್ನಿ ರೂಪದಲ್ಲಿ ಕ್ರೂರ ವಿಧಿ ಅವರ ಸುಖದ ಕಣ್ಣಲ್ಲಿ ಮಣ್ಣೆರಚಿದ... ನಾನು...! ನಾನು....? ....ನಾನಾರು....?

ಯಾರೂ ಅಲ್ಲ. ನಾನು, ಸುಮಿತ್ರೆ...ನಿರ್ಮಲೆ ಎಂದು ಕೊಂಡ ದೇಹವು ಯಾರೂ ಅಲ್ಲ. ಏನೂ ಅಲ್ಲ ಅದು ಕಾಲು ಕಸ... ಇಲ್ಲ... ಅದಕ್ಕಿಂತ ಕೊನೆ....

ಇನ್ನೂ ಬಾಳಬೇಕೆ....!

"ಕ್ಷುದ್ರರಿಗಾಗಿ ಬಾಳುವ ಜೀವವನ್ನು ಹಾಳಮಾಡಬೇಕೆ....?" ಎಂದು ಕಾಮಿನಿ ಕೇಳುವಳು.

ಕ್ಷುದ್ರರಿಗಾಗಿ ಬಾಳುವ ಜೀವವನ್ನು ಹಾಳು ಮಾಡಬಾರದು...ನಿಜ. ಆದರೆ ಕ್ಷುದ್ರರಿಂದ ಬಾಳುವೆ ಬೇಡವಾದರೂ ಮಣ್ಣುಪಾಲಾಗುವದು. ಅದನ್ನು ತಡೆಯುವದು ಹೇಗೆ....? ತಡೆಯುವವರು ಯಾರು....?

"ಆದಕ್ಕೆಲ್ಲ ಉದಾಸೀನತೆಯೇ ಮದ್ದು" ಎಂದು ಹೇಳುವದಾದರೂ ಉದಾಸೀನತೆಯನ್ನು ತಂದುಕೊಳ್ಳುವದು ಸುಲಭವೇ...? ಬಹಿರಂಗವಾಗಿ

ಉದಾಸೀನತೆಯ ನಟನೆಯನ್ನು ಮಾಡಬಹುದು ಆದರೆ ಅಂತರಂಗದಲ್ಲಿ, ಹೃದಯದಲ್ಲಿ ಕೊರೆಯುವ ಕ್ರೂರ ಕತ್ತಿಯನ್ನು ಉದಾಸೀನ ಮಾಡಬಹುದೆ? ಉದಾಸೀನ ಮಾಡಿದರೂ ಅದು ತನ್ನ ಕಾರ್ಯವನ್ನು ಮುಂದುವರಿಸು ತ್ತಲೇ ಇರುತ್ತದೆ...ಆದಕ್ಕೆ ಉಪಾಯವೇನು....? ಅದರ ನಿವಾರಣೆ ಹೇಗೆ...?

ಅದರ ನಿವಾರಣೆಗೆ ಮರಣವೊಂದೇ ಉಪಾಯ. ಮರಣದಿಂದ ಏನ್ನನೂ ಸಾಧಿಸುವಂತಿಲ್ಲ; ನಿಜ. ಆದರೆ ಏನನ್ನೂ ಸಾಧಿಸಲಾಗುವದಿಲ್ಲವೆಂದಾಗ ಬದುಕುವದರಲ್ಲಿಯಾದರೂ ಯಾವ ಅರ್ಥವಿದೆ...? ಯಾವ ಉದ್ದೇಶಕ್ಕಾಗಿ ಬಾಳಬೇಕು....? ಯಾವ ಆಶೆಯಿಂದ ಸಾವಿಗೆ ಸರಿಯಾದ ಬಾಳುವೆಯಲ್ಲಿ ನರಳುತ್ತ, ಆಘಾತ ಸಹಿಸುತ್ತ ಬದಕುವ ನಟನೆ ಮಾಡಬೇಕು....?

ಒಂದಾದರೂ ಆಶೆ ಉಳಿದಿದೆಯೇ...?

ಯಾವ ಆಶೆಯನ್ನೂ ಮಾಡದ ನನ್ನ ಮನದಲ್ಲಿ ಅನಂತ ಆಶೆಗಳು ಮೂಡಿ ಆಟವಾಡಿ, ಚಿನ್ನಾಟವಾಡಿ, ನಲಿದಾಡಿ ಕೊನೆಗೆ ಎಲ್ಲವೂ ಮಾಯೆ ಎನ್ನುವ ರೀತಿಯಲ್ಲಿ ಮೃಗಜಲದಂತೆ ಮಾಯವಾಗಿ ಹೋದವು... ಮುಳುಗಿ ಹೋದವು....

ಯಾವುದು ಬೇಡವೆಂದು ಸಾಯಲು ಹೊರಟ ನನ್ನನ್ನು ಪ್ರೇಮದ ಮಮತೆಯ ಸೋಗಿನಿಂದ ವಿಧಿ ಮುಂದೆ ಕರೆದು ರಮಿಸಿದಂತೆ ಮುಖಿದೆದುರು ನಟಿಸಿ ಹಿಂದಿನಿಂದ ಆಳವಾದ ಕಂದರದಲ್ಲಿ ಬೀಳುವಂತೆ ದಬ್ಬಿ ಹಾಕಲಿಲ್ಲವೆ ?

ಯಾರನ್ನು ಹಳಿಯುವದು....? ಯಾರನ್ನು ದೂಷಿಸುವದು....? ಎಲ್ಲರೂ ನನಗೆ ಒಳ್ಳೆಯದಾಗಲಿ ಎಂದು ಹವಣಿಸಿದರು ಪ್ರಯತ್ನ ಮಾಡಿದರು...

ನಾನು ಸುಖಿಯಾಗಬೇಕೆಂದು ತಂದೆ ತಾಯಿಗಳು ಪ್ರಯತ್ನ ಮಾಡಿ ದರು.... ನಾನು ಸಾಯಬಾರದೆಂದು ಕುಲಕರ್ಣಿಯವರು ಕರೆತಂದರು, ನಾನು ಹಾಳಾಗಬಾರದೆಂದು ಕಾಮಿನಿ ದಣಿದಳು.... ನಾನೂ ಆದರ್ಶವಾಗಿ ಬಾಳಬೇಕೆಂದು ಮಾಧವರಾಯರು ದುಡಿದರು....

ಆದರೆ ಎಲ್ಲರಿಗೂ ದೊರೆತ ಫಲ....? ಎಲ್ಲರಿಗೂ.... ಅವಮಾನ.... ಎಲ್ಲರಿಗೂ ಅನ್ಯಾಯ.... ನನ್ನಿಂದ.... ನನ್ನಿಂದ....

ಯಾರ ತಪ್ಪು ಇದು....? ಯಾರನ್ನು ದೂಷಿಸುವದು ಇದಕ್ಕಾಗಿ....?

ಬಾಳಿಸಲು ಪ್ರಯತ್ನಿಸಿದ ಮಾಧವರಾಯರನ್ನೆ...? ಹಾಳಾಗದಂತೆ ಕಾಯ್ದ ಕಾಮಿನಿಯನ್ನೆ....? ಸಾಯದಂತೆ ಕಾಪಾಡಿದ ಕುಲಕರ್ಣಿಯವರನ್ನೆ .... ಜನ್ಮ ಕೊಟ್ಟ ತಂದೆತಾಯಗಳನ್ನೆ....? ಅಥವಾ.... ಸಮಸ್ತ ಕಾರ್ಯ ಗಳಿಗೂ ಕಾರಣನಾದ.... ಪರಮಾತ್ಮನನ್ನೇ....?

ಎಲ್ಲರೂ ದೋಷಿಗಳು ... ಆರಂಭದಿಂದ ಕೊನೆಯವರೆಗೆ ಎಲ್ಲರೂ ದೋಷಿಗಳು.... ಎಲ್ಲರೂ ದೋಷಿಗಳು.... ಅವರೆಲ್ಲರ ದೋಷದಿಂದಾಗಿ ನಾನು ಈ ಎಲ್ಲ ಕಷ್ಟಗಳಿಗೆ ಗುರಿಯಾದೆ ...

ಪರಮಾತ್ಮ ನನಗೆ ಜನ್ಮ ಕೊಟ್ಟಿರದಿದ್ದರೆ....? ತಂದೆ ತಾಯಿಗಳು ನನ್ನನ್ನು ಹೆತ್ತಿರದಿದ್ದರೆ....? ಸಾಯಲು ಹೊರಟ ನನ್ನನ್ನು ಕುಲಕರ್ಣಿ ಯವರು ಕರೆತಂದಿರದಿದ್ದರೆ....? ಕಾಮಿನಿ ನನ್ನನ್ನು ಕಾಯ್ದಿರದಿದ್ದರೆ.... ....ಮಾಧವರಾಯರು ನನಗೆ ನೆರವು ನೀಡಿರದಿದ್ದರೆ ..? ....ಮಾಧವ ರಾಯರು ನೆರವು ನೀಡಿರದಿದ್ದರೆ...?

ಇಲ್ಲ... ಯಾವ ಅನಾಹುತವೂ ಆಗುತ್ತಿರಲಿಲ್ಲ....

ಮಾಧವರಾಯರ ಪತ್ನಿಯಾಗಿ, ಆದರ್ಶ ಪತ್ನಿಯಾಗಿ ಸಾವಿತ್ರಿಯನ್ನು ಮೀರಿಸು ವಂತೆ ಸಂಸಾರ ಸಾಗಿಸಬೇಕೆನ್ನುವ ಆಶೆ ನನ್ನಲ್ಲಿ ಉತ್ಪನ್ನವಾಗುತ್ತಿರಲಿಲ್ಲ.

...."ಹಾಳಾಗುವ ನನ್ನನ್ನು ನೀನು ಉಳಿಸಿದೆ" ಎಂದು ಹೇಳುವ ಮಾತು ನನ್ನಲ್ಲಿ ಉತ್ಸಾಹ ತುಂಬಿತು. ಪ್ರೋತ್ಸಾಹ ಕೊಟ್ಟಿತು. 'ಆದರ್ಶತೆ ಸಾಧಿಸಲು ಸರ್ವರಿಗೂ ಸಾಧ್ಯವಿದೆ' ಎನ್ನುವ ಮಾತನ್ನು ಮನದಟ್ಟು ಮಾಡಿಕೊಟ್ಟಿತು...ಅಂತೆಯೇ ಸಂಸಾರಿಯಾಗಲು ಹೊರಟೆ........ಪತಿವ್ರತೆ ಯಾಗಿ ಬಾಳಲು ಹೊರಟೆ...

ಆದರೆ...ಪತಿವ್ರತೆಯಾಗ ಬಯಸುವ ನನ್ನನ್ನು ...ಆ ರಾಕ್ಷಸಿ.... ... 'ಬೀದಿಯ ಬಸವೆ' ಎಂದು ಜರಿದಳು....

'ಬೀದಿಯ ಬಸವೆ'....ಯಾರು ...?

ಮೋಸದಿಂದ ಹಾಳಾದರೂ ಮತ್ತೆ ಮಾಡಿದ ತಪ್ಪನ್ನು ತಿದ್ದಿಕೊಂಡು ಸರಿಯಾದ ಮಾರ್ಗಕ್ಕೆ ಹತ್ತಲು ಪ್ರಾಮಾಣಿಕತೆಯಿಂದ ಅಖಂಡವಾಗಿ

ಪ್ರಯತ್ನಪಡುವ ನಾನು ಬೀದಿಯ ಬಸವಿಯೆ ? ಕುಲಕರ್ಣಿಯವರ ಕಿವಿಯ ಮೇಲೆ ಇಂತಹ ಕೀಳು ವಾಕ್ಯ ಬಿದ್ದಿದ್ದರೆ....? 'ಅಯ್ಯೋ' ಎಂದು ಕಿವಿಯ ಮೇಲೆ ಕೈಯಿಟ್ಟುಕೊಳ್ಳುತ್ತಿದ್ದರು.

ಆದರೆ ಅವಳು ಮಾತ್ರ ಹೇಳಿದಳು "ಬೀದಿಯ ಬಸವಿ" ಎಂದು....

"ಕಂಡ ಗಂಡಸರನ್ನೆಲ್ಲ.... ಮೋಸಗೊಳಿಸಿ.... ಅವರ ಸಂಸಾರವನ್ನು ಹಾಳು ಮಾಡುವ ರಾಕ್ಷಸಿ ನಾನು " ಅಂತೆ....

ಯಾರ ಸಂಸಾರವನ್ನು ನಾನು ಹಾಳು ಮಾಡಿರುವೆ....? ಯಾವ ಗಂಡಸನ್ನು ನಾನು ಮೋಸಗೊಳಿಸಿರುವೆ...? ....ಗಂಡಸೇ ನನ್ನನ್ನು ಮೋಸಗೊಳಿಸಿ ಮಣ್ಣು ಪಾಲು ಮಾಡಿದ ಪಾಪದ ಪ್ರಾಯಶ್ಚಿತ್ತವನ್ನು ಇಂದಿನ ವರೆಗೂ ನಾನು ಅನುಭವಿಸುತ್ತಿರುವೆ....

ಆದರೂ ಅವಳು ಹೇಳಿದಳು... ರಾಕ್ಷಸಿ... ಅವಳ ಬಾಯಿಯನ್ನು ಹಿಡಿಯಲು ಯಾರಿಂದ ಸಾಧ್ಯ....? ತಡೆಯದೆ ಕ್ರೂರ ಕತ್ತರಿಯಂತೆ ಕೇಳಿದವರ ಕರುಳನ್ನು ಕತ್ತರಿಸುವಂತಹ ಅವಳ ಮಾತನ್ನು ಯಾರಿಂದ ತಡೆಯಲು ಸಾಧ್ಯ...? ಯಾರಿಂದ ಕೇಳಲು ಸಾಧ್ಯ....? ಏನೇನು ಹೇಳಿದಳು....? ಎಷ್ಟೆಷ್ಟು ಹೇಳಿದಳು....? ನನಗೆ ... ಮಾಧವರಾಯರಿಗೆ... ಕಾಮಿನಿಗೆ.... ಅಯ್ಯೋ .. ನನ್ನಿಂದಾಗಿ.... ಎಲ್ಲರಿಗೂ

ಅವೆಲ್ಲವನ್ನೂ ಹೇಗೆ ಕೇಳಲಿ ?

ಕಾಮಿನಿ ಹೇಳುತ್ತಾಳೆ... " ಸುಮಿತ್ರಾ.... ಇನ್ನೊಬ್ಬರ ಬಾಯಿಯನ್ನು ಬಂದು ಮಾಡುವ ಶಕ್ತಿ ನಮ್ಮಲ್ಲಿಲ್ಲದಾಗ....ಉಳಿದ ಮಾರ್ಗ ಒಂದೇ ಒಂದು. ಅದನ್ನು ತಡೆದುಕೊಳ್ಳುವದು.... ತಡೆದುಕೊಳ್ಳಲೇಬೇಕು... ನನಗೂ ಕೋಪ ಬರುತ್ತದೆ. ಗಂಟಲು ಒಡೆದು ನೆತ್ತರ ಕುಡಿಯಬೇಕೆನ್ನಿಸುತ್ತದೆ.... ಅವಳ ಚಾರಿತ್ರ್ಯವನ್ನು ಡಂಗುರ ಸಾರಬೇಕೆನ್ನಿಸುತ್ತದೆ.... ಆದರೆ ಅದರಿಂದ ಲಾಭವಾರಿಗೆ....? ಅವಳು ನೀತಿಯ ಮೊದಲನೆಯ ಪಾಠವನ್ನು ಅರಿಯದ ಹುಂಬ ಹೆಂಗಸು.... ನೀತಿಯನ್ನು ಅರಿತವರು... ನೀತಿಯಿಂದ ನಡೆಯುವವರು ಈ ರೀತಿ ಆಚರಿಸುತ್ತಿದ್ದರೆ....? ಕಂಡ ಗಂಡಸರೆಲ್ಲರ ಜೊತೆಗೆ 'ಗಂಡ' ಎಂದು ಸಂಸಾರ ಮಾಡುವ ಅವಳಲ್ಲಿ ನೀತಿಗೆ ಸ್ಥಾನವೆಲ್ಲಿ ?

....ಅಂಶಹೆ ವಿಚಾರದ ಅಲ್ಪ ಅಂಶವಾದರೂ ಇದ್ದವಳೂ ತನ್ನ ಪತಿಯನ್ನು ಕೂಡಿದ ಜನದಲ್ಲಿ ಅವಮಾನಗೊಳಿಸುತ್ತಿದ್ದಳೆ ...? ನನ್ನನ್ನು ಅವಮಾನಪಡಿಸಲಿ ... 'ಸವತಿ ಮತ್ಸರ' ಎಂದು ಸಮಾಧಾನ ಹಚ್ಚಿಕೊಳ್ಳಬಹುದು.... ನನ್ನನ್ನು ಕೀಳುಗಳೆಯಲಿ....ಹೊಟ್ಟೆಯಲ್ಲಿ ತುಂಬಿದ ಕೋಪ ಯಾರ ಮೇಲೂ ಎಲ್ಲರ ಮೇಲೂ ಹರಿಹಾಯುತ್ತದೆ ಎಂದುಕೊಳ್ಳಬಹುದು.... ಆದರೆ ಪತಿಯ ಅವಮಾನ...!"

"...ಅವರವಳಾಗಿಯೇ ಮನೆಯಲ್ಲಿ ಅವರಿಗಾಗಿ ಕಾಯುತ್ತದೆ?" . .

....ಸುಮಿತ್ರಾ....ಏನೂ ಮಾಡಲು ಸಾಧ್ಯವಿಲ್ಲ...ಎಲ್ಲವನ್ನು ನೋಡುವದು... ಜಗದ ಒಂದೊಂದು ವ್ಯಕ್ತಿಯ ವಿಚಿತ್ರತೆಯನ್ನು, ಅವರ ಕುಣಿದಾಟವನ್ನು ನೋಡುವದು ...ಅನುಭವಿಸುವದು..... ಎಲ್ಲವನ್ನು ಮರೆಯುವದು ... ಎಲ್ಲವನ್ನು ಮರೆಯುವದು..."

ಎಲ್ಲವನ್ನು ಮರೆಯುವದು....ಎಂದು ಕಾಮಿನಿ ಹೇಳುವಳು. ಆದರೆ ಹೇಗೆ ಮರೆಯಲಿ? ಯಾವ ರೀತಿಯಾಗಿ ಮರೆಯಲಿ ಯಾವ ಕಾರ್ಯದಲ್ಲಿ ಮಗ್ನಳಾಗಿ ಮರೆಯಲಿ.... ? .... ಎಷ್ಟೊಂದು ಮರೆಯಲಿ .. ? ಎಲ್ಲಿಯ ಹೀಗೆಯೇ ಮರೆಯುತ್ತ ಹೋಗಲಿ.... ?

ಇವು ಮರೆಯುವ ಕಾರ್ಯಗಳೆ...?

ಮರೆಯುವದು ಕ್ಷುಲ್ಲಕ ಸಂಗತಿಯನ್ನು, ಕ್ಷುದ್ರ ಸಂಗತಿಯನ್ನು....

ನನ್ನ ಆಯುಷ್ಯದ ಆಧಾರ ಕಲ್ಲುಗಳೇ ಇವು. ಇವನ್ನು ಬೀಸಾಕಿ ಹೇಗೆ ಬದುಕು ? ಬದುಕುವದು ಸಾಧ್ಯವೆ....? ....ಸಾಧ್ಯವೆ....?

ಬದುಕುವದೇ ಬೇಡವಾದಾಗ ಅದರ ಸಾಧ್ಯಾಸಾಧ್ಯತೆಗಳ ವಿಚಾರವಾದರೂ ಏಕೆ ..? ಧನವಂತರ ಮನೆಯಲ್ಲಿ ಹುಟ್ಟಿ, ಧನವಂತರ ಹತ್ತಿರ ಬೆಳೆದು, ಧನವಂತರ ಉಡಿಯಲ್ಲಿ ಬಾಳುತ್ತಿರುವಾಗ ನನ್ನ ಅಸ್ತಿತ್ವಕ್ಕೇ ಸುರಂಗ ಹಚ್ಚಿದಂತಾಗಿದೆ....

ಸುರಂಗ ಸಿಡಿದೆದ್ದು ಧನವಂತಿಕೆಯನ್ನು ಸಮೂಲವಾಗಿ ನಾಶ ಮಾಡಿದೆ.... ಇನ್ನು ಉಳಿದುದು ಸುಮಿತ್ರೆಯ ದೇಹ.... ಅಲ್ಲ.... ಶವ....

ಶವವನ್ನು ಕಾಯ್ದಿಡಲು ಸಾಧ್ಯವೆ ...? ಶವವನ್ನು ಮನೆಯಲ್ಲಿಟ್ಟು ಕೊಂಡು ಕೂಡಲು ಸಾಧ್ಯವೆ....? ಶವಕ್ಕೆ ಬೆಲೆ ಇರುವದು ಆಳುವವರು ಇರುವಾಗ... ಕಾಣಲು ಬರುವವರು ಇರುವಾಗ.... ನನಗೆ ಯಾರೂ ಇಲ್ಲ... ಯಾರೂ ಇಲ್ಲ ... ಎಲ್ಲರೂ ನನ್ನನ್ನು ಕಂಡು ಹಾಸ್ಯ ಮಾಡುವವರು... ಕುಚೇಷ್ಟೆ ಮಾಡುವವರು "ಬೀದಿಯ ಬಸವೆ" ಎಂದು ಕೂಗುವವರು....

"ಕಂಡ ಗಂಡಸರ ಮುರಿದು ತಿನ್ನುವವಳು" ಎಂದು ಬೆರಳು ಮಾಡಿ ತೋರಿಸುವವರು....

"ಮಾಧವರಾಯರ ಮನೆಯನ್ನು ಮುರಿದವಳು" ಎಂದು ಹೇಳುವರು.

ನಾನು ಮಾಧವರಾಯರ ಮನೆಯನ್ನು ಮುರಿದೆನೆ....? ಮಾಧವ ರಾಯರ ಮುರಿದ ಮನವನ್ನು ಸರಿಮಾಡಿದವಳಲ್ಲವೆ ...? ಮನೆಗೆ ತಗಲಿದ ಬೆಂಕಿಯಿಂದ ಮಾಧವರಾಯರನ್ನು ಉಳಿಸಿದವಳು ನಾನಲ್ಲವೆ... ?

" ಸುಮಿತ್ರಾ....ಮನಸ್ಸು ವಯಸ್ಸಿನ ಬಂಧನದ ಮೇರೆಯನ್ನು ಹರಿ ದೊಗೆದು ಹೊಂದಿಕೊಂಡದ್ದು ನಿಜಕ್ಕೂ ಆಶ್ಚರ್ಯವಲ್ಲವೆ....?... ನನ್ನನ್ನು ಈ ಪರಿಯಾಗಿ ನೀನು ಆದರಿಸಬಹುದೆಂದು ಕನಸು ಮನಸಿನಲ್ಲಿ ಕೂಡ ಎಣಿಸಿರ ಲಿಲ್ಲ.....ಪತ್ನಿಯಲ್ಲಿ ಆದರವನ್ನು, ಪ್ರೇಮವನ್ನು ಕಾಣದ ನಾನು ಜಗದಲ್ಲಿ ಆದರ ಬರಗಾಲವೆಂದು ಭಾವಿಸಿದ್ದೆ....ಅದು ನನ್ನ ತಪ್ಪೂ ಅಲ್ಲ....ಅದರಿಂದಾಗಿ ....ಪತ್ನಿಯಿಂದಾಗಿ....ನನ್ನ ಮನ...ಮನೆ....... ಎಲ್ಲವೂ ಮುರಿದಿತ್ತು .... ಸುಮಿತ್ರಾ....ನಿನ್ನಿಂದಾಗಿ ಮುರಿದ ಮನ ಮತ್ತೆ ಮೊದಲಿನಂತಾಗಿ ಹೊಸ ತಾರುಣ್ಯದ ಹುರುಪಿನಿಂದ, ಉತ್ಸಾಹದಿಂದ, ಹರ್ಷದಿಂದ ನರ್ತಿಸುತ್ತಿದೆ... ಮನೆ... ಈ ನೀನಿರುವ ನನ್ನ ಮನೆ....ಅಮರಾವತಿಯ ಇಂದ್ರ ಮಹಲಿಗಿಂತ ಹಿಂದಾಗಿದೆ...."

ಎಂದು ಮಾಧವರಾಯರು ನಿತ್ಯವೂ ಗೀತೆ ಪಠಿಸಿದಂತೆ ಹೇಳುತ್ತಿರು ವಾಗ ಅವಳುರಾಕ್ಷಸಿ... ....ನನಗೆ— " ಮನೆಯನ್ನು ಮುರಿದ ಸೂಳೆ ಎಂದಳು...."

ಯಾರು....ಸೂಳೆ... ಎಂದು ನಾನು ಕೇಳಿದ್ದರೆ....?

ಸಭ್ಯಗೃಹಸ್ಥರ ಮಗಳಾಗಿ....ಸಭ್ಯಗೃಹಸ್ಥರ ಮಡದಿಯಾಗಿ ಮನೆ ಸೇರಿದವಳಿಂದ ಮನೆಯ ಮುಖಕ್ಕೆ ಎಂದೆಂದೂ ತೊಳೆಯದ ಆತುರದ

ಕಪ್ಪು ಹಿಡಿದುಕೊಂಡಿದೆ ಎಂದೆಂದಿಗೂ ತೀರದ ಅಮಾವಾಸ್ಯದ ರಾತ್ರಿ, ಹಗಲನ್ನು ಹಿಡಿದುಕೊಂಡಂತೆ! ಮಾಡಿಕೊಂಡವರು ಕೂಡ ಮನೆಯಲ್ಲಿರದೆ ಮರಣ ಹೊಂದಿಯಾದರೂ ಮುಕ್ತರಾಗುವದಕ್ಕೆ ಹವಣಿಸಿದ್ದರು ಅವಳಿಗಾಗಿ.

ಇಂತಹ ರಾಕ್ಷಸಿಯ ಹತ್ತಿರ ಇದ್ದುಕೊಂಡು ಬಾಳುವವರಾದರೂ ಯಾರು....?

"...ಸುಮಿತ್ರಾ...ಅವಳ ನಡತೆ ಅರಿವೂ ನನಗಾಗ ತೊಡಗಿತ್ತು... ಹಲವು ಸ್ನೇಹಿತರಿಂದಲೂ ಅದನ್ನೇ ಕೇಳಿ ಕೋಪದಿಂದ ಒಂದುಸಲ ಅವಳಿಗೆ ಹೇಳಿದೆ...ಅದರ ಪರಿಣಾಮವೆಂದರೆ.... ನನ್ನ ಅನ್ನದಲ್ಲಿ ವಿಷ....! ನನ್ನಿಂದ ಉಪಕೃತನಾದ ಮನೆಯ ಆಳಿನಿಂದ....ನಾನು ಸಾವಧಾನಾಗಿರದಿದ್ದರೆ... ಇಂದಿಗೆ ಸತ್ತು ಅನೇಕ ವರ್ಷಗಳಾಗುತ್ತಿದ್ದವು...." ಎಂದು...ಮಾಧವರಾಯರು ಹೇಳಿ.... "ಅವಳು ಮನುಷ್ಯಳಲ್ಲ....ರಾಕ್ಷಸಿ" ಎಂದು ಹೇಳುತ್ತಾರೆ....

ಅಂತಹ ರಾಕ್ಷಸಿಯ ಕೈಯಲ್ಲಿ ನಾನು ಸಿಕ್ಕೆ....

" ನನಗಾಗಿ ಅಲ್ಲ....ಮನೆಯು ಮನೆಯ ಮರ್ಯಾದೆ ಎಂದು ನಾನು ಕಾಯಬೇಕಾಗಿದೆ.... ದೇಹದ ಬಟ್ಟೆ ಕಳಚುವದರಿಂದ ದೇಹಕ್ಕೆ ಅವಮಾನ ಎಂದು....ಸಹಿಸಬೇಕಾಗಿದೆ... " ಎಂದು— ಹೇಳುವ ಮಾಧವರಾಯರ ಮರ್ಯಾದೆಗೆ ನನ್ನಿಂದ ಅವರ ಅವಮರ್ಯಾದೆ.

ಹೀಗಾಗಬಾರದು... ಹಾಗಾಗಬಾರದಿತ್ತು...... ಇಲ್ಲ... ನಾನವರಿಗೆ ಇನ್ನು ಈ ಹಾಳು ಮುಖ ತೋರಲಾರೆ....ನನ್ನ ಮುಖ ನೋಡುವದಕ್ಕೆ ಅವರಾದರೂ....ಹೇಗೆ ಬರುವರು....

ಈ ಮನೆಯಲ್ಲಿ ಅವರಿಗೆ ಅವಮರ್ಯಾದೆ... ನನ್ನೆದುರು ಅವರ ಅವಮರ್ಯಾದೆ....ಮಾನ ಮರ್ಯಾದೆ ರೀತಿನೀತಿಗಳನ್ನೇ ಅರಿಯದ ಆ ಹೆಂಗಸು ತುಂಬಿದ ಬೀದಿಯಲ್ಲಿ ಗಂಡನನ್ನು ಎಳೆದು ಬರ-ಹೋಗುವವರನ್ನು ಕೂಗಿ....

"ನೋಡಿರಿ....ಮನೆಯಲ್ಲಿ ನನ್ನಂತಹ ಪತ್ನಿಯನ್ನು ಬಿಟ್ಟು ಈ ಸೂಳೆಯ ಜೊತೆಗೆ ಹೇಗೆ ಚಿನ್ನಾಟ ನಡೆಸಿದ್ದಾರೆ..." ಎಂದು ತೋರಿಸುತ್ತಿದ್ದಳು.... ಬೆರಳುಮಾಡಿ....

ಅದರಿಂದಲೇ ಅನಾಹುತ.... ಹಾವಿನ ಹೆಡೆಯನ್ನು ತುಳಿದಾಗ ಅದು

ಬುಸಗುಟ್ಟದೆ ಇದ್ದೀತೇ ..? ಕಚ್ಚದೇ ಬಿಟ್ಟೀತೆ...? ...ಛಿ ....ಕೆಡಕು... ಅನಾಹುತ...

"ಸುಮಿತ್ರಾ.... ಆದುದು ಒಳಿತೆ.... ಕೆಡಕೆ ಎನ್ನುವದನ್ನು ನಿರ್ಣಯಿಸುವದು ಪರಿಣಾಮ.... ಹೀಗಾಗಬಾರದು ಎಂದು ನಾವು ಹೇಳಬಹುದು. ಆದರೆ ಆಗದಂತೆ ನಡೆಯಲು ನಮ್ಮಿಂದ ಸಾಧ್ಯವೆ...?" ಎಂದು ಕಾಮಿನಿ ಕೇಳುತ್ತಾಳೆ.

"ಸುಮಿತ್ರಾ ಯಾವುದೊಂದಕ್ಕೂ ಮಿತಿ ಇರುತ್ತದೆ.... ಶಾಂತ ಸ್ವಭಾವದ ಸಜ್ಜನ ಮಾಧವರಾಯರನ್ನು ಆ ಹೆಂಗಸು ಬೀದಿಯಲ್ಲಿ ನಿಲ್ಲಿಸಿ ಅವಮಾನಪಡಿಸಬಾರದಿತ್ತು... ಅವಳ ಕಲ್ಪನೆ ಮಾಧವರಾಯರೆಂದರೆ ಆಕಳು... ಕೈಗೊಂಬೆ.... ಏನು ಮಾಡಿದರೂ ನಡೆದೀತು ಎಂದು.... ಆದರೆ....? ಆದರೆ ಅದಕ್ಕೆ ಫಲ.... ಅವಳಿಗೆ ದೊರೆತಿತು..."

"....ಮಾಧವರಾಯರು ಅಂತಹ ಕ್ರೂರತನಕ್ಕೆ ಹೋಗಬಾರದಿತ್ತು.... ಆದರೆ ತಳಕ್ಕೆ ಬೆಂಕಿ ಹತ್ತಿದಾಗ ತಡೆಯಲು ಸಾಧ್ಯವೆ ..? ಅವರು ಎಲ್ಲವನ್ನೂ ಸಹಿಸಿದ್ದರು ... ಅವಳ ಅತ್ಯಾಚಾರವನ್ನು ನೋಡಿಯೂ ಉದಾಸೀನರಾಗಿದ್ದರು. ಅವಳ ವ್ಯಭಿಚಾರದ ಅತಿರೇಕವನ್ನು ಕಂಡೂ ಕಣ್ಣು ಮುಚಿದ್ದರು...."

....ಅತ್ಯಾಚಾರ ಮಿತಿ ಮೀರಿದಾಗ ಅದಕ್ಕೆ ಅಂತವಾಗುವದು... ದುರ್ಮಾರ್ಗದ ತಂತಿಯ ಮೇಲಿಂದ ವಿನಾಶ ಕಂದರದಲ್ಲಿ ಬೀಳುವವ ಹೇಗೆ ನರ್ತಿಸಿದರೂ ಬೀಳುವದು ಕಂದರಕ್ಕೆ... ಕೈ ಮಾಡಿ ಕರೆಯುವ ವಿನಾಶದ ಕಂದರದ ತಳಕ್ಕೆ ಸ್ವರ್ಗವೆಂದು ಭಾವಿಸಿ ಅದರತ್ತ ಹೋಗಲು ದಾರಿಯಿಂದ ಹಾರಿಬಿದ್ದರೆ.... ತಪ್ಪು ಯಾರದು....?"

"....ಕುಲಕರ್ಣಿಯವರು ಸನಾತನಿ ಎಂದು ತಿಳಿದು ನಾನು ಅವರ ವಿಚಾರವನ್ನು ತುಂಬ ಟೀಕಿಸಿದಾಗ ಅವರು....

"ತಾಯಿ.... ಬೆಂಕಿಯನ್ನು ಅಂಗೈಯಲ್ಲಿ ಹಿಡಿದು ಅದು ಸುಡುತ್ತದೆ ಎಂದು ಅದರ ಕೋಪವನ್ನು ಇನ್ನೊಬ್ಬರ ಮೇಲೆ ಹರಿಹಾಯ್ದು ಏಕೆ ತೀರಿಸಿಕೊಳ್ಳುವಿರಿ...?" ಎಂದು ಕೇಳಿದ್ದರು.

"ನಾವು ಮಾಡುವ ಕಾರ್ಯದ ಫಲ ನಮಗೆ ದೊರೆಯುತ್ತದೆ.... ಅದ ಕ್ಕಾಗಿ ಇನ್ನೊಬ್ಬರನ್ನು ದೂಷಿಸುವದು ಬೇಡ" ಎಂದೂ ಹೇಳಿದ್ದರು.

"ಅವರು ಹೇಳಿದ್ದು ಕೂಡ ಸತ್ಯವಲ್ಲವೇ....? ... ಸತ್ಯ ... ಸುಮಿತ್ರಾ... ಸತ್ಯ... ಅದಕ್ಕೆ ನಾವು ಕಾರ್ಯ ಮಾಡುವಾಗ ಒಳ್ಳೆಯದನ್ನು ಮಾಡಲಿಕ್ಕಾ ಗದ್ದಿರೂ ಕೆಡಕನ್ನು ಮಾತ್ರ ಮಾಡಬಾರದು.... ಮಾಧವರಾಯರ ಪತ್ನಿಗೆ ಮಾಡುವಾಗ ತಿಳಿಯಲಿಲ್ಲ... ಅದರ ಫಲ... ಈಗ ಅನುಭವಿಸುತ್ತಿರುವಳು.... ಅವಳನ್ನು ನೋಡಿದರೆ.. ಇವಳು ಬದುಕಿರುವದಕ್ಕಿಂತ ಸತ್ತಿರುವದೇ ವಾಸಿ.... ಎನ್ನಿಸುತ್ತದೆ.... ಅವಳ ಮುಖ ನೋಡಲು ಕೂಡ ಆಗುವದಿಲ್ಲ. ಸುಂದರ ನಕ್ಷತ್ರದಂತಹ ಮೊಗ ಛಿನ್ನವಿಚ್ಛಿನ್ನವಾಗಿದೆ.... ಅವಳ ಮುಖ ನೋಡುವಾಗ... ಮಾಧವರಾಯರು ಇಷ್ಟೊಂದು ಕ್ರೂರತನಕ್ಕೆ ಹೋಗಬಾ ರದಿತ್ತು... ಹೋದುದಕ್ಕಾಗಿ ಅವರ ಮೇಲೆ ಕೋಪ ಕೂಡ ಬರುತ್ತದೆ....

"...ಅವರ ವಿಚಾರ ಗೊತ್ತಿದ್ದ ನಾನು ಹೇಗೆ ಅವರ ಮೇಲೆ ಕೋಪಿ ಸಲಿ....? ಅವಳು.... ಬದುಕಲಾರಳಾದರೂ... ತೀವ್ರ ಸಾಯಲಾರಳು... ನಾವು ಮಾಡುವ ಕಾರ್ಯದ ಫಲ ನಮಗೇ ದೊರೆಯುತ್ತದೆ.... "ಸುಮಿತ್ರಾ ಕುಲಕರ್ಣಿಯವರ ಮಾತು ಸುಳ್ಳಲ್ಲ...." ಎಂದು ಕಾಮಿನಿ ಹೇಳುವಳು.

ಆದರೆ ನಾನೇನು ಅಂತಹ ಕೆಡಕು ಕಾರ್ಯವನ್ನು ಮಾಡಿರುವೆ...? ನಾ ನೋಡೆ ಇಂತಹ ಫಲವನ್ನು ಅನುಭವಿಸಬೇಕು....?

ಯಾರಿಗೂ ಏನೂ ಮಾಡಲಿಲ್ಲ, ಯಾರಿಗೂ ಬಯಸಲಿಲ್ಲ. ನಾನು ಸುಖಿಯಾಗಬೇಕೆಂದು ಆಶಿಸಿದೆ....

ಆದರೆ ಆಶೆ .. ನಿರಾಶೆಯಾಯಿತು......

ಆಗಲಿ. ಆಶೆ ನಿರಾಶೆಯಾಗಲಿ ಅದು ನನ್ನ ಮನಕ್ಕೆ ಆಗುವ ವೇದನೆ, ನಿರಾಶೆಯಿಂದ ವ್ಯಕ್ತಿಗೆ ವೇದನೆಯಾಗುವದು....ಆದರೆ ಇದು ನಿರಾಶೆಯ ಜೊತೆಗೆ ಅವಮಾನ.... ಹೃದಯವನ್ನು ಕೊರೆಯುವ ನಿರಾಶೆಯ ವೇದನೆ ಯೊಂದಿಗೆ ದೇಹವನ್ನು ಕೊರೆದು ಛಿದ್ರ ಮಾಡಿದ ಅವಮಾನದ ಅಸಹ್ಯ ವೇದನೆ...

ಸಹನೆಗೂ ಮಿತಿಯಿದೆ. ಸಹಿಸುವದಾದರೂ ಎಲ್ಲಿಯ ವರೆಗೆ......? ಅದಕ್ಕೆ ಅಂತವೆಲ್ಲಿ? ಅದಕ್ಕೆ ಅಂತವಿಲ್ಲವೇ...? ಇಂದಿನಂತೆಯೇ— ಅನಂತ ಕಾಲದ ವರೆಗೂ ಮುಂದುವರಿಯುವದೆ...? ಇಂದಿನ ವರೆಗಿನ ನಿರಾಶೆ.... ಅವಮಾನವೇ ಮತ್ತೆ ಮತ್ತೆ ಪ್ರತಿಧ್ವನಿಯಂತೆ ತಿರುತಿರುಗಿ ನನ್ನ ಆಯುಷ್ಯ ದಲ್ಲಿ ಪುನಃ ಪ್ರವೇಶಿಸುವವೆ....?

ಹಾಗಿದ್ದರೆ ಏಕೆ ಈ ಜನ್ಮ....? ಏಕೆ ಈ ಬಾಳು........? ಬಾಳಿನ ಉದ್ದೇಶ ಬೆಳಕಿನಲ್ಲಿ ಬಾಳುವದು. ಬೆಳಗುವಂತೆ ಬಾಳುವದು... ಬೆಳಗಿ ಬಾಳುವದು. ಅಲ್ಲದೆ ಅಸಹನಾತೀತ ವೇದನೆ, ಯಾತನೆಯ ಕಾರ್ಗತ್ತಲಲ್ಲಿ ಎಡವುತ್ತ ಮುಗ್ಗುತ್ತ ಹೇಗೋ ಮುಂದುವರಿಯುವದಿಲ್ಲ.

ಬೆಳಗಿ ಬಾಳುವ ಆಶೆ ಉಳಿದಿಲ್ಲ ...ನನ್ನ ಬೆಳಕಿನ ಜ್ಯೋತಿ ನಂದಿದೆ... ಎಣ್ಣೆಯಿಲ್ಲದೆ ಉರಿಯುವದಾದರೂ ಎಲ್ಲಿಯವರೆಗೆ....?.... ಎಣ್ಣೆ ಹಾಕಲು ಬಂದವರು ಕೂಡ ಕೈ ಸುಟ್ಟುಕೊಂಡರು....!

ಜ್ಯೋತಿ ಬೆಳಕು ಕೊಡುವದಕ್ಕೆ ಅಲ್ಲದೆ ಕೈ ಸುಡುವದಕ್ಕಲ್ಲ ಬೆಳಕು ಕೊಡಬೇಕಾದ ಜ್ಯೋತಿ ಕೈ ಸುಡತೊಡಗಿದರೆ ತಪ್ಪು ಯಾರದು....? ಜ್ಯೋತಿ ಯದೆ...? ಅಥವಾ ಕೈಗಳದೆ....?

ಉಪಕಾರ ಮಾಡಲು ಬಂದ ಕೈಗಳನ್ನು ಸುಟ್ಟರೆ ಅದು ಜ್ಯೋತಿಯ ಅಪರಾಧ. ಆದರೆ ಜ್ಯೋತಿಯ ಜೀವನವೆಂದರೇನೇ ದಹಿಸುವದು.... ದಹಿ ಸದಿದ್ದರೆ ಅದಕ್ಕೆ ಬಾಳು ಇಲ್ಲ.... ತನ್ನ ಬಾಳು ಧರ್ಮಕ್ಕೆ ಅನುಸರಿಸಿ ನಡೆ ದಾಗ ಅದು ಅಪರಾಧವಾಗಲಾರದು.... ಅಪರಾಧವಾಗಬಾರದು.

ಅಂತೆಯೇ ತಪ್ಪು ಯಾರದೂ ಅಲ್ಲ....ನಾನು ಅಪರಾಧಿನಿಯಲ್ಲ........ ಅಪರಾಧಿನಿಯಲ್ಲ.

ಅಪರಾಧಿನಿಯಲ್ಲದಿದ್ದರೂ ವೇದನೆ ತಪ್ಪಿದ್ದಲ್ಲ. ಈ ಯಾತನೆಯಿಂದ ಮುಕ್ತಿಯಿಲ್ಲ.

ತಾನಾಗಿ ತ್ಯಜಿಸಿದ ಅಪರಾಧಿ ರಂಗನಿಗಾಗಿ ನನ್ನಲ್ಲಿ ವೇದನೆಯಿಲ್ಲ.... ಕ್ರೂರ ವಿಧಿಯೇ ಎಳೆತಕ್ಕೆ ಸಿಕ್ಕು ಆತುರರಾದ ಕುಲಕರ್ಣಿಯವರಿಗಾಗಿ ದುಃಖಿ ಸುವದೂ ಅವರಿಗೆ ಅವಮಾನ. ಆದರೆ....

ಕಮರಿದ ಬಾಳಿನ ಗಿಡಕ್ಕೆ ಅನಂತ ಸಾಹಸ ಮಾಡಿ, ಪರಿಶ್ರಮಪಟ್ಟು ಚಿಗುರೊಡಿಸಿಕೊಂಡ ಮಾಧವರಾಯರ ಬಾಳಿನ ಗಿಡ ಮತ್ತೆ ಆಕಸ್ಮಾತ್ತಾಗಿ ಸಿಡಿಲಿನೇಟಿನಿಂದ ನೆಲಕ್ಕುರುಳಿದ್ದು ನನ್ನನ್ನು ಕೊರೆಯುತ್ತದೆ.......ನನ್ನ ದುಃಖದ ವಿಚಾರ ನನಗಿಲ್ಲ ದುಃಖದಲ್ಲಿಯೇ ಹುಟ್ಟಿ ಬೆಳೆದು ದುಃಖದ ಲ್ಲಿಯೇ ಅಂತಗೊಳ್ಳುವ ನನಗಾಗಿ ನನ್ನಲ್ಲಿ ದುಃಖವಿಲ್ಲ. ಆದರೆ....ಮಾಧವ ರಾಯರು...?

ದೇವರಂತಹ ಮಾಧವರಾಯರ ವಿಚಾರವನ್ನು ನೆನೆದರೆ... ಹೃದಯ ಬಿರಿಯುತ್ತದೆ. ಆಕಳಂತಹ ಸಭ್ಯರಾದ ಅವರು ಕೊಲೆಗಾರರೆಂದು ನ್ಯಾಯಾ ಲಯದಲ್ಲಿ ನಿಲ್ಲಬೇಕೆ....?

ಅವರು ನಿಜಕ್ಕೂ ಕೊಲೆಗಾರರೆ....?

ಆದರೆ ಅವರೇ ಒಪ್ಪಿಕೊಳ್ಳುತ್ತಾರೆ "ತಾವು ಅವಳ ಕೊಲೆ ಮಾಡಲು ಪ್ರಯತ್ನಿಸಿದ್ದು ನಿಜ" ಎಂದು... ಏಕೆ....?

"ಅವರು ಸಿಟ್ಟಿನಿಂದ ತಮ್ಮ ಪತ್ನಿಯ ಕೊಲೆಗಾಗಿ ಪ್ರಯತ್ನಿಸಿದ್ದು ನಿಜ ವಾದರೂ ಅದರಿಂದ ಪಾರಾಗಲು ಸಾಕಷ್ಟು ಸಾಧ್ಯವಿತ್ತು. ಆದರೆ.... ಸುಮಿತ್ರಾ...ನೀನು ಮತ್ತು ನಿನ್ನ ಹೆಸರು ನ್ಯಾಯಾಲಯದಲ್ಲಿ ಬರುವದು ಬೇಡವೆಂದು ಅವರು ಒಪ್ಪಿಕೊಂಡರು.... ತಾವೇ ಕೊಲೆಗಾರರೆಂದು....!" ಎಂದು ಕಾಮಿನಿ ಹೇಳುವಾಗ ಕಾದ ಸೀಸನ್ನು ಸುರುವಿದಂತಾಯಿತು....

ಇದನ್ನೂ ಕೇಳುವದು ನನ್ನ ಹಣೆಯಲ್ಲಿ ಬರೆದಿದ್ದಿತೆ....? ಇದನ್ನು ಕೇಳು ವದಕ್ಕಾಗಿಯೇ.... ನನ್ನ ದೇಹಕ್ಕೆ ಕಿವಿಗಳಿದ್ದವೆ...?

ನನ್ನ ಹೆಸರು ಕೂಡ ನ್ಯಾಯಾಲಯದಲ್ಲಿ ಬಂದರೆ ಅವಮಾನ...! ಅಷ್ಟೊಂದು ಪವಿತ್ರತೆಯನ್ನು ಕಾಣುತ್ತಾರೆ ಅವರು ನನ್ನ ಹೆಸರಿನಲ್ಲಿ....!

ಎಂತಹ ಪ್ರೀತಿ ! ಎಷ್ಟೊಂದು ಸಭ್ಯತೆ !

ಇಂತಹರಿಗೂ ಕೂಡ ಸುಖ ದೊರೆಯಬಾರದೆ....? ಇಂತಹರಿಗೂ ಶಾಂತಿ ದೊರೆಯಬಾರದೇ...? ಇಂತಹರಿಗೂ ಅವಮಾನವಾಗಬೇಕೆ...?

ಇದೂ ಅವರ ಪೂರ್ವ ಜನ್ಮದ ಕರ್ಮವೆ....?

ದೇವಾ ಅವರ ಎಲ್ಲ ಕಷ್ಟವನ್ನೂ ನನಗೆ ಕೊಡು.... ನಾನು ಎಲ್ಲವನ್ನೂ ಅನುಭವಿಸಲು ಸಿದ್ಧಳಿರುವೆ.... ಒಂದು ಅಕ್ಷರ ಕೂಡ ನಿನಗೆ ಹೇಳಲಾರೆ ... ಆದರೆ.... ಅವರನ್ನು ಎಲ್ಲ ಕಷ್ಟದಿಂದ ಮುಕ್ತಮಾಡು...ಅವರಿಗೆ ಅವಮಾನ ವಾಗದಂತೆ ನೋಡಿಕೊ... ಸರ್ವಶಕ್ತ ಪರಮೇಶ್ವರ.... ಯಾವುದೂ ನಿನಗೆ ಅಸಾಧ್ಯವಲ್ಲ.... ನೀನು ಸರ್ವಶಕ್ತ....

ನೀನು ಸರ್ವಶಕ್ತ .. ... ನೀನು ಸರ್ವಜ್ಞ... ನಿನಗೆ ಅರಿಯದ ವಿಷಯವಿಲ್ಲ.... ನಿನಗೆ ಗೊತ್ತಿದೆ ನಾನವರ ಪತ್ನಿ ಎಂದು... ನನ್ನ ಮನದಲ್ಲಿ ಅವರಲ್ಲದೆ ಇನ್ನಾರು ಇಲ್ಲ. ನಾನು ಅವರಿಗಾಗಿ. ಮನೆಯ ಮುಂದೆ ಹಂದರ ಹಾಕಿ ಸನಾಯಿಯ ಸ್ವರದ 'ಮಂಗಲವಾದ್ಯಗಳ ಮಧ್ಯದಲ್ಲಿ ಮಂತ್ರಾಕ್ಷತೆ ಗಳು ನಮ್ಮ ಮೇಲೆ ಬೀಳಲಿಲ್ಲ ಆದರೆ ದೇವಾ... ನಿನ್ನ ವಿಶಾಲ ವಿಶ್ವದ ಅಂಗಳದಲ್ಲಿ ಆಕಾಶದ ಹಂದರದ ಕೆಳಗೆ ದೇವ ದೇವತೆಗಳ ಸಾಕ್ಷಿಯಾಗಿ ನಾನು ಮನದಿಂದ ಅವರನ್ನು ವರಿಸಿರುವೆ.... ದೈಹಿಕ ವಿವಾಹ ದೇಹದ ಜೊತೆಗೆ. ನಮ್ಮದು ಮನಃಪೂರ್ವಕವಾಗಿ, ಮನದ ವಿವಾಹ........ಇದು ಎಂದಿಗೂ ಕಡಿಯಲಾರದು, ಎಂದಿಗೂ ಇದರಿಂದ ಬಿಡುಗಡೆಯಿಲ್ಲ. ಎಂದೆಂದಿಗೂ ನಾನವರ ಪತ್ನಿ. ಅವರು ನನ್ನ ಪತಿ. ನನ್ನ ಹಣೆಯ ಮೇಲಿನ ಕುಂಕುಮ ಅವರಿಗಾಗಿ ..... ದೇವಾ ನನ್ನ ಕುಂಕುಮಕ್ಕೆ ಆಯುಷ್ಯವನ್ನು ಕೊಡು. ದೀರ್ಘಾಯುಷಿ ಮಾಡು....ನನ್ನ ಎಲ್ಲ ಆಯುಷ್ಯವನ್ನೂ ಅವರಿಗೆ ಕೊಡು....ಅವರನ್ನೂ ದೀರ್ಘಾಯುಷಿ ಮಾಡು...ಎಲ್ಲ ಕಷ್ಟದಿಂದ ಮುಕ್ತ ಮಾಡು. ತಂದೆ...ನೀನು....ಕರುಣಾಳು.... ಕರುಣಾನಿಧಿ... ನನ್ನ ಇಂತಹ ಕ್ಷುಲ್ಲಕ ಬೇಡಿಕೆಗೆ ಮನ ಕರಗಲಾರದೆ ? ದ್ರೌಪದಿಯ ಮಾನರಕ್ಷಣೆಗಾಗಿ ಧಾವಿಸಿದವ ನೀನಲ್ಲವೆ....? ....ದ್ರೌಪದಿ ನಿನ್ನ ತಂಗಿಯಾದರೆ ನಾನು ನಿನ್ನ ಮಗಳಲ್ಲವೇ....?....ನಾನು ಅನಾಥೆ...ನನಗೆ ನನ್ನವರೆನ್ನುವವರು ಈ ಜಗ ದಲ್ಲಿ ಯಾರೂ ಇಲ್ಲ...ಈ ಜಗವನ್ನು ವ್ಯಾಪಿಸಿದವ ನೀನೊಬ್ಬನೇ ನನ್ನವ.... ದೇವಾ....ನೀನೂ ನನ್ನ ಕೈ ಬಿಡಬೇಡ....

....ನನ್ನ ಕಷ್ಟದ ವಿಚಾರ ನಿನಗೆ ಅರಿಯದೆ....?....ದೇವಾ ಒಳ್ಳೆಯವ ಳಾಗಿ ಬಾಳಬೇಕು ಎಂದು ಬಾಳುವೆ ಆರಂಭಿಸಿದರೆ " ಬೀದಿಯ ಬಸವೆ "

ಎನ್ನಿಸಿಕೊಂಡೆ... ಬೀದಿಯಲ್ಲಿ ಅಪಹಾಸ್ಯ....ಅವಮಾನ... ಯಾರಿಗೂ ಮುಖ ತೋರಿಸುವಂತಿಲ್ಲ....ದೇವಾ....ನಾನು ಯಾರಿಗೂ ಮುಖ ತೋರಿಸಲಾರೆ.... ಕಪ್ಪು ಮುಖವನ್ನು ಯಾರಿಗೆಂದು ತೋರಿಸಲಿ....? ಹೇಗೆ ತೋರಿಸಲಿ....?

....ಯಾವುದಕ್ಕೂ ನನ್ನನ್ನು ದೋಷಿ ಎಂದು ನೀನು ತೆಗಳಬೇಡ... ನನಗೆ ಎಲ್ಲವೂ.... ಇಂದು ಬೇಡವಾಗಿದೆ .... ಎಲ್ಲದರಲ್ಲಿಯೂ ತಿರಸ್ಕಾರ ಮೂಡಿದೆ. ಈ ಜನ....ಅವರ ರೀತಿ ನೀತಿ....! ಸಭ್ಯರು ಬಾಳಲು ಅಯೋಗ್ಯವಿದೆ... ಈ ಜಗದಲ್ಲಿ... ಈ ಜನತೆಯ ಜೊತೆಗೆ ... ಒಳ್ಳೆಯ ರೀತಿಯಿಂದ ಬಾಳಲು ಇಚ್ಛೆ ಮಾಡಿದರೆ ಜನ ಬಾಳನ್ನು ಹಾಳು ಮಾಡಲು ಇಚ್ಛಿಸುತ್ತಾರೆ. ಒಳ್ಳೆಯವರಿಗೂ ಕಲಂಕದ ಕಪ್ಪು •ಹಚ್ಚುತ್ತಾರೆ.... ಮತ್ತೆ ಅಪಹಾಸ್ಯ ಮಾಡುತ್ತಾರೆ ...

ದೇವಾ....ಎಲ್ಲವನ್ನೂ ನೋಡಿಯೂ ಏಕೆ ಮೂಕನಾಗಿ ಕುಳಿತಿರುವೆ? ಎಲ್ಲವನ್ನು ಕಂಡೂ ಕಣ್ಣಮೇಲಿನ ಪಟ್ಟಿಯನ್ನು ಏಕೆ ಬದಿಗೆ ಸರಿಸುವದಿಲ್ಲ....?

ನನ್ನ ಕಣ್ಣೀರು ನಿನ್ನ ಕಣ್ಣಿಗೆ ಬಿದ್ದು ನಿನ್ನ ಹೃದಯದಲ್ಲಿ ಎಲ್ಲಿಯಾದರೂ ಕರುಣೆ ಮೂಡೀತೆಂದು ಕಣ್ಣು ತೆರೆಯದೆ ಇರುವಿಯಾ ...? ನನ್ನನ್ನು ಮರುಗಿಸುವದರಲ್ಲಿಯೇ ನಿನಗೂ ಸುಖವೆನ್ನಿಸುವದೆ... ? ....ದೇವಾ ನೀನು ಮನುಷ್ಯರ ದೇವನಾಗಬೇಡ, ದೇವರ ದೇವನಾಗು ......ಮನುಷ್ಯರನ್ನು ಉದ್ಧಾರ ಮಾಡುವ ದೇವನಾಗು.... ನೀನು ಉದ್ಧಾರ ಕರ್ತ....

" ದೇವ ಎಂದಾಗ ಮನುಷ್ಯರಲ್ಲಿಲ್ಲದ ಗುಣ ಇದ್ದವ ಎಂಬರ್ಥ.... ಆತ ಉದ್ಧಾರಕರ್ತ.... ' ಆತನನ್ನು ಪೂರ್ಣವಾಗಿ ನಂಬಬೇಕು ' ಎಂದು ಕುಲಕರ್ಣಿಯವರು ಹೇಳಿಲ್ಲವೇ....?.... ಕೆಲವೇ ದಿನ ಪೂರ್ವದಲ್ಲಿ ನನ್ನಲ್ಲಿದ್ದ ಚಂಚಲತೆ, ದ್ವೇಷ ನೀನು ಕಂಡಿರಲಿಲ್ಲವೆ...?... ತಂದೆ ಕುಲಕರ್ಣಿಯವರ ಉಪದೇಶದಿಂದಾಗಿ ನಾನು ಆತನನ್ನು ನಂಬಿದೆ .. ಪೂರ್ಣವಾಗಿ.... ಸುಖ ದುಃಖಗಳು ಅವನವೇ ಎಂದು ಅವನಿಗೇ ಒಪ್ಪಿಸಿದೆ.... ಆರಂಭದಲ್ಲಿ ಕಠಿಣವೆನ್ನಿಸಿತು.... ಆದರೆ ಇಂದು...? ಮನಕ್ಕೆ ಶಾಂತಿ ಎನ್ನಿಸುತ್ತದೆ. ಏನೇ ಬರಲಿ, ಯಾವುದೇ ಬರಲಿ ... ಎಲ್ಲವೂ ಅವನದು ಎಂದು ಅವನಿಗೇ ಅರ್ಪಿಸುತ್ತೇನೆ.... ಅಂತೆಯೇ ಯಾವ ಸುಖದ ಆನಂದ, ದುಃಖದ ಕಷ್ಟ ನನ್ನನ್ನು

ಸೋಂಕುವದಿಲ್ಲ...ಮನುಷ್ಯನ ಮೂಲ ಸ್ವಭಾವಕ್ಕನುಸರಿಸಿ ಅನೇಕಸಲ ಅವು ಅಂಟುತ್ತವೆ. ಆದರೂ ಪ್ರಯತ್ನದಿಂದ ಅದರಿಂದ ಬಿಡುಗಡೆ ಮಾಡಿಕೊಳ್ಳ ಬೇಕು... ಇದು ಎಲ್ಲರಿಗೂ ಸಾಧ್ಯವೆಂದು ಹೇಳುವದಿಲ್ಲ. ಆದರೆ ಎಷ್ಟು ಸಾಧ್ಯವೊ ಅಷ್ಟನ್ನು ಮಾಡಲೇಬೇಕು.... ನೀನು....ಎಲ್ಲವನ್ನು ಮರೆಯುವ ದಕ್ಕೆ ಯತ್ನಿಸು. ನಿತ್ಯವೂ ಹಳೆಯದಾಗುವ ವಿಷಯವನ್ನು ಜ್ಞಾಪಿಸಿ ಕೊಂಡು ಅದನ್ನು ನೂತನಗೊಳಿಸಿ, ಆದರಿಂದ ದುಃಖಿಯಾಗುವದರಿಂದ ನೀನು ಏನೂ ದೊರಕಿಸದೆ ಎಲ್ಲವನ್ನೂ ಕಳೆದುಕೊಳ್ಳುವಿ... ನಿನ್ನ ವಯಸ್ಸು ಕಿರಿದಾದರೂ ನಿನ್ನ ಅನುಭವ ಹಿರಿದು. ಎಲ್ಲಿ ಹೋದರೂ ಇಂದು ಸುರಕ್ಷಿತ ವಾಗಿರುವ ಧೈರ್ಯ ನಿನ್ನಲ್ಲಿದೆ ....ನೀನು ಬಾಳಬೇಕು....ಬಾಳಲೇಬೇಕು.... ಕುಲಕರ್ಣಿಯವರು ಕೂಡ ಅದನ್ನೇ....ನಿನಗೆ ಹೇಳಿಲ್ಲವೆ....?.... ಇದು ವೇದ ಕಾಲವಲ್ಲ, ಅಡವಿಯಲ್ಲಿ ಹೋಗಿ ಇರಲು. ಇದಕ್ಕೆ ಇದ್ದ ಸ್ಥಳದಲ್ಲಿಯೇ ಅಡವಿಯನ್ನು - ಅರ್ಥಾತ್ ನಿರ್ಮಾನುಷತೆಯನ್ನು ನಿರ್ಮಿಸಿಕೊಳ್ಳಬೇಕು ಮನುಷ್ಯರನ್ನು... ವಸ್ತುವನ್ನು ಕಂಡು ಮನ ಹರಿದಾಡುತ್ತದೆ ಹರಿದಾ ಡುವ ಮನಸ್ಸನ್ನು ಹರಿದಾಡಗೊಡದಿದ್ದರೆ ಇದ್ದ ಸ್ಥಳವೇ ನಿರ್ಮಾನುಷ ವಾಗುವದು.... ಕಟ್ಟಡವಿಯಾಗುವದು...."

"ಆಸ್ಪತ್ರೆಯಲ್ಲಿ ಮಲಗಿದ ಕುಲಕರ್ಣಿಯವರು " "ಅಮ್ಮಾ" "ಎಂದು ಕೂಗಿದ್ದರು ಒಂದು ಸಲ. ಆಗ್ಗೆ ನನ್ನ-ಅವರ ಪರಿಚಯವಿರಲಿಲ್ಲ. ಎಂದಿನಂತೆ ಧಾವಿಸಿ 'ಏನು?' ಎಂದು ಕೇಳಿದೆ. ನನ್ನ ಕೇಳುವಿಕೆಯಿಂದ ಅವರಿಗೆ ಎಚ್ಚರ. ಕೂಡಲೇ ಹಸನ್ಮುಖದಿಂದ—

"ಕನಸಿನಲ್ಲಿ 'ಅಮ್ಮಾ, ಎಂದು ಕೂಗಿದೆ 'ಅಮ್ಮ' ಪ್ರತ್ಯಕ್ಷಳಾದಳಲ್ಲ.... ನನ್ನ ಭಾಗ್ಯ ಹಿರಿದು" ಎಂದು ಹೇಳಿದರು...ಅವರ ಮಾತೇ ವಿಚಿತ್ರವೆನ್ನಿಸಿ ದವು. ಅವರ ಮಾತು ವಿಲಕ್ಷಣ ಎನ್ನಿಸಿತು ಮಹರ್ಷಿ ಕಪಿಲ ತನ್ನ ತಾಯಿ ದೇವದೂತಿಗೆ ಬೋಧಿಸಿದಂತೆ ಬೋಧಿಸಿದರು.........ನನ್ನನ್ನು ಪಾವನಗೊಳಿ ಸಿದರು... "

"....ಸುಮಿತ್ರಾ... ಅಂತಹರ ಸಹವಾಸ ನಿನಗೂ ದೊರೆತಿದೆ... ನೀನು ಹುಚ್ಚತನ ಮಾಡಿದರೆ ಅವರ ಆತ್ಮಕ್ಕೆ ಶಾಂತಿ ದೊರೆಯುವದೆ....? "

" ಎಂತಹ ಕಾರ್ಯಕ್ಕಾಗಿ ನಿನ್ನ ಜನ್ಮವಾಗಿದೆ ಎನ್ನುವದನ್ನು ನೀನ ರಿಯೆ...ಅದನ್ನು ಅರಿತವ ಪರಮಾತ್ಮ, ಅವನ ಕಾರ್ಯದಲ್ಲಿ ಅಡ್ಡಾಗು ವದು ಬೇಡ...ಸಾಗಲಿ ರಥ....ಸಾಗಲಿ......ದೇವ ಹೇಳುವದು ನಮಗೆ "ಒಳ್ಳೆಯ ಕಾರ್ಯ ಮಾಡು" ಎಂದು. ಆತನ ಆಜ್ಞೆ ಉಲ್ಲಂಘಿಸಿ ಕೆಡಕು ಕಾರ್ಯ ಮಾಡಿದರೆ ಅದರಿಂದ ಅಪಾಯ ನಮಗೆ....ಆತ ನಮಗೆ ಬುದ್ಧಿ ಯನ್ನೂ ಕೊಟ್ಟಿದ್ದಾನೆ... ಅದನ್ನು ಕೊಟ್ಟಿರುವದು ಉಪಯೋಗ ಮಾಡಿಕೊ ಳ್ಳಲಿ ಎಂದು....ವಿಚಾರ ಶಕ್ತಿಯನ್ನು ಆತ ಕೊಟ್ಟಿದಾನೆ....ಒಂದು ವಿಚಾರ ಮಾಡುವಾಗ ಇನ್ನೊಂದು ಅತ್ತ ಇಣಕುತ್ತದೆ. ಇದು ಪ್ರತಿಯೊಬ್ಬರೂ ನಿತ್ಯ ದಲ್ಲಿ ಕಾಣುವ ಸತ್ಯ. ಒಳ್ಳೆಯ ವಿಚಾರ ದೇವನದು. ಅದನ್ನು ಪ್ರತಿಭಟಿ ಸುವ ವಿರೋಧಿ ವಿಚಾರ ಸ್ವಾರ್ಥದ್ದು ಕೆಡಕಿನದು....ರಾಕ್ಷಸನದು........ ದೇವನ ವಿಚಾರದಿಂದ ನಾವು ಮುಂದುವರಿದರೆ ಅದರಿಂದ ಕಲ್ಯಾಣ....... ಅವನ್ನು ಬಿಟ್ಟು ಕ್ಷಣಿಕ ಸ್ವಾರ್ಥದ ರಾಕ್ಷಸಿ ವಿಚಾರ ಹಿಡಿದರೆ....ನಾವು ಸಾಗು ವದು ಸಂಕಟದ ದಾರಿಯಲ್ಲಿ....ದುಃಖದ ದಾರಿಯಲ್ಲಿ...."

" ನಾವು ಮಾಡುವ ಕಾರ್ಯದ ಫಲ ನಮಗೇ ದೊರೆಯುತ್ತದೆ.... ಅದನ್ನು ಅನುಭವಿಸುವವರು ನಾವು ಮಾತ್ರ..."

ಕಾಮಿನಿಯ ಉಪದೇಶ ವೇದಾಂತವಾಗಿರಲಿಲ್ಲ. ಅದು ಜೀವನದ ಲ್ಲಿಯ ಸತ್ಯ ವಿಚಾರವಾಗಿತ್ತು. ಯಾವುದನ್ನು ಆಚರಿಸುವಾಗಲೂ ಒಂದಲ್ಲ. ಎರಡು ಒಂದಕ್ಕೊಂದು ವಿರೋಧಿಯಾದ ಮನಗಳು ಎರಡು ವಿಚಾರವನ್ನು ಮುಂದೆ ಮಾಡುತ್ತವೆ. ಒಂದರ ದಾರಿಯ ವಿರುದ್ಧ ಇನ್ನೊಂದು ದಾರಿ... ಒಂದು ದಾರಿ....ದೇವನತ್ತ....ಇನ್ನೊಂದು ನರಕದ ಕಡೆಗೆ... .... ಇದನ್ನು ನಿತ್ಯವೂ ನಾವು ಕಾಣುತ್ತಿರುವೆವು. ಆದರೂ ಅದನ್ನು ಕುರಿತು ಕೇಳುವದಿಲ್ಲ

" ಕೆಡಕಿನ ವಿರುದ್ಧ ಹೇಳುವವರಾರು " ? ಎಂದು .. ಒಳ್ಳೆಯ ವಿಚಾರ ಮನದಲ್ಲಿ ನುಗ್ಗಿದಾಗ.... ಅದರ ವಿರುದ್ಧ ಮಾತನಾಡುವ ವಿಚಾರಕ್ಕೆ "ನೀನು ಯಾರು ..?" ಎಂದು ಕೇಳುವದಿಲ್ಲ.... ಅಂತೆಯೇ ನಮ್ಮ ದಾರಿ ತಪ್ಪುತ್ತದೆ.. ಅಂತೆಯೇ ಪರಮಾತ್ಮನ ಸ್ವರೂಪವನ್ನು ಅರಿತುಕೊಳ್ಳಲಾಗುವದಿಲ್ಲ....

ನಾನು ಅರಿತುಕೊಂಡು ಸಾಗಬೇಕು.... ದೇವನ ವಿಚಾರವನ್ನು ಅನು ಸರಿಸಿ ಮುಂದುವರಿಯಬೇಕು........

ದೇವನ ಸ್ವರೂಪ, ವಿಚಾರ, ಸತ್ಯ. ಸತ್ಯ ಕಠೋರವೆನ್ನಿಸಿದರೂ ಸತ್ಯವು ಸತ್ಯವೆ! ಅದಕ್ಕಾಗಿ ಅದರಲ್ಲಿ ಮುಚ್ಚು ಮರೆ, ಮೋಹಕತೆ ಇಲ್ಲ. .. ಆದರೆ ರಾಕ್ಷಸಿ ವಿಚಾರದಲ್ಲಿ ಅಸತ್ಯವಡಗಿದೆ. ಅಲ್ಲಿ ಮುಚ್ಚುಮರೆಯಿದೆ ಅಂತೆಯೇ ಅದು ಮೋಹಕವಾಗಿ ತನ್ನತ್ತ ಆಕರ್ಷಿಸಿಕೊಳ್ಳುತ್ತದೆ.

ರಾಕ್ಷಸೀ ವಿಚಾರ ನನಗೆ ಬೇಡ. ಅಂತಹ ಆಕರ್ಷಣೆಯಲ್ಲಿ ನಾನು ಸಿಲುಕಲಾರೆ. ಕಠೋರವಾಗಲಿ, ಕಠಿಣವೆನ್ನಿಸಲಿ....ನನಗೆ ದೇವನ ವಿಚಾರ ವಿರಲಿ. ಅವನು ನನ್ನನ್ನು ಎಲ್ಲದರಿಂದ ಮುಕ್ತಮಾಡುವ.

" ನೀವು ಅವನನ್ನು ನಂಬಿರಿ....ಅವನೆಂದೂ ನಿಮ್ಮ ಕೈಬಿಡಲಾರ...." ಎಂದು ಕುಲಕರ್ಣಿಯವರು ಹೇಳಿರುವರು...

ಪರಮಾತ್ಮ ಏನನ್ನು ಮಾಡಲಿ....

ದೇವಾ.... ನಿನಗೆ... ಶರಣು....

" ಸುಮಿತ್ರಾ ದೇವನಿಗೆ ಶರಣು ಎಂದು ಕೈ ಮುಚ್ಚಿ ಕುಳಿತುಕೊಳ್ಳಲಿ ಕ್ಕಾದೀತೆ....? ನಾವು ಮಾಡುವ ಕರ್ತವ್ಯವನ್ನು ನಾವು ಮಾಡಲೇಬೇಕು..... ದೇವನ ಕಾರ್ಯವೆಂದು .." ಎಂದು ಕಾಮಿನಿ ಹೇಳಿದಾಗ ಮನ ಕೆರಳುತ್ತದೆ.

ಇಲ್ಲ.... ನನ್ನಿಂದ ಇನ್ನು ಏನನ್ನೂ ಮಾಡಲು ಸಾಧ್ಯವಿಲ್ಲ. .... ನನಗೆ ಈ ಜಗದ ಯಾವ ವಿಷಯವೂ ಬೇಡವಾಗಿದೆ ....ಯಾರಿಗಾಗಿ ಮಾಡಬೇಕು?

ನನಗಾಗಿ....?

ನಾನು ಎನ್ನುವ ದೇಹಕ್ಕಾಗಿ ನನಗೇನೂ ಮಾಡುವ ಇಷ್ಟವಿಲ್ಲ........ ಅದರಿಂದಲೇ ನನ್ನ ಅವಸ್ಥೆ ಈ ಗತಿಗೆ ಬಂದಿದೆ ...ದೇಹದ ಬೆನ್ನುಹತ್ತಿ ಮೃಗ ಬಲ ಬೆನ್ನಟ್ಟಿದಂತೆ ಓಡಿದೆ....ಓಡಿದೆ...ದಣಿದೆ....ಕೊನೆಗೆ ನನಗೆ ದೊರೆತದ್ದು ಅವಮಾನ.... ಅಪಹಾಸ್ಯ.... 'ಬೀದಿಯ ಬಸಿವೆ' ಎಂಬ ಸನ್ಮಾನ ..

ಇದಕ್ಕಾಗಿಯೇ ನಾನು ಕರ್ತವ್ಯ ಮಾಡಬೇಕಾದುದು....? ಕರ್ತವ್ಯ ವೆಂದರೇನು....? ದುಡಿಯುವದು ! ದುಡಿಯುವದೆಂದರೆ ದೇಹ ಸವಿಸುವದು. ಅದೂ ದೇಹಕ್ಕಾಗಿ ಮಾತ್ರ.

ದುಡಿಯುವದು ದೇಹದ ಬಾಳಿಕೆಗಾಗಿ ಅಲ್ಲದೆ ಮನದ ತೃಪ್ತಿಗಾಗಿ ಅಲ್ಲ. ಮನದ ವಿರುದ್ಧವಾದರೂ ಕಾರ್ಯ ಮಾಡಲೇಬೇಕು. ಏಕೆಂದರೆ ಕರ್ತವ್ಯ !

ಎಂತಹ ಕರ್ತವ್ಯ....? ಏತಕ್ಕಾಗಿ ಮನದ ವಿರುದ್ಧ ಕರ್ತವ್ಯ...?

ದೇಹಕ್ಕಾಗಿ ಮಾತ್ರ ಅಲ್ಲವೆ........? ಅದನ್ನು ಬಾಳಿಸುವದಕ್ಕೆಂದು ಅಲ್ಲವೆ....? ಅದರ ರಾಕ್ಷಸಿ ಶಕ್ತಿಯೇ ಅಲ್ಲವೆ ನನ್ನನ್ನು ಪಾಪ ಕೂಪದಲ್ಲಿ ಪ್ರಥಮನಲ ತಳ್ಳಿದ್ದು...? ಅಂದು ಪಾಪ ಕೂಪದಲ್ಲಿ ಬಿದ್ದವಳು ಇಂದಿಗೂ ಏಳಲಾರದವಳಾಗಿರುವೆ....

ಕರ್ತವ್ಯವಂತೆ....!

ಬೇಡ....ನನಗಾವ ಕರ್ತವ್ಯವೂ ಇಲ್ಲ...ಎಂತಹ ಕರ್ತವ್ಯಕ್ಕೂ ಬಲಿಯಾಗಿ ಮತ್ತೆ ಬೀದಿಗಿಳಿದು " ಬೀದಿಯ ಬಸಿವೆ " ಯಾಗಲಾರೆ ..

ತಲೆ ಸೀಳುವ ವಿಚಾರದಿಂದ ದೇಹ ಹಣ್ಣಾಗುತ್ತಿತ್ತು. ತೀವ್ರ ಹಣ್ಣಾಗಿ ಹೋಗಬೇಕು. ಎನ್ನಿಸುತ್ತಿತ್ತು.

" ಸುಮಿತ್ರಾ... ....ನಿನ್ನ ಇಂದಿನ ಅವಸ್ಥೆಯನ್ನು ಕುಲಕರ್ಣಿಯವರು ನೋಡಿದ್ದರೆ... ನಿಶ್ಚಯವಾಗಿ ನಿನ್ನನ್ನು ದೂರುತ್ತಿದ್ದರು........ ದೇಹಕ್ಕಾಗಿ ಹಣ್ಣಾಗಬಾರದು, ನಿಜ. ಆದರೆ ದೇಹವನ್ನು ಹಣ್ಣು ಮಾಡುವದು ಕರ್ತವ್ಯವಲ್ಲ... ಹೆತ್ತ ಕೂಸು ಕುರುಪಿಯಾದರೂ ತಾಯಿ ಅದನ್ನು ಬೀಸಾಕುವದಿಲ್ಲ...ಅದಕ್ಕೆ ಅನ್ನ, ನೀರು .. ಕೊಟ್ಟು ಬೆಳೆಯಿಸುತ್ತಾಳೆ...ದೇಹ....ಹೆತ್ತ ಕೂಸು....ಅದನ್ನು ಕಡೆಗಣಿಸುವದು ಪಾಪ......ಇಲ್ಲಿರುವದು ನಿನಗೆ ಅವಮಾನವೆನ್ನಿಸಿದರೆ........ಬೇರೆ ಎಲ್ಲಿಯಾದರೂ ಹೋಗು...ನಾನು ವ್ಯವಸ್ಥೆ ಮಾಡುವೆ..."

ಕಾಮಿನಿ ಮತ್ತೆ ಸಹಾಯಳಾದಳು.

ಒಂದು ಕಾರಿರುಳಿನಲ್ಲಿ ಹೆತ್ತ ತಂದೆ ತಾಯಿಗಳ ಮನೆ ಬಿಟ್ಟಿದ್ದೆ.... ವೃತ್ಯೈವಿಸ ಉಡಿಯಲ್ಲಿ ಸ್ವಷ್ಟವಾಗಿರಲು; ಆದರೆ.... ದುರ್ದೈವವೋ ಸುದೈವವೋ....ನಾನು ಕುಲಕರ್ಣಿಯವರ ಕೈಗೆ ಸಿಕ್ಕು ಇಂದಿನವರೆಗೆ........ ಈ ಊರಿನಲ್ಲಿ ಕಾಲು ಕಳೆದೆ. ಕಡೆಗೆ--

" ಬೀದಿಯ ಬಸಿವೆ " ... " ಸಂಸಾರವನ್ನು ಮಣ್ಣು ಮಾಡಿಸುವ ರಾಕ್ಷಸಿ " ಎನ್ನಿಸಿಕೊಂಡು ಮತ್ತೆ ಹೊರಬರುವೆ

ಹೀಗೆಯೇ ನಡೆದಿದೆ, ಈ ಜೀವನ ಪ್ರಯಾಣ.

ತಲಪುವದೆಲ್ಲಿಗೆ ?

ಗೊತ್ತಿಲ್ಲ... ಕಾಲುಗಳಲ್ಲಿ ಚೈತನ್ಯವಿರುವವರೆಗೆ ಸಾಗುವದು....ಸಾಗುವದು......ಕಾಲುಗಳಲ್ಲಿಯ ಚೈತನ್ಯವಡಗಿದಾಗ ಕುಸಿದು ಬಿದ್ದು ಮಣ್ಣಾಗವದು....

ಕಾಮಿನಿ ಹೊರಡುವಾಗ ಹೇಳಿದಳು—

"ಪತ್ನಿಯ ಕೊಲೆಗಾಗಿ ಪ್ರಯತ್ನಿಸಿದ್ದಕ್ಕೆ ಮಾಧವರಾಯರಿಗೆ ಏಳು ವರ್ಷ ಶಿಕ್ಷೆಯಾಯಿತು.... ಮಾಧವರಾಯರಿಗೆ ಯಾವುದೂ ಭೋಡವಾದರೂ ಅವರಿಂದ ಉಪಕೃತರಾದ ನೂರಾರು ಜನರು...... ಮಾಧವರಾಯರ ಪತ್ನಿ ವ್ಯಭಿಚಾರಿಯಿದ್ದಳು....ಆದಕ್ಕಾಗಿ ಸಿಟ್ಟಿನಲ್ಲಿ ಅವರಿಂದ ಆ ರೀತಿ ಆಚರಣೆಯಾಯಿತೆಂದು ಹೇಳಿದರು...ಆದರಿಂದಲೇ ಬರಿ ಏಳು ವರ್ಷ ಶಿಕ್ಷೆಯಾಯಿತಂತೆ....!" ಎಂದು.

ಅವಳು ಹೇಳುವದು ಎಲ್ಲವೂ ಕೇಳಿಸುತ್ತಿತ್ತು, ಅವಳ ಮುಖದಿಂದ ಹೊರಡುವ ಅಕ್ಷರಗಳು ಒಂದೊಂದಾಗಿ ನನ್ನ ಕಿವಿ ಸೇರುತ್ತಿದ್ದವು

ಗಾಡಿಯು ಸಿಳ್ಳು ಹೊಡೆಯಿತು....

ಬಯಲಿನ ಎದೆಯನ್ನು ಸೀಳುತ್ತ ಗಾಡಿ ಧಾವಿಸುತ್ತಿತ್ತು ನನ್ನನ್ನು ಹೊತ್ತುಕೊಂಡು....ಗಿಡಗಳು ಧಾವಿಸುತ್ತಿದ್ದವು ಅದರ ವೇಗಕ್ಕೆ ಸರಿಯಾಗಿ....

ನನಗೆ ಯಾವುದು ಕಾಣುತ್ತಿರಲಿಲ್ಲ....ಎಲ್ಲೆಲ್ಲಿಯೂ ಎಲ್ಲದರಲ್ಲಿಯೂ ಕಾಣುವದು.......ಕಾಮಿನಿಯ ಮುಖ....ಕಣ್ಣೀರು ತುಂಬಿದರೂ ಕೈಎತ್ತಿ ಬೀಳ್ಕೊಡುವ ಕಾಮಿನಿಯ......ಮುಖ.

ಶುಭ್ರ ಬಟ್ಟೆಯಲ್ಲಿ ದೇವಿಯಂತೆ ನಿಂತ ಆ ಕಾಮಿನಿ "ಸುಮಿತ್ರಾ.... ಕುಲಕರ್ಣಿಯವರು ಹೇಳಿದ್ದಾರೆ. 'ನಿನ್ನನ್ನು ನೋಡಿಕೊ' ಎಂದು........ ಮಾಧವರಾಯರು ಬರೆದಿದ್ದಾರೆ. 'ನಿನ್ನನ್ನು ರಕ್ಷಿಸು' ಎಂದು... ಈ ಇಬ್ಬರ ಇಚ್ಛೆಗಳನ್ನು ನನ್ನಿಂದ ಪೂರ್ಣಗೊಳಿಸುವದು ನಿನ್ನ ಕೈಯಲ್ಲಿದೆ....ಅರಿತು ಕಾರ್ಯಮಾಡು....ನನ್ನ ಗೆಳತಿ....ನಿನ್ನನ್ನು ಎದುರು ಗೊಳ್ಳುವಳು.... ನಿನ್ನ ವ್ಯವಸ್ಥೆ ಮಾಡುವಳು...." ಎಂದು, ಹೇಗೋ ಹೇಳಿದ ಕಾಮಿನಿಯಿಂದ ಮುಂದೆ ಮಾತನಾಡುವದಾಗಲಿಲ್ಲ..... ಕೊರಳು ತಟ್ಟಿಸಿತು....ತುಂಬಿದ ಗಲ್ಲ

ಗಳ ಮೇಲೆ ಕಣ್ಣೀರಿಳಿದಾಗ ನಿಲ್ದಾಣದ ವಿದ್ಯುದ್ದೀಪದ ಬೆಳಕಿನಲ್ಲಿ.... ಮುತ್ತಿ ನಂತೆ ಮಿನಗುತ್ತಿದ್ದವು.

ಅವು ಕಣ್ಣೀರಾಗಿರಲಿಲ್ಲ. ಮಾತೃ ಹೃದಯದ ವಾತ್ಸಲ್ಯ ಕರಗಿ ಕಣ್ಣೀರಿನ ರೂಪದಲ್ಲಿ ನನ್ನನ್ನು ಅಪ್ಪಿಕೊಳ್ಳುವದಕ್ಕೆ ಬಂದಂತಿದ್ದವು.

ಕಾಮಿನಿ...

ಅವಳಿಗಾಗಿ ಏನನ್ನೂ ಹೇಳುವದು ಕಡಿಮೆ.

"ಅಮ್ಮಾ ಽ ಽ ಽ...." ಎಂದು ಕೂಗಬೇಕೆನ್ನಿಸಿತು.

ಅದುವೇ ನನ್ನ ಸರ್ವಭಾವನೆಗಳ ಸಮ್ಮಿಲನದ ಸ್ವರೂಪವಾಗಿದ್ದಿತು.

" ಅಮ್ಮಾ ಽ ಽ...."

ಈ ಎರಡಕ್ಷರಗಳ ಶಬ್ದದಲ್ಲಿ ಎಂತಹ ಶಕ್ತಿ ಎಷ್ಟೊಂದು ಭಾವನೆ ಜಗತ್ತಿನ ಹೃದಯತೆಯ ಸ್ವರೂಪವದು...

ಅಮ್ಮಾ.... ಕಾಮಿನಿ...

× × × × ×

ಅಮ್ಮ ಕಾಮಿನಿ ಎಲ್ಲ ವ್ಯವಸ್ಥೆ ಮಾಡಿದ್ದಳು. ನಾನು ತಲುಪಿದ ಊರಿನಲ್ಲಿ ಕೆಲವೇ ದಿನಗಳಲ್ಲಿ ಅಲ್ಲಿಯ ಮುನಸಿಪಲ್ ಶಾಲೆಯಲ್ಲಿ ಶಿಕ್ಷಕಿಯೂ ಆದೆ ಅದೂ ಕಾಮಿನಿಯ ಗೆಳತಿಯ ಸಹಾಯದಿಂದ.

ದಿವಸಗಳು ಒಂದೊಂದಾಗಿ ಕಳೆಯುತ್ತವೆ. ಯಾರಿಗಾಗಿಯೂ ವೇಳೆ ನಿಲ್ಲುವದಿಲ್ಲ.

ನೀನು ಎಲ್ಲವನ್ನೂ ಮರೆಯಲು ಪ್ರಯತ್ನಿಸುವೆ.

....ಆದರೆ ಯಾವುದನ್ನೂ ಮರೆಯಲಾರದವಳಾಗಿರುವೆ. ಮರೆಯ ಬೇಕೆಂದಷ್ಟು ಹೆಚ್ಚಿಗೆ ನೆನಹಿಗೆ ಬರುತ್ತದೆ.

ಮರೆಯಬಹುದೆ....?

ಮಕ್ಕಳ ಮಧ್ಯದಲ್ಲಿ ಅವರೊಡನೆ ಸಮರಸವಾಗಲು ಪ್ರಯತ್ನಿಸುವೆ.

ಮಕ್ಕಳ ಮುಖ ನೋಡಿದಾಗೆಲ್ಲ—

" ನನ್ನ ಮಗೂ ಬದುಕಿದ್ದರೆ...? "

" ನನ್ನದೂ ಮಗು ಬದುಕಿದ್ದರೆ...."

ಎನ್ನಿಸುತ್ತದೆ....ಆದರ ಜೊತೆಗೆ—

" ನಾನು ನಿನ್ನ ಮಗುವಾಗಿ ಜನ್ಮ ತಾಳುವೆ "

ಎಂದು ಹೇಳಿದ ಕುಲಕರ್ಣಿಯವರ ವಾಕ್ಯ ನೆನಪಿಗೆ ಬರುತ್ತದೆ.

ಆದಕ್ಕೆ ಅಂಟಿಕೊಂಡು ಕಾಮಿನಿ ಹೇಳಿದ—

" ಮಾಧವರಾಯರಿಗೆ ಏಳುವರ್ಷ ಶಿಕ್ಷೆಯಾಗಿದೆ " ಎನ್ನುವದೂ ನೆನಗೆ ಬಂದು ಆನಂತ ದೂರದಲ್ಲಿ ಎಲ್ಲಿಯೋ....ದೂರ....ಅನತಿ ದೂರ....

ನಕ್ಷತ್ರವೊಂದು ಮಿನುಗಿದ ಭಾಸವಾಗುತ್ತದೆ....

ಅದೂ .... ಭಾಸವೆ ... ?

ಭಾ .... ಸ ... ವೆ ........ ?



---